# ಭಾರತದ ಸಂವಿಧಾನ

[14ನೇ ಜನವರಿ 2019 ರಂದು ಇದ್ದಂತೆ]

# THE CONSTITUTION OF INDIA

**[AS ON 14th JANUARY 2019]**


**ಭಾರತ ಸರ್ಕಾರ**

**ಕಾನೂನು ಮತ್ತು ನ್ಯಾಯ ಮಂತ್ರಾಲಯ,**

**ವಿಧಾಯೀ ಇಲಾಖೆ**

**GOVERNMENT OF INDIA**

**Ministry of Law and Justice**

**Legislative Department**

**2019**

**ಭಾರತ ಸಂವಿಧಾನ –** ಇದರ ಇಂಗ್ಲಿಷ್–ಕನ್ನಡ ಆವೃತ್ತಿಯು ಭಾರತ ಸರ್ಕಾರದ ಪರವಾಗಿ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯಿಂದ ಪ್ರಕಟಿತವಾಗಿದೆ.

**BHARATHADA SAMVIDHANA –** English – Kannada Version of Constitution of India; published on behalf of the Government of India by the Directorate, Department of Printing Stationery and Publication, Government of Karnataka, Bengaluru......

First Edition - 1952 - ಮೊದಲನೆಯ ಆವೃತ್ತಿ

Second Edition - 1976 - ಎರಡನೆಯ ಆವೃತ್ತಿ

Third Edition - 1985 - ಮೂರನೆಯ ಆವೃತ್ತಿ

First Diglot Edition - 2001 - ಮೊದಲನೆಯ ದ್ವಿಭಾಷಾ ಆವೃತ್ತಿ

Second Diglot Edition - 2011 - ಎರಡನೆಯ ದ್ವಿಭಾಷಾ ಆವೃತ್ತಿ

Third Diglot Edition - 2019 - ಮೂರನೆಯ ದ್ವಿಭಾಷಾ ಆವೃತ್ತಿ

© **GOVERNMENT OF INDIA**

© **ಭಾರತ ಸರ್ಕಾರ**

**ದ್ವಿಭಾಷಾ ಆವೃತ್ತಿ ಸಿದ್ಧಪಡಿಸಿದ್ದು:** ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗ ಮತ್ತು ಭಾಷಾಂತರ ನಿರ್ದೇಶನಾಲಯ, ಕರ್ನಾಟಕ ಸರ್ಕಾರ.

**Diglot Version Prepared by:** Karnataka Official Language (Legislative) Commission and Directorate of Translations, Government of Karnataka.

## PREFACE

This is the Third English Kannada (diglot) Edition of the Constitution of India. The last edition of Kannada version of Constitution of India was published in the year 2011, on behalf of Government of India, by the Parliamentary Affairs Department, Government of Karnataka incorporating therein amendments made to the Constitution of India up to the Constitution (Ninety Fifth Amendment) Act, 2011.

2. The present diglot edition of the Constitution of India has been prepared by the Parliamentary Affairs Department, Government of Karnataka and the same has been scrutinized and vetted by the Official Languages Wing (Regional Unit), Legislative Department, Ministry of Law and Justice, New Delhi, as a part of the implementation of the decision of the Central Government to make available the Constitution of India and other Central Laws to the general public in their own regional official language to enable them to know the Law of the Land in its true spirit to fulfil the Constitutional mandate.

3. In this Edition, all amendments including the provisions of the Constitution (One Hundred and Third Amendment) Act, 2019 have been incorporated. We hope, this edition will be useful to the members of the Bar, the Bench, the students and the general public.

Dr. G. Narayana Raju,
Secretary to the Government of India.

New Delhi,
11th February, 2019

# ಮುನ್ನುಡಿ

ಇದು, ಭಾರತ ಸಂವಿಧಾನದ ಮೂರನೆಯ ಇಂಗ್ಲೀಷ್–ಕನ್ನಡ (ದ್ವಿಭಾಷಾ) ಆವೃತ್ತಿಯಾಗಿದೆ. ಭಾರತ ಸಂವಿಧಾನದ ಕನ್ನಡದ ಈ ಹಿಂದಿನ ಆವೃತ್ತಿಯು ಭಾರತ ಸರ್ಕಾರದ ಪರವಾಗಿ 2011ರಲ್ಲಿ ಕರ್ನಾಟಕ ಸರ್ಕಾರದ ಸಂಸದೀಯ ವ್ಯವಹಾರಗಳ ಇಲಾಖೆಯು ಪ್ರಕಟಿಸಿದ್ದು, ಇದರಲ್ಲಿ ಸಂವಿಧಾನದ (ತೊಂಭತ್ತೈದನೆಯ ತಿದ್ದುಪಡಿ) ಅಧಿನಿಯಮ, 2011ರವರೆಗೆ ಭಾರತ ಸಂವಿಧಾನಕ್ಕೆ ಆಗಿರುವ ತಿದ್ದುಪಡಿಗಳು ಸೇರ್ಪಡೆಗೊಂಡಿರುತ್ತವೆ.

2. ಕರ್ನಾಟಕ ಸರ್ಕಾರದ ಸಂಸದೀಯ ವ್ಯವಹಾರಗಳ ಇಲಾಖೆಯು ಭಾರತ ಸಂವಿಧಾನದ ಪ್ರಸ್ತುತ ದ್ವಿಭಾಷಾ ಆವೃತ್ತಿಯನ್ನು ಸಿದ್ಧಪಡಿಸಿದ್ದು, ಇದನ್ನು ಭಾರತ ಸರ್ಕಾರದ ಕಾನೂನು ಮತ್ತು ನ್ಯಾಯ ಮಂತ್ರಾಲಯದ ವಿಧಾಯೀ ಇಲಾಖೆ, ರಾಜಭಾಷಾ ವಿಭಾಗ (ಪ್ರಾದೇಶಿಕ ಘಟಕ), ನವದೆಹಲಿ ಪರಿಷ್ಕರಿಸಿದೆ ಮತ್ತು ಪರಿಶೀಲಿಸಿದೆ. ಸಂವಿಧಾನದ ಆಜ್ಞಾಪನೆಯು ಈಡೇರುವ ನಿಟ್ಟಿನಲ್ಲಿ, ದೇಶದ ಕಾನೂನಿನ ಅಂತಃಸತ್ವವನ್ನು ಸಾರ್ವಜನಿಕರು ತಮ್ಮದೇ ಆದ ಪ್ರಾದೇಶಿಕ ಅಧಿಕೃತ ಭಾಷೆಗಳಲ್ಲಿ ಸುಲಭವಾಗಿ ತಿಳಿದು ಕೊಳ್ಳುವುದಕ್ಕೆ ಅನುವಾಗುವ ರೀತಿಯಲ್ಲಿ ಭಾರತದ ಸಂವಿಧಾನ ಮತ್ತು ಇತರೆ ಕೇಂದ್ರ ಕಾನೂನುಗಳು ಪ್ರಾಂತೀಯ ಭಾಷೆಗಳಲ್ಲಿ ಲಭ್ಯವಾಗುವಂತೆ ಮಾಡುವುದು ಕೇಂದ್ರ ಸರ್ಕಾರದ ನೀತಿಯಾಗಿದ್ದು, ಅದನ್ನು ಸಾಕಾರಗೊಳಿಸುವುದು ಆ ನೀತಿಯ ಒಂದು ಭಾಗವಾಗಿದೆ.

3. ಈ ಆವೃತ್ತಿಯಲ್ಲಿ ಸಂವಿಧಾನದ (ಒಂದು ನೂರ ಮೂರನೆಯ ತಿದ್ದುಪಡಿ) ಅಧಿನಿಯಮ, 2019ರವರೆಗೆ ಆಗಿರುವ ಉಪಬಂಧಗಳನ್ನು ಒಳಗೊಂಡು ಎಲ್ಲಾ ತಿದ್ದುಪಡಿಗಳನ್ನು ಸೇರ್ಪಡೆಗೊಳಿಸಲಾಗಿದೆ. ಈ ಆವೃತ್ತಿಯೂ ಸಹ ನ್ಯಾಯವಾದಿಗಳಿಗೆ, ನ್ಯಾಯ ಪೀಠಕ್ಕೆ, ವಿದ್ಯಾರ್ಥಿಗಳಿಗೆ ಹಾಗೂ ಸಾರ್ವಜನಿಕರಿಗೆ ಉಪಯುಕ್ತವಾಗುವುದೆಂದು ನಾವು ನಂಬಿದ್ದೇವೆ.

ಡಾ॥ ಜಿ. ನಾರಾಯಣರಾಜು
ಭಾರತ ಸರ್ಕಾರದ ಕಾರ್ಯದರ್ಶಿ

ನವದೆಹಲಿ

11ನೇ ಫೆಬ್ರವರಿ, 2019

# THE CONSTITUTION OF INDIA

## CONTENTS

# ಭಾರತದ ಸಂವಿಧಾನ

## ವಿಷಯ ಸೂಚಿ

ಪುಟ ಸಂಖ್ಯೆ



### ಭಾಗ – I

### ಒಕ್ಕೂಟ ಮತ್ತು ಅದರ ರಾಜ್ಯ ಕ್ಷೇತ್ರ

**ಅನುಚ್ಛೇದಗಳು**



### ಭಾಗ – II

### ನಾಗರಿಕತ್ವ



### ಭಾಗ– III

### ಮೂಲಭೂತ ಹಕ್ಕುಗಳು

#### ಸಾಮಾನ್ಯ

### *Right to Equality*



### *Right to Freedom*



### *Right against Exploitation*



### *Right to Freedom of Religion*



### *Cultural and Educational Rights*



### *Saving of Certain Laws*

## ಸಮಾನತೆಯ ಹಕ್ಕು



## ಸ್ವಾತಂತ್ರ್ಯದ ಹಕ್ಕು



## ಶೋಷಣೆಯ ವಿರುದ್ಧ ಹಕ್ಕು



## ಧರ್ಮ ಸ್ವಾತಂತ್ರ್ಯದ ಹಕ್ಕು



## ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಹಕ್ಕುಗಳು



## ಕೆಲವು ಕಾನೂನುಗಳನ್ನು ಉಳಿಸುವುದು

## ಸಂವಿಧಾನಾತ್ಮಕ ಪರಿಹಾರೋಪಾಯಗಳ ಹಕ್ಕು



## ಭಾಗ– IV

## ರಾಜ್ಯನೀತಿಯ ನಿರ್ದೇಶಕ ತತ್ವಗಳು

## PART IVA

## FUNDAMENTAL DUTIES



## PART V

## THE UNION

### CHAPTER I— THE EXECUTIVE

#### *The President and Vice-President*

**ಭಾಗ – IVಎ**

**ಮೂಲಭೂತ ಕರ್ತವ್ಯಗಳು**



**ಭಾಗ – V**

**ಒಕ್ಕೂಟ**

**ಅಧ್ಯಾಯ I – ಕಾರ್ಯಾಂಗ**

**ರಾಷ್ಟ್ರಪತಿ ಮತ್ತು ಉಪರಾಷ್ಟ್ರಪತಿ**

### ಮಂತ್ರಿಮಂಡಲ



### ಭಾರತದ ಅಟಾರ್ನಿ ಜನರಲ್



### ಸರ್ಕಾರಿ ವ್ಯವಹಾರ ನಿರ್ವಹಣೆ



## ಅಧ್ಯಾಯ II – ಸಂಸತ್ತು

### ಸಾಮಾನ್ಯ



### ಸಂಸತ್ತಿನ ಅಧಿಕಾರಿಗಳು

**ಕಾರ್ಯಕಲಾಪ ನಿರ್ವಹಣೆ**



**ಸದಸ್ಯರ ಅನರ್ಹತೆಗಳು**



**ಸಂಸತ್ತಿನ ಮತ್ತು ಅದರ ಸದಸ್ಯರ ಅಧಿಕಾರಗಳು, ವಿಶೇಷಾಧಿಕಾರಗಳು ಮತ್ತು ಉನ್ಮುಕ್ತಿಗಳು**



**ವಿಧಾಯೀ ಪ್ರಕ್ರಿಯೆ**

***Procedure in Financial Matters***



***Procedure Generally***



**CHAPTER III — LEGISLATIVE POWERS OF THE PRESIDENT**



**CHAPTER IV — THE UNION JUDICIARY**

## ಹಣಕಾಸು ವಿಷಯಗಳ ಬಗ್ಗೆ ಪ್ರಕ್ರಿಯೆ



## ಸಾಮಾನ್ಯತಃ ಪ್ರಕ್ರಿಯೆ



## ಅಧ್ಯಾಯ – III ರಾಷ್ಟ್ರಪತಿಯ ವಿಧಾಯೀ ಅಧಿಕಾರಗಳು



## ಅಧ್ಯಾಯ – IV ಒಕ್ಕೂಟ ನ್ಯಾಯಾಂಗ

**CHAPTER V — COMPTROLLER AND AUDITOR-GENERAL OF INDIA**

## ಅಧ್ಯಾಯ – V

## ಭಾರತದ ಲೆಕ್ಕ ನಿಯಂತ್ರಕ–ಹಾಗೂ–ಮಹಾ ಲೆಕ್ಕಪರಿಶೋಧಕ

## PART VI

## THE STATES

### CHAPTER I — GENERAL



### CHAPTER II — THE EXECUTIVE

#### *The Governor*



#### *Council of Ministers*



#### *The Advocate-General for the State*



#### *Conduct of Government Business*



### CHAPTER III — THE STATE LEGISLATURE

#### *General*

## ಭಾಗ – VI

## ರಾಜ್ಯಗಳು

### ಅಧ್ಯಾಯ I – ಸಾಮಾನ್ಯ



### ಅಧ್ಯಾಯ II – ಕಾರ್ಯಾಂಗ

### ರಾಜ್ಯಪಾಲ



### ಮಂತ್ರಿಮಂಡಲ



### ರಾಜ್ಯದ ಅಡ್ವೊಕೇಟ್ ಜನರಲ್



### ಸರ್ಕಾರದ ವ್ಯವಹಾರ ನಿರ್ವಹಣೆ



### ಅಧ್ಯಾಯ III – ರಾಜ್ಯ ವಿಧಾನಮಂಡಲ

### ಸಾಮಾನ್ಯ

***Officers of the State Legislature***



***Conduct of Business***

## ರಾಜ್ಯದ ವಿಧಾನಮಂಡಲದ ಅಧಿಕಾರಿಗಳು



## ಕಾರ್ಯಕಲಾಪ ನಿರ್ವಹಣೆ

***Disqualifications of Members***



***Powers, Privileges and Immunities of State Legislatures and their Members***



***Legislative Procedure***



***Procedure in Financial Matters***



***Procedure Generally***

### ಸದಸ್ಯರ ಅನರ್ಹತೆಗಳು



### ರಾಜ್ಯದ ವಿಧಾನಮಂಡಲಗಳ ಮತ್ತು ಅವುಗಳ ಸದಸ್ಯರ ಅಧಿಕಾರಗಳು, ವಿಶೇಷಾಧಿಕಾರಗಳು ಮತ್ತು ಉನ್ಮುಕ್ತಿಗಳು



### ವಿಧಾಯೀ ಪ್ರಕ್ರಿಯೆ



### ಹಣಕಾಸು ವಿಷಯಗಳ ಬಗ್ಗೆ ಪ್ರಕ್ರಿಯೆ



### ಸಾಮಾನ್ಯತಃ ಪ್ರಕ್ರಿಯೆ

**CHAPTER IV — LEGISLATIVE POWER OF THE GOVERNOR**



**CHAPTER V — THE HIGH COURTS IN THE STATES**

## ಅಧ್ಯಾಯ – IV

## ರಾಜ್ಯಪಾಲನ ವಿಧಾಯೀ ಅಧಿಕಾರ



## ಅಧ್ಯಾಯ – V

## ರಾಜ್ಯಗಳ ಉಚ್ಚ ನ್ಯಾಯಾಲಯಗಳು

## ಅಧ್ಯಾಯ VI

## ಅಧೀನ ನ್ಯಾಯಾಲಯಗಳು



## ಭಾಗ – VII

## ಮೊದಲನೆಯ ಅನುಸೂಚಿಯ 'ಬಿ' ಭಾಗದಲ್ಲಿರುವ ರಾಜ್ಯಗಳು



## ಭಾಗ – VIII

## ಒಕ್ಕೂಟ ರಾಜ್ಯಕ್ಷೇತ್ರಗಳು



## ಭಾಗ – IX

## ಪಂಚಾಯತಿಗಳು

**PART IXA**

**THE MUNICIPALITIES**

**ಭಾಗ– IXಎ**

**ಪೌರಸಭೆಗಳು**

## PART IXB

### THE CO-OPERATIVE SOCIETIES



## PART X

### THE SCHEDULED AND TRIBAL AREAS



## PART XI

### RELATIONS BETWEEN THE UNION AND THE STATES

### CHAPTER I — LEGISLATIVE RELATIONS

***Distribution of Legislative Powers***

## ಭಾಗ – IXಬಿ

## ಸಹಕಾರಿ ಸಂಘಗಳು



## ಭಾಗ – X

## ಅನುಸೂಚಿತ ಮತ್ತು ಬುಡಕಟ್ಟು ಪ್ರದೇಶಗಳು



## ಭಾಗ – XI

## ಒಕ್ಕೂಟ ಮತ್ತು ರಾಜ್ಯಗಳ ನಡುವಣ ಸಂಬಂಧಗಳು

## ಅಧ್ಯಾಯ I – ವಿಧಾಯೀ ಸಂಬಂಧಗಳು

## ವಿಧಾಯೀ ಅಧಿಕಾರಗಳ ಹಂಚಿಕೆ

## ಅಧ್ಯಾಯ II – ಆಡಳಿತ ಸಂಬಂಧಗಳು

### ಸಾಮಾನ್ಯ



### ಜಲ ಸಂಬಂಧಿ ವಿವಾದಗಳು



### ರಾಜ್ಯಗಳ ನಡುವೆ ಸಮನ್ವಯ

## PART XII

## FINANCE, PROPERTY, CONTRACTS AND SUITS

### CHAPTER I — FINANCE

***General***

## ಭಾಗ – XII

## ಹಣಕಾಸು, ಸ್ವತ್ತು , ಕರಾರುಗಳು ಮತ್ತು ದಾವೆಗಳು

### ಅಧ್ಯಾಯ I – ಹಣಕಾಸು

### ಸಾಮಾನ್ಯ



### ಒಕ್ಕೂಟ ಮತ್ತು ರಾಜ್ಯಗಳ ನಡುವೆ ರಾಜಸ್ವಗಳ ಹಂಚಿಕೆ



### ಸಂಕೀರ್ಣ ಹಣಕಾಸು ಉಪಬಂಧಗಳು

## ಅಧ್ಯಾಯ – II

## ಸಾಲ ತೆಗೆದುಕೊಳ್ಳುವುದು



## ಅಧ್ಯಾಯ – III

## ಸ್ವತ್ತು, ಕರಾರುಗಳು, ಹಕ್ಕುಗಳು, ಹೊಣೆಗಾರಿಕೆಗಳು, ಬಾಧ್ಯತೆಗಳು ಮತ್ತು ದಾವೆಗಳು



## ಅಧ್ಯಾಯ – IV ಸ್ವತ್ತಿನಹಕ್ಕು

### *PART XIII*

### *TRADE, COMMERCE AND INTERCOURSE WITHIN THE TERRITORY OF INDIA*



### PART XIV

### SERVICES UNDER THE UNION AND THE STATES

### CHAPTER I — SERVICES



### CHAPTER II — PUBLIC SERVICE COMMISSIONS

## ಭಾಗ – XIII

## ಭಾರತದ ರಾಜ್ಯಕ್ಷೇತ್ರದೊಳಗೆ ವ್ಯಾಪಾರ, ವಾಣಿಜ್ಯ ಮತ್ತು ಪರಸ್ಪರ ವ್ಯವಹಾರ



## ಭಾಗ – XIV

## ಒಕ್ಕೂಟದ ಮತ್ತು ರಾಜ್ಯಗಳ ಅಧೀನದಲ್ಲಿನ ಸೇವೆಗಳು

### ಅಧ್ಯಾಯ – I – ಸೇವೆಗಳು



### ಅಧ್ಯಾಯ II – ಲೋಕಸೇವಾ ಆಯೋಗಗಳು

**PART XIV A**

**TRIBUNALS**



**PART XV**

**ELECTIONS**



**PART XVI**

**SPECIAL PROVISIONS RELATING TO CERTAIN CLASSES**

## ಭಾಗ – XIVಎ

## ನ್ಯಾಯಾಧಿಕರಣಗಳು



## ಭಾಗ – XV

## ಚುನಾವಣೆಗಳು



## ಭಾಗ – XVI

## ಕೆಲವು ವರ್ಗಗಳಿಗೆ ಸಂಬಂಧಪಟ್ಟ ವಿಶೇಷ ಉಪಬಂಧಗಳು

## PART XVII

## OFFICIAL LANGUAGE

### CHAPTER I — LANGUAGE OF THE UNION



### CHAPTER II — REGIONAL LANGUAGES



### CHAPTER III — LANGUAGE OF THE SUPREME COURT, HIGH COURTS, ETC.



### CHAPTER IV — SPECIAL DIRECTIVES

## ಭಾಗ– XVII

## ರಾಜಭಾಷೆ

### ಅಧ್ಯಾಯ I – ಒಕ್ಕೂಟದ ಭಾಷೆ



### ಅಧ್ಯಾಯ II – ಪ್ರಾದೇಶಿಕ ಭಾಷೆಗಳು



### ಅಧ್ಯಾಯ – III

### ಸರ್ವೋಚ್ಚ ನ್ಯಾಯಾಲಯ ಮತ್ತು ಉಚ್ಚ ನ್ಯಾಯಾಲಯ ಮುಂತಾದವುಗಳ ಭಾಷೆ



### ಅಧ್ಯಾಯ – IV

### ವಿಶೇಷ ನಿರ್ದೇಶನಗಳು

**PART - XVIII**

**EMERGENCY PROVISIONS**



**PART - XIX**

**MISCELLANEOUS**

## ಭಾಗ – XVIII

## ತುರ್ತು ಪರಿಸ್ಥಿತಿಯ ಉಪಬಂಧಗಳು



## ಭಾಗ – XIX

## ಸಂಕೀರ್ಣ

## PART - XX
## AMENDMENT OF THE CONSTITUTION



## PART - XXI
## TEMPORARY, TRANSITIONAL AND SPECIAL PROVISIONS

## ಭಾಗ- XX

## ಸಂವಿಧಾನದ ತಿದ್ದುಪಡಿ



## ಭಾಗ - XXI

## ತಾತ್ಕಾಲಿಕ, ಮಧ್ಯಕಾಲೀನ ಮತ್ತು ವಿಶೇಷ ಉಪಬಂಧಗಳು

**PART - XXII**

**SHORT TITLE, COMMENCEMENT, AUTHORITATIVE TEXT IN HINDI AND REPEALS**



**SCHEDULES**

**ಪರಿಶಿಷ್ಟ**

# THE CONSTITUTION OF INDIA

## PREAMBLE

WE, THE PEOPLE OF INDIA, having solemnly resolved to constitute India into a [1][SOVEREIGN SOCIALIST SECULAR DEMOCRATIC REPUBLIC] and to secure to all its citizens:

JUSTICE, social, economic and political;
LIBERTY of thought, expression, belief, faith and worship;
EQUALITY of status and of opportunity;

and to promote among them all
FRATERNITY assuring the dignity of the individual and the [2][unity and integrity of the Nation];

IN OUR CONSTITUENT ASSEMBLY this twenty-sixth day of November, 1949, do HEREBY ADOPT, ENACT AND GIVE TO OURSELVES THIS CONSTITUTION.

---

1. Subs. by the Constitution (Forty-second Amendment) Act, 1976, s. 2, for “SOVEREIGN DEMOCRATIC REPUBLIC” (w.e.f. 3-1-1977).
2. Subs. by s. 2, ibid., for “unity of the Nation” (w.e.f. 3-1-1977).

# ಭಾರತದ ಸಂವಿಧಾನ

## ಪ್ರಸ್ತಾವನೆ

**ಭಾರತದ ಜನಗಳಾದ ನಾವು** ಭಾರತವನ್ನು ಒಂದು [1][**ಸಾರ್ವಭೌಮ ಸಮಾಜವಾದೀ ಸರ್ವಧರ್ಮ ಸಮಭಾವದ ಪ್ರಜಾಸತ್ತಾತ್ಮಕ ಗಣರಾಜ್ಯವಾಗಿ**] ರಚಿಸಲು ಮತ್ತು ಅದರ ಸಮಸ್ತ ನಾಗರಿಕರಿಗೆ:

ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ **ನ್ಯಾಯ** ;
ವಿಚಾರ, ಅಭಿವ್ಯಕ್ತಿ, ವಿಶ್ವಾಸ, ಧರ್ಮಶ್ರದ್ಧೆ ಮತ್ತು ಉಪಾಸನಾ **ಸ್ವಾತಂತ್ರ್ಯ** ;
ಸ್ಥಾನಮಾನ ಹಾಗೂ ಅವಕಾಶ **ಸಮಾನತೆ**

ದೊರೆಯುವಂತೆ ಮಾಡಲು ಮತ್ತು ವ್ಯಕ್ತಿ ಗೌರವವನ್ನು, [2][ರಾಷ್ಟ್ರದ ಏಕತೆಯನ್ನು ಹಾಗೂ ಅಖಂಡತೆಯನ್ನು] ಸುನಿಶ್ಚಿತಗೊಳಿಸಿ ಅವರಲ್ಲಿ **ಭ್ರಾತೃಭಾವನೆಯನ್ನು** ವೃದ್ಧಿಗೊಳಿಸಲು ಶ್ರದ್ಧಾಪೂರ್ವಕ ಸಂಕಲ್ಪ ಮಾಡಿದವರಾಗಿ;

**ನಮ್ಮ ಸಂವಿಧಾನ ಸಭೆಯಲ್ಲಿ** 1949ನೆಯ ಇಸವಿ ನವೆಂಬರ್ ತಿಂಗಳ ಇಪ್ಪತ್ತಾರನೆಯ ತಾರೀಖಾದ ಈ ದಿವಸ **ಈ ಮೂಲಕ ಈ ಸಂವಿಧಾನವನ್ನು ಅಂಗೀಕರಿಸಿ, ಅಧಿನಿಯಮಿಸಿ ಅರ್ಪಿಸಿಕೊಂಡಿದ್ದೇವೆ.**

---

1. 1976ನೇ ಇಸವಿಯ ಭಾರತ ಸಂವಿಧಾನ (ನಲವತ್ತೆರಡನೆಯ ತಿದ್ದುಪಡಿ) ಅಧಿನಿಯಮದ 2ನೇ ಪ್ರಕರಣದ ಮೇರೆಗೆ **"ಸಂಪೂರ್ಣ ಪ್ರಭುತ್ವ ಸಂಪನ್ನ ಲೋಕತಂತ್ರಾತ್ಮಕ ಗಣರಾಜ್ಯವಾಗಿ"** ಎಂಬ ಪದಗಳ ಬದಲಾಗಿ (3-1-1977ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.
2. ಮೇಲ್ಕಂಡ ಅಧಿನಿಯಮದ 2ನೇ ಪ್ರಕರಣದ ಮೇರೆಗೆ "ರಾಷ್ಟ್ರದ ಏಕತೆಯನ್ನೂ" ಎಂಬ ಪದಗಳ ಬದಲಾಗಿ (3-1-1977ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.

# PART - I

## THE UNION AND ITS TERRITORY

**1. Name and territory of the Union:-** (1) India, that is Bharat, shall be a Union of States.

[1][(2) The States and the territories thereof shall be as specified in the First Schedule.]

(3) The territory of India shall comprise—

(*a*) the territories of the States;

[2][(*b*) the Union territories specified in the First Schedule; and]

(*c*) such other territories as may be acquired.

**2. Admission or establishment of new States:-** Parliament may by law admit into the Union, or establish, new States on such terms and conditions as it thinks fit.

[3][**2A.** [Sikkim to be associated with the Union.] Rep. by the Constitution (Thirty-sixth Amendment) Act, 1975, s. 5 (w.e.f. 26-4-1975).

**3. Formation of new States and alteration of areas, boundaries or names of existing States:-** Parliament may by law—

(a) form a new State by separation of territory from any State or by uniting two or more States or parts of States or by uniting any territory to a part of any State;

(*b*) increase the area of any State;

(*c*)diminish the area of any State;

(*d*) alter the boundaries of any State;

(*e*) alter the name of any State:

---

1. Subs. by the Constitution (Seventh Amendment) Act, 1956, s. 2, for cl. (2).

2. Subs. by s. 2, *ibid.*, for sub-clause (*b*).

3. Article 2A was ins. by the Constitution (Thirty-fifth Amendment) Act, 1974, s. 2 (w.e.f. 1-3-1975).

## ಭಾಗ - I

## ಒಕ್ಕೂಟ ಮತ್ತು ಅದರ ರಾಜ್ಯಕ್ಷೇತ್ರ

**1. ಒಕ್ಕೂಟದ ಹೆಸರು ಮತ್ತು ರಾಜ್ಯಕ್ಷೇತ್ರ:-** (1) ಇಂಡಿಯಾ, ಅರ್ಥಾತ್ ಭಾರತವು, ರಾಜ್ಯಗಳ ಒಂದು ಒಕ್ಕೂಟವಾಗಿರತಕ್ಕದ್ದು.

[1][(2) ಅದರ ರಾಜ್ಯಗಳು ಮತ್ತು ಅವುಗಳ ರಾಜ್ಯಕ್ಷೇತ್ರಗಳು ಮೊದಲನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂಥವುಗಳು ಆಗಿರತಕ್ಕದ್ದು.]

(3) ಭಾರತದ ರಾಜ್ಯಕ್ಷೇತ್ರವು -

(ಎ) ರಾಜ್ಯಗಳ ರಾಜ್ಯಕ್ಷೇತ್ರಗಳನ್ನು;

[2][(ಬಿ) ಮೊದಲನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಒಕ್ಕೂಟ ರಾಜ್ಯಕ್ಷೇತ್ರಗಳನ್ನು; ಮತ್ತು]

(ಸಿ) ಆರ್ಜಿಸಬಹುದಾದಂಥ ಇತರ ರಾಜ್ಯಕ್ಷೇತ್ರಗಳನ್ನು

- ಒಳಗೊಂಡಿರತಕ್ಕದ್ದು.

**2. ನೂತನ ರಾಜ್ಯಗಳ ಸೇರ್ಪಡೆ ಅಥವಾ ಸ್ಥಾಪನೆ:-** ಸಂಸತ್ತು ಕಾನೂನಿನ ಮೂಲಕ ಸೂಕ್ತವೆಂದು ತೋರುವ ನಿಬಂಧನೆಗಳ ಮತ್ತು ಷರತ್ತುಗಳ ಮೇಲೆ ನೂತನ ರಾಜ್ಯಗಳನ್ನು ಒಕ್ಕೂಟಕ್ಕೆ ಸೇರಿಸಿಕೊಳ್ಳಬಹುದು ಅಥವಾ ನೂತನ ರಾಜ್ಯಗಳನ್ನು ಸ್ಥಾಪಿಸಬಹುದು.

[3][**2ಎ.** [ಒಕ್ಕೂಟದೊಂದಿಗೆ ಸಿಕ್ಕಿಂ ಸಹಯುಕ್ತವಾಗಿರತಕ್ಕದ್ದು.] 1975ನೆಯ ಇಸವಿಯ ಸಂವಿಧಾನದ (ಮೂವತ್ತಾರನೆಯ ತಿದ್ದುಪಡಿ) ಅಧಿನಿಯಮದ 5ನೆಯ ಪ್ರಕರಣದ ಮೇರೆಗೆ (26-4-1975ರಿಂದ ಜಾರಿಗೆ ಬರುವಂತೆ) ನಿರಸಿತವಾಗಿದೆ.

**3. ನೂತನ ರಾಜ್ಯಗಳ ರಚನೆ ಮತ್ತು ಈಗಿರುವ ರಾಜ್ಯಗಳ ಪ್ರದೇಶಗಳ, ಸರಹದ್ದುಗಳ ಅಥವಾ ಹೆಸರುಗಳ ಬದಲಾವಣೆ:-** ಸಂಸತ್ತು ಕಾನೂನಿನ ಮೂಲಕ -

(ಎ) ಯಾವುದೇ ರಾಜ್ಯದಿಂದ ಯಾವುದೇ ರಾಜ್ಯಕ್ಷೇತ್ರವನ್ನು ಪ್ರತ್ಯೇಕಿಸುವುದರಿಂದಾಗಲಿ ಅಥವಾ ಎರಡು ಅಥವಾ ಹೆಚ್ಚು ರಾಜ್ಯಗಳನ್ನು ಅಥವಾ ರಾಜ್ಯಗಳ ಭಾಗಗಳನ್ನು ಒಂದುಗೂಡಿಸುವುದರಿಂದಾಗಲಿ ಅಥವಾ ಒಂದು ರಾಜ್ಯದ ಯಾವುದಾದರೂ ಭಾಗಕ್ಕೆ ಯಾವುದಾದರೂ ಕ್ಷೇತ್ರವನ್ನು ಸೇರಿಸುವುದರಿಂದಾಗಲಿ ಒಂದು ಹೊಸ ರಾಜ್ಯವನ್ನು ರಚಿಸಬಹುದು;

(ಬಿ) ಯಾವುದೇ ರಾಜ್ಯದ ಪ್ರದೇಶವನ್ನು ಹೆಚ್ಚಿಸಬಹುದು;

(ಸಿ) ಯಾವುದೇ ರಾಜ್ಯದ ಪ್ರದೇಶವನ್ನು ಕಡಿಮೆ ಮಾಡಬಹುದು;

(ಡಿ) ಯಾವುದೇ ರಾಜ್ಯದ ಸರಹದ್ದುಗಳನ್ನು ಬದಲಾಯಿಸಬಹುದು;

(ಇ) ಯಾವುದೇ ರಾಜ್ಯದ ಹೆಸರನ್ನು ಬದಲಾಯಿಸಬಹುದು:

---

1. 1956ನೆಯ ಇಸವಿಯ ಸಂವಿಧಾನ (ಏಳನೆಯ ತಿದ್ದುಪಡಿ) ಅಧಿನಿಯಮದ 2ನೆಯ ಪ್ರಕರಣದ ಮೂಲಕ ಮೂಲ (2)ನೆಯ ಖಂಡಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
2. 2ನೆಯ ಪ್ರಕರಣದ ಮೂಲಕ ಮೂಲ (ಬಿ) ಉಪಖಂಡಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
3. 1974ನೆಯ ಇಸವಿಯ ಸಂವಿಧಾನ (ಮೂವತ್ತೈದನೆಯ ತಿದ್ದುಪಡಿ) ಅಧಿನಿಯಮದ 2ನೆಯ ಪ್ರಕರಣದ ಮೂಲಕ ಅನುಚ್ಛೇದ 2ಎಯನ್ನು (1.3.1975 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿತ್ತು.

[1][Provided that no Bill for the purpose shall be introduced in either House of Parliament except on the recommendation of the President and unless, where the proposal contained in the Bill affects the area, boundaries or name of any of the States [2]***, the Bill has been referred by the President to the Legislature of that State for expressing its views thereon within such period as maybe specified in the reference or within such further period as the President may allow and the period so specified or allowed has expired.]

[3]**[*Explanation I.*—** In this article, in clauses *(a)* to *(e)*, "State" includes a Union territory, but in the proviso, "State" does not include a Union territory.

***Explanation II.*—** The power conferred on Parliament by clause *(a)* includes the power to form a new State or Union territory by uniting a part of any State or Union territory to any other State or Union territory.]

**4. Laws made under articles 2 and 3 to provide for the amendment of the First and the Fourth Schedules and supplemental, incidental and consequential matters:-** (1) Any law referred to in article 2 or article 3 shall contain such provisions for the amendment of the First Schedule and the Fourth Schedule as may be necessary to give effect to the provisions of the law and may also contain such supplemental, incidental and consequential provisions (including provisions as to representation in Parliament and in the Legislature or Legislatures of the State or States affected by such law) as Parliament may deem necessary.

(2) No such law as aforesaid shall be deemed to be an amendment of this Constitution for the purposes of article 368.

---

1. Subs. by the Constitution (Fifth Amendment) Act, 1955, s. 2, for the proviso.
2. The words and letters "specified in Part A or Part B of the First Schedule" omitted by the Constitution (Seventh Amendment) Act, 1956, s. 29 and Schedule.
3. Ins. by the Constitution (Eighteenth Amendment) Act, 1966, s. 2.

[1][ಪರಂತು, ಈ ಉದ್ದೇಶಕ್ಕಾಗಿ ಯಾವುದೇ ವಿಧೇಯಕವನ್ನು, ರಾಷ್ಟ್ರಪತಿಯ ಶಿಫಾರಸ್ಸಿನ ಮೇಲಲ್ಲದೆ ಮತ್ತು ಆ ವಿಧೇಯಕದಲ್ಲಿ ಅಡಕವಾದ ಪ್ರಸ್ತಾವವು [2] * * * * ರಾಜ್ಯಗಳ ಪೈಕಿ ಯಾವುದೇ ರಾಜ್ಯದ ಪ್ರದೇಶದ, ಸರಹದ್ದುಗಳ ಅಥವಾ ಹೆಸರಿನ ಮೇಲೆ ಪರಿಣಾಮಬೀರುವಲ್ಲಿ, ಆ ರಾಜ್ಯದ ವಿಧಾನಮಂಡಲವು, ಉಲ್ಲೇಖದಲ್ಲಿ ನಿರ್ದಿಷ್ಟಪಡಿಸಬಹುದಾದ ಅವಧಿಯೊಳಗೆ ಅಥವಾ ರಾಷ್ಟ್ರಪತಿಯು ಕೊಡಬಹುದಾದ ಇನ್ನೂ ಹೆಚ್ಚಿನ ಅವಧಿಯೊಳಗೆ ಅದರ ಬಗ್ಗೆ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಲು, ರಾಷ್ಟ್ರಪತಿಯು ಆ ವಿಧೇಯಕವನ್ನು ಆ ವಿಧಾನಮಂಡಲಕ್ಕೆ ಕಳುಹಿಸಿರುವ ಹೊರತು ಮತ್ತು ಹಾಗೆ ನಿರ್ದಿಷ್ಟಪಡಿಸಿದ ಅವಧಿಯು ಅಥವಾ ಕೊಟ್ಟಿರತಕ್ಕಂಥ ಹೆಚ್ಚಿನ ಅವಧಿಯು ಮುಕ್ತಾಯವಾದ ಹೊರತು, ಸಂಸತ್ತಿನ ಯಾವುದೇ ಸದನದಲ್ಲಿ ಮಂಡಿಸತಕ್ಕದ್ದಲ್ಲ.]

[3][**ವಿವರಣೆ I.**– ಈ ಅನುಚ್ಛೇದದಲ್ಲಿ (ಎ) ಯಿಂದ (ಇ) ವರೆಗಿನ ಖಂಡಗಳಲ್ಲಿರುವ "ರಾಜ್ಯ" ಎಂಬ ಪದವು ಒಕ್ಕೂಟ ರಾಜ್ಯಕ್ಷೇತ್ರವನ್ನು ಒಳಗೊಳ್ಳುತ್ತದೆ; ಆದರೆ ಪರಂತುಕದಲ್ಲಿನ "ರಾಜ್ಯ" ಎಂಬ ಪದವು ಒಕ್ಕೂಟ ರಾಜ್ಯಕ್ಷೇತ್ರವನ್ನು ಒಳಗೊಳ್ಳುವುದಿಲ್ಲ.

**ವಿವರಣೆ II.**– (ಎ) ಖಂಡದಿಂದ ಸಂಸತ್ತಿಗೆ ಪ್ರದತ್ತವಾದ ಅಧಿಕಾರವು, ಯಾವುದೇ ರಾಜ್ಯದ ಅಥವಾ ಒಕ್ಕೂಟ ರಾಜ್ಯಕ್ಷೇತ್ರದ ಒಂದು ಭಾಗವನ್ನು ಇತರ ಯಾವುದೇ ರಾಜ್ಯಕ್ಕೆ ಅಥವಾ ಒಕ್ಕೂಟ ರಾಜ್ಯಕ್ಷೇತ್ರಕ್ಕೆ ಸೇರಿಸಿ ಒಂದು ನೂತನ ರಾಜ್ಯವನ್ನು ಅಥವಾ ಒಂದು ನೂತನ ಒಕ್ಕೂಟ ರಾಜ್ಯಕ್ಷೇತ್ರವನ್ನು ರಚಿಸುವಂಥ ಅಧಿಕಾರವನ್ನು ಒಳಗೊಳ್ಳುತ್ತದೆ.]

**4. ಎರಡನೆಯ ಮತ್ತು ಮೂರನೆಯ ಅನುಚ್ಛೇದಗಳ ಮೇರೆಗೆ ಮಾಡಲಾದ ಕಾನೂನುಗಳು, ಮೊದಲನೆಯ ಮತ್ತು ನಾಲ್ಕನೆಯ ಅನುಸೂಚಿಗಳ ತಿದ್ದುಪಡಿಯ ಬಗ್ಗೆ ಮತ್ತು ಪೂರಕ, ಪ್ರಾಸಂಗಿಕ ಮತ್ತು ಆನುಷಂಗಿಕ ವಿಷಯಗಳ ಬಗ್ಗೆ ಉಪಬಂಧವನ್ನು ಕಲ್ಪಿಸುವುದು:**– (1) 2ನೆಯ ಅನುಚ್ಛೇದದಲ್ಲಿ ಅಥವಾ 3ನೆಯ ಅನುಚ್ಛೇದದಲ್ಲಿ ಉಲ್ಲೇಖಿಸಲಾದ ಯಾವುದೇ ಕಾನೂನು ಆ ಕಾನೂನಿನ ಉಪಬಂಧಗಳನ್ನು ಜಾರಿಗೊಳಿಸುವುದಕ್ಕಾಗಿ, ಮೊದಲನೆಯ ಮತ್ತು ನಾಲ್ಕನೆಯ ಅನುಸೂಚಿಗಳ ತಿದ್ದುಪಡಿಗೆ ಅವಶ್ಯವಾಗಬಹುದಾದಂಥ ಉಪಬಂಧಗಳನ್ನು ಒಳಗೊಂಡಿರತಕ್ಕದ್ದು ಮತ್ತು (ಅಂಥ ಕಾನೂನಿನ ಪರಿಣಾಮಕ್ಕೆ ಒಳಗಾಗಿರುವ ರಾಜ್ಯಕ್ಕೆ ಅಥವಾ ರಾಜ್ಯಗಳಿಗೆ ಸಂಸತ್ತಿನಲ್ಲಿನ ಹಾಗೂ ಅಂಥ ರಾಜ್ಯದ ವಿಧಾನಮಂಡಲದಲ್ಲಿನ ಅಥವಾ ರಾಜ್ಯಗಳ ವಿಧಾನಮಂಡಲಗಳಲ್ಲಿನ ಪ್ರಾತಿನಿಧ್ಯಕ್ಕೆ ಸಂಬಂಧಿಸಿದ ಉಪಬಂಧಗಳು ಒಳಗೊಂಡು) ಸಂಸತ್ತು ಅವಶ್ಯವೆಂದು ಭಾವಿಸಬಹುದಾದಂಥ ಪೂರಕ, ಪ್ರಾಸಂಗಿಕ ಮತ್ತು ಆನುಷಂಗಿಕ ಉಪಬಂಧಗಳು ಸಹ ಆ ಕಾನೂನಿನಲ್ಲಿ ಒಳಗೊಂಡಿರಬಹುದು.

(2) ಹಿಂದೆ ಹೇಳಿದಂಥ ಯಾವುದೇ ಕಾನೂನನ್ನು, 368ನೆಯ ಅನುಚ್ಛೇದದ ಉದ್ದೇಶಗಳಿಗಾಗಿ, ಈ ಸಂವಿಧಾನದ ಒಂದು ತಿದ್ದುಪಡಿಯೆಂದು ಭಾವಿಸತಕ್ಕದ್ದಲ್ಲ.

---

1. 1955ನೆಯ ಇಸವಿಯ ಸಂವಿಧಾನ (ಐದನೆಯ ತಿದ್ದುಪಡಿ) ಅಧಿನಿಯಮದ 2ನೆಯ ಪ್ರಕರಣದ ಮೂಲಕ ಮೂಲ ಪರಂತುಕಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
2. 1956ನೆಯ ಇಸವಿಯ ಸಂವಿಧಾನ (ಏಳನೆಯ ತಿದ್ದುಪಡಿ) ಅಧಿನಿಯಮದ 29ನೆಯ ಪ್ರಕರಣದ ಹಾಗೂ ಅನುಸೂಚಿಯ ಮೂಲಕ "ಮೊದಲನೆಯ ಅನುಸೂಚಿಯ (ಎ) ಅಥವಾ (ಬಿ) ಭಾಗದಲ್ಲಿ ನಿರ್ದಿಷ್ಟಪಡಿಸಿರುವ" ಎಂಬ ಪದಗಳನ್ನು ಮತ್ತು ಅಕ್ಷರಗಳನ್ನು ಬಿಟ್ಟುಬಿಡಲಾಗಿದೆ.
3. 1966ನೆಯ ಇಸವಿಯ ಸಂವಿಧಾನ (ಹದಿನೆಂಟನೆಯ ತಿದ್ದುಪಡಿ) ಅಧಿನಿಯಮದ 2ನೆಯ ಪ್ರಕರಣದ ಮೂಲಕ ಸೇರಿಸಲಾಗಿದೆ.

# PART - II

## CITIZENSHIP

**5. Citizenship at the commencement of the Constitution:-** At the commencement of this Constitution, every person who has his domicile in the territory of India and—

(*a*) who was born in the territory of India; or

(*b*) either of whose parents was born in the territory of India; or

(*c*) who has been ordinarily resident in the territory of India for not less than five years immediately preceding such commencement,

shall be a citizen of India.

**6. Rights of Citizenship of certain persons who have migrated to India from Pakistan:-** Notwithstanding anything in article 5, a person who has migrated to the territory of India from the territory now included in Pakistan shall be deemed to be a citizen of India at the commencement of this Constitution if—

(*a*) he or either of his parents or any of his grandparents was born in India as defined in the Government of India Act, 1935 (as originally enacted); and

(*b*) (*i*) in the case where such person has so migrated before the nineteenth day of July, 1948, he has been ordinarily resident in the territory of India since the date of his migration, or

(*ii*) in the case where such person has so migrated on or after the nineteenth day of July, 1948, he has been registered as a citizen of India by an officer appointed in that behalf by the Government of the Dominion of India on an application made by him therefor to such officer before the commencement of this Constitution in the form and manner prescribed by that Government:

Provided that no person shall be so registered unless he has been resident in the territory of India for at least six months immediately preceding the date of his application.

**7. Rights of Citizenship of certain migrants to Pakistan:-** Notwithstanding anything in articles 5 and 6, a person who has after the first day of March, 1947, migrated from the territory of India to the territory now included in Pakistan shall not be deemed to be a citizen of India:

Provided that nothing in this article shall apply to a person who, after having so migrated to the territory now included in Pakistan, has returned to the territory of India under a permit for resettlement or permanent return issued by or under the authority of any law and every such person shall for the purposes of clause (*b*) of article 6 be deemed to have migrated to the territory of India after the nineteenth day of July, 1948.

## ಭಾಗ – II

## ನಾಗರಿಕತ್ವ

**5. ಸಂವಿಧಾನದ ಪ್ರಾರಂಭದಲ್ಲಿ ನಾಗರಿಕತ್ವ:–** ಈ ಸಂವಿಧಾನದ ಪ್ರಾರಂಭದಲ್ಲಿ ಭಾರತದ ರಾಜ್ಯಕ್ಷೇತ್ರದಲ್ಲಿ ಅಧಿವಾಸವುಳ್ಳ ಮತ್ತು–

(ಎ) ಭಾರತದ ರಾಜ್ಯಕ್ಷೇತ್ರದಲ್ಲಿ ಹುಟ್ಟಿರುವ; ಅಥವಾ

(ಬಿ) ತನ್ನ ತಾಯಿಯಾಗಲಿ, ತಂದೆಯಾಗಲಿ ಭಾರತದ ರಾಜ್ಯಕ್ಷೇತ್ರದಲ್ಲಿ ಹುಟ್ಟಿದ್ದ; ಅಥವಾ

(ಸಿ) ಸಂವಿಧಾನದ ಪ್ರಾರಂಭಕ್ಕೆ ನಿಕಟಪೂರ್ವದಲ್ಲಿ ಐದು ವರ್ಷಗಳಿಗೆ ಕಡಿಮೆ ಇಲ್ಲದಷ್ಟು ಕಾಲದಿಂದ ಭಾರತದ ರಾಜ್ಯಕ್ಷೇತ್ರದಲ್ಲಿ ಸಾಮಾನ್ಯವಾಗಿ ನಿವಾಸಿಯಾಗಿರುವ

– ಪ್ರತಿಯೊಬ್ಬ ವ್ಯಕ್ತಿಯೂ ಭಾರತದ ನಾಗರಿಕನಾಗಿರತಕ್ಕದ್ದು.

**6. ಪಾಕಿಸ್ತಾನದಿಂದ ಭಾರತಕ್ಕೆ ವಲಸೆ ಬಂದಿರುವ ಕೆಲವು ವ್ಯಕ್ತಿಗಳ ನಾಗರಿಕತ್ವದ ಹಕ್ಕುಗಳು:–** 5ನೆಯ ಅನುಚ್ಛೇದದಲ್ಲಿ ಏನೇ ಇದ್ದಾಗ್ಯೂ, ಈಗ ಪಾಕಿಸ್ತಾನದಲ್ಲಿ ಸೇರಿರುವ ರಾಜ್ಯಕ್ಷೇತ್ರದಿಂದ ಭಾರತ ರಾಜ್ಯಕ್ಷೇತ್ರಕ್ಕೆ ವಲಸೆ ಬಂದಿರುವ ಯಾರೇ ವ್ಯಕ್ತಿಯು –

(ಎ) ಅವನಾಗಲಿ, ಅವನ ತಾಯಿ ಅಥವಾ ತಂದೆಯಾಗಲಿ ಅಥವಾ ಅವನ ಅಜ್ಜಿ ಅಥವಾ ತಾತನಾಗಲಿ (ಮೂಲತಃ ಅಧಿನಿಯಮಿಸಿದಂತೆ) ಭಾರತ ಸರ್ಕಾರ ಅಧಿನಿಯಮ, 1935ರಲ್ಲಿ ಪರಿಭಾಷಿಸಿರುವಂತೆ ಭಾರತದಲ್ಲಿ ಹುಟ್ಟಿದ್ದರೆ; ಮತ್ತು

(ಬಿ) (i) ಅಂಥ ವ್ಯಕ್ತಿಯು 1948ನೆಯ ಇಸವಿಯ ಜುಲೈ ತಿಂಗಳ ಹತ್ತೊಂಬತ್ತನೆಯ ತಾರೀಖಿಗಿಂತ ಮುಂಚಿತವಾಗಿ ಹಾಗೆ ವಲಸೆ ಬಂದಿದ್ದ ಸಂದರ್ಭದಲ್ಲಿ, ತಾನು ವಲಸೆ ಬಂದ ತಾರೀಖಿನಿಂದ ಭಾರತದ ರಾಜ್ಯಕ್ಷೇತ್ರದಲ್ಲಿ ಸಾಮಾನ್ಯವಾಗಿ ನಿವಾಸಿಯಾಗಿದ್ದರೆ; ಅಥವಾ

(ii) ಅಂಥ ವ್ಯಕ್ತಿಯು 1948ನೆಯ ಇಸವಿ ಜುಲೈ ತಿಂಗಳ ಹತ್ತೊಂಬತ್ತನೆಯ ತಾರೀಖಿನ ದಿನ ಅಥವಾ ಆ ತರುವಾಯ, ಹಾಗೆ ವಲಸೆ ಬಂದಿದ್ದ ಸಂದರ್ಭದಲ್ಲಿ, ತನ್ನನ್ನು ಭಾರತದ ನಾಗರಿಕನೆಂದು ನೋಂದಾಯಿಸಿಕೊಳ್ಳುವಂತೆ ಆ ಕಾರ್ಯಕ್ಕಾಗಿ ಡೊಮಿನಿಯನ್ ಆಫ್ ಇಂಡಿಯಾ ಸರ್ಕಾರದಿಂದ ನೇಮಕಗೊಂಡಿರುವ ಅಧಿಕಾರಿಗೆ ಈ ಸಂವಿಧಾನದ ಪ್ರಾರಂಭಕ್ಕೆ ಮೊದಲು, ಆ ಸರ್ಕಾರವು ನಿಯಮಿಸಿರುವಂಥ ನಮೂನೆಯಲ್ಲಿ ಮತ್ತು ರೀತಿಯಲ್ಲಿ ಸಲ್ಲಿಸಿದ ಅರ್ಜಿಯ ಮೇಲೆ ಆ ಅಧಿಕಾರಿಯು ಅವನನ್ನು ಆ ರೀತಿಯಾಗಿ ನೋಂದಾಯಿಸಿಕೊಂಡಿದ್ದರೆ

– ಈ ಸಂವಿಧಾನವು ಪ್ರಾರಂಭವಾದಂದಿನಿಂದ, ಅವನನ್ನು ಭಾರತದ ನಾಗರಿಕನೆಂಬುದಾಗಿ ಭಾವಿಸತಕ್ಕದ್ದು:

ಪರಂತು, ಯಾರೇ ವ್ಯಕ್ತಿಯು, ಅವನ ಅರ್ಜಿಯ ತಾರೀಖಿಗೆ ನಿಕಟಪೂರ್ವದಲ್ಲಿ ಕನಿಷ್ಠ ಪಕ್ಷ ಆರು ತಿಂಗಳ ಕಾಲ ಭಾರತದ ರಾಜ್ಯಕ್ಷೇತ್ರದ ನಿವಾಸಿಯಾಗಿಲ್ಲದಿದ್ದರೆ, ಅವನನ್ನು ಹಾಗೆ ನೋಂದಾಯಿಸಿಕೊಳ್ಳತಕ್ಕದ್ದಲ್ಲ.

**7. ಪಾಕಿಸ್ತಾನಕ್ಕೆ ವಲಸೆಹೋದ ಕೆಲವು ವ್ಯಕ್ತಿಗಳ ನಾಗರಿಕತ್ವದ ಹಕ್ಕುಗಳು:–** 5ನೆಯ ಮತ್ತು 6ನೆಯ ಅನುಚ್ಛೇದಗಳಲ್ಲಿ ಏನೇ ಇದ್ದಾಗ್ಯೂ, 1947ನೆಯ ಇಸವಿ ಮಾರ್ಚ್ ತಿಂಗಳ ಮೊದಲನೆಯ ತಾರೀಖಿನ ತರುವಾಯ ಭಾರತದ ರಾಜ್ಯಕ್ಷೇತ್ರದಿಂದ ಈಗ ಪಾಕಿಸ್ತಾನದಲ್ಲಿ ಸೇರಿರುವ ರಾಜ್ಯಕ್ಷೇತ್ರಕ್ಕೆ ವಲಸೆ ಹೋದ ಯಾರೇ ವ್ಯಕ್ತಿಯನ್ನು ಭಾರತದ ನಾಗರಿಕನೆಂಬುದಾಗಿ ಭಾವಿಸತಕ್ಕದ್ದಲ್ಲ:

ಪರಂತು, ಈಗ ಪಾಕಿಸ್ತಾನದಲ್ಲಿ ಸೇರಿರುವ ರಾಜ್ಯಕ್ಷೇತ್ರಕ್ಕೆ ಹಾಗೆ ವಲಸೆ ಹೋಗಿದ್ದು, ಮತ್ತೆ ನೆಲೆಸುವುದಕ್ಕಾಗಿ ಅಥವಾ ಖಾಯಂ ಆಗಿ ಹಿಂತಿರುಗುವುದಕ್ಕಾಗಿ ಯಾವುದೇ ಕಾನೂನಿನ ಪ್ರಾಧಿಕಾರದ ಮೂಲಕ ಅಥವಾ ಅದರ ಮೇರೆಗೆ ಕೊಡಲಾದ ರಹದಾರಿಯ ಪ್ರಕಾರ ಭಾರತದ ರಾಜ್ಯಕ್ಷೇತ್ರಕ್ಕೆ ವಾಪಸ್ಸು ಬಂದ ಯಾವ ವ್ಯಕ್ತಿಗೇ ಆಗಲೀ, ಈ ಅನುಚ್ಛೇದದಲ್ಲಿ ಹೇಳಿರುವುದು ಯಾವುದೂ ಅನ್ವಯಿಸತಕ್ಕದ್ದಲ್ಲ ಮತ್ತು ಅಂಥ ಪ್ರತಿಯೊಬ್ಬ ವ್ಯಕ್ತಿಯನ್ನು 6ನೆಯ ಅನುಚ್ಛೇದದ (ಬಿ) ಖಂಡದ ಉದ್ದೇಶಗಳಿಗಾಗಿ 1948ನೆಯ ಇಸವಿ ಜುಲೈ ತಿಂಗಳ ಹತ್ತೊಂಬತ್ತನೆಯ ತಾರೀಖಿನ ತರುವಾಯ ಭಾರತದ ರಾಜ್ಯಕ್ಷೇತ್ರಕ್ಕೆ ವಲಸೆ ಬಂದವನೆಂದು ಭಾವಿಸತಕ್ಕದ್ದು.

**8. Rights of citizenship of certain persons of Indian origin residing outside India:-** Notwithstanding anything in article 5, any person who or either of whose parents or any of whose grandparents was born in India as defined in the Government of India Act, 1935 (as originally enacted), and who is ordinarily residing in any country outside India as so defined shall be deemed to be a citizen of India if he has been registered as a citizen of India by the diplomatic or consular representative of India in the country where he is for the time being residing on an application made by him therefor to such diplomatic or consular representative, whether before or after the commencement of this Constitution, in the form and manner prescribed by the Government of the Dominion of India or the Government of India.

**9. Persons voluntarily acquiring citizenship of a foreign State not to be citizens:-** No person shall be a citizen of India by virtue of article 5, or be deemed to be a citizen of India by virtue of article 6 or article 8, if he has voluntarily acquired the citizenship of any foreign State.

**10. Continuance of the rights of citizenship:-** Every person who is or is deemed to be a citizen of India under any of the foregoing provisions of this Part shall, subject to the provisions of any law that may be made by Parliament, continue to be such citizen.

**11. Parliament to regulate the right of citizenship by law:-** Nothing in the foregoing provisions of this Part shall derogate from the power of Parliament to make any provision with respect to the acquisition and termination of citizenship and all other matters relating to citizenship.

**8. ಭಾರತದ ಹೊರಗೆ ವಾಸಿಸುತ್ತಿರುವ ಭಾರತೀಯ ಮೂಲದ ಕೆಲವು ವ್ಯಕ್ತಿಗಳ ನಾಗರಿಕತ್ವದ ಹಕ್ಕುಗಳು:-** 5ನೆಯ ಅನುಚ್ಛೇದದಲ್ಲಿ ಏನೇ ಇದ್ದಾಗ್ಯೂ, ಯಾರೇ ವ್ಯಕ್ತಿಯು ತಾನಾಗಲಿ ಅಥವಾ ತನ್ನ ತಾಯಿ ಅಥವಾ ತಂದೆಯಾಗಲಿ ಅಥವಾ ತನ್ನ ಅಜ್ಜಿ ಅಥವಾ ತಾತನಾಗಲಿ (ಮೂಲತಃ ಅಧಿನಿಯಮಿಸಲಾದಂತೆ) ಭಾರತ ಸರ್ಕಾರ ಅಧಿನಿಯಮ, 1935ರಲ್ಲಿ ಪರಿಭಾಷಿತವಾಗಿರುವಂತೆ ಭಾರತದಲ್ಲಿ ಹುಟ್ಟಿದ್ದು ಭಾರತದ ಹೊರಗಿನ ದೇಶವೆಂದು ಪರಿಭಾಷಿತವಾಗಿರುವಂಥ ಯಾವುದೇ ದೇಶದಲ್ಲಿ ಸಾಮಾನ್ಯವಾಗಿ ವಾಸಿಸುತ್ತಿದ್ದರೆ, ಅಂಥ ವ್ಯಕ್ತಿಯು ಡೊಮಿನಿಯನ್ ಆಫ್ ಇಂಡಿಯಾ ಸರ್ಕಾರವು ಅಥವಾ ಭಾರತ ಸರ್ಕಾರವು ನಿಯಮಿಸಿದ ನಮೂನೆಯಲ್ಲಿ ಮತ್ತು ರೀತಿಯಲ್ಲಿ, ತಾನು ತತ್ಕಾಲದಲ್ಲಿ ವಾಸಿಸುತ್ತಿರುವ ದೇಶದಲ್ಲಿನ ಭಾರತದ ರಾಜತಾಂತ್ರಿಕ ಪ್ರತಿನಿಧಿಗೆ ಅಥವಾ ಕಾನ್ಸುಲರ್ ಪ್ರತಿನಿಧಿಗೆ, ಈ ಸಂವಿಧಾನದ ಪ್ರಾರಂಭಕ್ಕೆ ಮುಂಚಿತವಾಗಿ ಆಗಲಿ ಅಥವಾ ತರುವಾಯ ಆಗಲಿ ಅರ್ಜಿಯನ್ನು ಸಲ್ಲಿಸಿ, ಆ ಪ್ರತಿನಿಧಿಯಿಂದ ತಾನು ಭಾರತದ ನಾಗರಿಕನೆಂದು ನೋಂದಾಯಿಸಿಕೊಂಡಿದ್ದರೆ, ಅಂಥ ವ್ಯಕ್ತಿಯನ್ನು ಭಾರತದ ನಾಗರಿಕನೆಂಬುದಾಗಿ ಭಾವಿಸತಕ್ಕದ್ದು.

**9. ಸ್ವಯಿಚ್ಛೆಯಿಂದ ವಿದೇಶಿ ರಾಜ್ಯದ ನಾಗರಿಕತ್ವವನ್ನು ಪಡೆದವರು ಭಾರತದ ನಾಗರಿಕರಲ್ಲ:-** ಯಾರೇ ವ್ಯಕ್ತಿಯು ಸ್ವಯಿಚ್ಛೆಯಿಂದ ಯಾವುದೇ ವಿದೇಶಿ ರಾಜ್ಯದ ನಾಗರಿಕತ್ವವನ್ನು ಪಡೆದಿದ್ದರೆ, 5ನೆಯ ಅನುಚ್ಛೇದದ ಆಧಾರದ ಮೇಲೆ ಅವನು ಭಾರತದ ನಾಗರಿಕನಾಗತಕ್ಕದ್ದಲ್ಲ ಅಥವಾ 6ನೆಯ ಅನುಚ್ಛೇದದ ಅಥವಾ 8ನೆಯ ಅನುಚ್ಛೇದದ ಆಧಾರದ ಮೇಲೆ ಅವನನ್ನು ಭಾರತದ ನಾಗರಿಕನೆಂದು ಭಾವಿಸತಕ್ಕದ್ದಲ್ಲ.

**10. ನಾಗರಿಕತ್ವದ ಹಕ್ಕುಗಳ ಮುಂದುವರಿಕೆ:-** ಈ ಭಾಗದಲ್ಲಿ ಹಿಂದೆ ಹೇಳಿರುವ ಯಾವುದೇ ಉಪಬಂಧದ ಮೇರೆಗೆ ಭಾರತದ ನಾಗರಿಕನಾಗಿರುವ ಅಥವಾ ಭಾರತದ ನಾಗರಿಕನೆಂದು ಭಾವಿಸಲಾಗಿರುವ ಪ್ರತಿಯೊಬ್ಬ ವ್ಯಕ್ತಿಯೂ, ಸಂಸತ್ತು ಮಾಡಬಹುದಾದ ಯಾವುದೇ ಕಾನೂನಿನ ಉಪಬಂಧಗಳಿಗೆ ಒಳಪಟ್ಟು, ಭಾರತದ ನಾಗರಿಕನಾಗಿ ಮುಂದುವರಿಯತಕ್ಕದ್ದು.

**11. ಸಂಸತ್ತು ನಾಗರಿಕತ್ವದ ಹಕ್ಕನ್ನು ಕಾನೂನಿನ ಮೂಲಕ ವಿನಿಯಮಿಸುವುದು:-** ಈ ಭಾಗದಲ್ಲಿ ಹಿಂದೆ ಹೇಳಿರುವ ಉಪಬಂಧಗಳಲ್ಲಿ ಇರುವುದು ಯಾವುದೂ, ನಾಗರಿಕತ್ವದ ಆರ್ಜನೆಯ ಮತ್ತು ಸಮಾಪ್ತಿಯ ಬಗ್ಗೆ ಮತ್ತು ನಾಗರಿಕತ್ವಕ್ಕೆ ಸಂಬಂಧಪಟ್ಟ ಇತರ ಎಲ್ಲಾ ವಿಷಯಗಳ ಬಗ್ಗೆ ಯಾವುದೇ ಉಪಬಂಧವನ್ನು ಮಾಡಲು ಸಂಸತ್ತಿಗಿರುವ ಅಧಿಕಾರವನ್ನು ಅಲ್ಪೀಕರಿಸತಕ್ಕದ್ದಲ್ಲ.

# PART - III

## FUNDAMENTAL RIGHTS

### *General*

**12. Definition:-** In this Part, unless the context otherwise requires, "the State" includes the Government and Parliament of India and the Government and the Legislature of each of the States and all local or other authorities within the territory of India or under the control of the Government of India.

**13. Laws inconsistent with or in derogation of the fundamental rights:- (**1) All laws in force in the territory of India immediately before the commencement of this Constitution, in so far as they are inconsistent with the provisions of this Part, shall, to the extent of such inconsistency, be void.

(2) The State shall not make any law which takes away or abridges the rights conferred by this Part and any law made in contravention of this clause shall, to the extent of the contravention, be void.

(3) In this article, unless the context otherwise requires,—

(*a*) "law" includes any Ordinance, order, bye-law, rule, regulation, notification, custom or usage having in the territory of India the force of law;

(*b*) "laws in force" includes laws passed or made by a Legislature or other competent authority in the territory of India before the commencement of this Constitution and not previously repealed, notwithstanding that any such law or any part thereof may not be then in operation either at all or in particular areas.

[1][(4) Nothing in this article shall apply to any amendment of this Constitution made under article 368.]

### *Right to Equality*

**14. Equality before law:-** The State shall not deny to any person equality before the law or the equal protection of the laws within the territory of India.

**15. Prohibition of discrimination on grounds of religion, race, caste, sex or place of birth:-** (1) The State shall not discriminate against any citizen on grounds only of religion, race, caste, sex, place of birth or any of them.

---

1. Ins. by the Constitution (Twenty-fourth Amendment) Act, 1971, s. 2.

# ಭಾಗ – III

## ಮೂಲಭೂತ ಹಕ್ಕುಗಳು

### ಸಾಮಾನ್ಯ

**12. ಪರಿಭಾಷೆ:–** ಈ ಭಾಗದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು, "ರಾಜ್ಯ" ಎಂಬ ಪದವು ಭಾರತದ ಸರ್ಕಾರವನ್ನು ಮತ್ತು ಸಂಸತ್ತನ್ನು ಮತ್ತು ರಾಜ್ಯಗಳಿಗೆ ಸಂಬಂಧಿಸಿದಂತೆ ಪ್ರತಿಯೊಂದು ರಾಜ್ಯದ ಸರ್ಕಾರವನ್ನು ಮತ್ತು ವಿಧಾನಮಂಡಲವನ್ನು ಹಾಗೂ ಭಾರತದ ರಾಜ್ಯಕ್ಷೇತ್ರದೊಳಗಿರುವ ಅಥವಾ ಭಾರತ ಸರ್ಕಾರದ ನಿಯಂತ್ರಣದಲ್ಲಿರುವ ಎಲ್ಲ ಸ್ಥಳೀಯ ಪ್ರಾಧಿಕಾರಗಳನ್ನು ಅಥವಾ ಇತರ ಪ್ರಾಧಿಕಾರಗಳನ್ನು ಒಳಗೊಳ್ಳುತ್ತದೆ.

**13. ಮೂಲಭೂತ ಹಕ್ಕುಗಳಿಗೆ ಅಸಂಗತವಾದ ಅಥವಾ ಅವುಗಳನ್ನು ಅಲ್ಪೀಕರಿಸುವಂಥ ಕಾನೂನುಗಳು:–** (1) ಈ ಸಂವಿಧಾನವು ಪ್ರಾರಂಭವಾಗುವುದಕ್ಕೆ ನಿಕಟಪೂರ್ವದಲ್ಲಿ ಭಾರತದ ರಾಜ್ಯಕ್ಷೇತ್ರದಲ್ಲಿ ಜಾರಿಯಲ್ಲಿರುವ ಎಲ್ಲಾ ಕಾನೂನುಗಳು ಈ ಭಾಗದ ಉಪಬಂಧಗಳಿಗೆ ಅಸಂಗತವಾಗಿರುವಷ್ಟರ ಮಟ್ಟಿಗೆ ಅನೂರ್ಜಿತವಾಗತಕ್ಕದ್ದು.

(2) ಈ ಭಾಗದಿಂದ ಪ್ರದತ್ತವಾದ ಹಕ್ಕುಗಳನ್ನು ಕಸಿದುಕೊಳ್ಳುವ ಅಥವಾ ಮೊಟಕುಗೊಳಿಸುವ ಯಾವುದೇ ಕಾನೂನನ್ನು ರಾಜ್ಯವು ಮಾಡತಕ್ಕದ್ದಲ್ಲ ಮತ್ತು ಈ ಖಂಡವನ್ನು ಉಲ್ಲಂಘಿಸಿ ಮಾಡಲಾದ ಯಾವುದೇ ಕಾನೂನು, ಆ ಉಲ್ಲಂಘನೆಯಷ್ಟರ ಮಟ್ಟಿಗೆ ಅನೂರ್ಜಿತವಾಗತಕ್ಕದ್ದು.

(3) ಈ ಅನುಚ್ಛೇದದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಕಾನೂನು" ಎಂಬುದು ಯಾವುದೇ ಅಧ್ಯಾದೇಶ, ಆದೇಶ, ಉಪವಿಧಿ, ನಿಯಮ, ವಿನಿಯಮ, ಅಧಿಸೂಚನೆ, ಅಥವಾ ಭಾರತದ ರಾಜ್ಯಕ್ಷೇತ್ರದಲ್ಲಿ ಕಾನೂನಿನ ಬಲವುಳ್ಳ ರೂಢಿ ಅಥವಾ ಆಚರಣೆಯನ್ನು ಒಳಗೊಳ್ಳುತ್ತದೆ;

(ಬಿ) "ಜಾರಿಯಲ್ಲಿರುವ ಕಾನೂನುಗಳು" ಎಂಬುದು ಭಾರತದ ರಾಜ್ಯಕ್ಷೇತ್ರದಲ್ಲಿನ ಯಾವುದೇ ವಿಧಾನಮಂಡಲದಿಂದ ಅಥವಾ ಇತರ ಸಕ್ಷಮ ಪ್ರಾಧಿಕಾರದಿಂದ ಈ ಸಂವಿಧಾನವು ಪ್ರಾರಂಭವಾಗುವುದಕ್ಕೆ ಮುಂಚೆ ಅಂಗೀಕೃತವಾಗಿದ್ದ ಅಥವಾ ಮಾಡಲಾಗಿದ್ದ ಮತ್ತು ಈ ಹಿಂದೆ ನಿರಸಿತವಾಗಿರದ ಕಾನೂನುಗಳನ್ನು, ಅಂಥ ಯಾವುದೇ ಕಾನೂನು ಅಥವಾ ಅವುಗಳ ಯಾವುದೇ ಭಾಗವು, ಆಗ ಎಲ್ಲ ಪ್ರದೇಶಗಳಲ್ಲಿ ಅಥವಾ ನಿರ್ದಿಷ್ಟ ಪ್ರದೇಶಗಳಲ್ಲಿ ಜಾರಿಯಲ್ಲಿ ಇಲ್ಲದಿದ್ದಾಗ್ಯೂ, ಒಳಗೊಳ್ಳುತ್ತದೆ.

[1][(4) ಈ ಅನುಚ್ಛೇದದಲ್ಲಿ ಇರುವುದು ಯಾವುದೂ, 368ನೆಯ ಅನುಚ್ಛೇದದ ಮೇರೆಗೆ ಮಾಡಲಾದ ಈ ಸಂವಿಧಾನದ ಯಾವುದೇ ತಿದ್ದುಪಡಿಗೆ ಅನ್ವಯವಾಗತಕ್ಕದ್ದಲ್ಲ.]

### ಸಮಾನತೆಯ ಹಕ್ಕು

**14. ಕಾನೂನಿನ ಮುಂದೆ ಸಮಾನತೆ:–** ಭಾರತದ ರಾಜ್ಯಕ್ಷೇತ್ರದಲ್ಲಿ ಯಾರೇ ವ್ಯಕ್ತಿಗೆ ಕಾನೂನಿನ ಮುಂದೆ ಸಮಾನತೆಯನ್ನು ಅಥವಾ ಕಾನೂನುಗಳಿಂದ ಸಮಾನ ಸಂರಕ್ಷಣೆಯನ್ನು ರಾಜ್ಯವು ನಿರಾಕರಿಸತಕ್ಕದ್ದಲ್ಲ.

**15. ಧರ್ಮ, ಮೂಲವಂಶ, ಜಾತಿ, ಲಿಂಗ ಅಥವಾ ಜನ್ಮಸ್ಥಳದ ಆಧಾರಗಳ ಮೇಲೆ ತಾರತಮ್ಯದ ನಿಷೇಧ:–** (1) ರಾಜ್ಯವು ಯಾರೇ ನಾಗರಿಕನ ವಿರುದ್ಧ ಧರ್ಮ, ಮೂಲವಂಶ, ಜಾತಿ, ಲಿಂಗ, ಜನ್ಮಸ್ಥಳದ ಅಥವಾ ಅವುಗಳಲ್ಲಿ ಯಾವುದೇ ಒಂದರ ಆಧಾರದ ಮೇಲೆ ಮಾತ್ರವೇ ಯಾವುದೇ ತಾರತಮ್ಯವನ್ನು ಮಾಡತಕ್ಕದ್ದಲ್ಲ.

---

1. 1971ನೆಯ ಇಸವಿಯ ಸಂವಿಧಾನ (ಇಪ್ಪತ್ತನಾಲ್ಕನೆಯ ತಿದ್ದುಪಡಿ) ಅಧಿನಿಯಮದ 2ನೆಯ ಪ್ರಕರಣದ ಮೂಲಕ ಸೇರಿಸಲಾಗಿದೆ.

(2) No citizen shall, on grounds only of religion, race, caste, sex, place of birth or any of them, be subject to any disability, liability, restriction or condition with regard to—

(*a*) access to shops, public restaurants, hotels and places of public entertainment; or

(*b*) the use of wells, tanks, bathing ghats, roads and places of public resort maintained wholly or partly out of State funds or dedicated to the use of the general public.

(3) Nothing in this article shall prevent the State from making any special provision for women and children.

[1][(4) Nothing in this article or in clause (2) of article 29 shall prevent the State from making any special provision for the advancement of any socially and educationally backward classes of citizens or for the Scheduled Castes and the Scheduled Tribes.][1]

[2][(5) Nothing in this article or in sub-clause (*g*) of clause (1) of article 19 shall prevent the State from making any special provision, by law, for the advancement of any socially and educationally backward classes of citizens or for the Scheduled Castes or the Scheduled Tribes in so far as such special provisions relate to their admission to educational institutions including private educational institutions, whether aided or unaided by the State, other than the minority educational institutions referred to in clause (1) of article 30.][2]

[3][‘(6) Nothing in this article or sub-clause (g) of clause (1) of article 19 or clause (2) of article 29 shall prevent the State from making,-

(a) any special provision for the advancement of any economically weaker sections of citizens other than the classes mentioned in clauses (4) and (5); and

(b) any special provision for the advancement of any economically weaker sections of citizens other than the classes mentioned in clauses (4) and (5) in so far as such special provisions relate to their admission to educational institutions including private educational institutions, whether aided or unaided by the State, other than the minority educational institutions referred to in clause (1) of article 30, which in the case of reservation would be in addition to the existing reservations and subject to a maximum of ten per cent, of the total seats in each category.

Explanation.- For the purposes of this article and article 16, “economically weaker sections” shall be such as may be notified by the State from time to time on the basis of family income and other indicators of economic disadvantage.’][3]

**16. Equality of opportunity in matters of public employment:-** (1) There shall be equality of opportunity for all citizens in matters relating to employment or appointment to any office under the State.

(2) No citizen shall, on grounds only of religion, race, caste, sex, descent, place of birth, residence or any of them, be ineligible for, or discriminated against in respect of, any employment or office under the State.

(3) Nothing in this article shall prevent Parliament from making any law prescribing, in regard to a class or classes of employment or appointment to an office [4][under the Government of, or any local or other authority within, a State or Union territory, any requirement as to residence within that State or Union territory] prior to such employment or appointment.

---

1. Added by the Constitution (First Amendment) Act, 1951, s. 2.
2. Ins. by the Constitution (Ninety-third Amendment) Act, 2005, s. 2 (w.e.f. 20-1-2006).
3. Ins. by the Constitution (One hundred and third Amendment) Act, 2019, s. 2 (w.e.f. 14-1-2019).
4.. Subs. by the Constitution (Seventh Amendment) Act, 1956, s. 29 and Sch., for “under any State specified in the First Schedule or any local or other authority within its territory, any requirement as to residence within that State”

(2) ಧರ್ಮ, ಮೂಲವಂಶ, ಜಾತಿ, ಲಿಂಗ, ಜನ್ಮಸ್ಥಳ ಅಥವಾ ಇವುಗಳಲ್ಲಿ ಯಾವುದೇ ಒಂದರ ಆಧಾರದ ಮೇಲೆ ಮಾತ್ರವೇ ಯಾರೇ ನಾಗರಿಕನು,-

(ಎ) ಅಂಗಡಿಗಳು, ಸಾರ್ವಜನಿಕ ಉಪಾಹಾರ ಗೃಹಗಳು, ಹೋಟೆಲುಗಳು ಮತ್ತು ಸಾರ್ವಜನಿಕ ಮನೋರಂಜನ ಸ್ಥಳಗಳಿಗೆ ಪ್ರವೇಶಿಸುವ ಸಂಬಂಧದಲ್ಲಿ; ಅಥವಾ

(ಬಿ) ಪೂರ್ಣವಾಗಿ ಅಥವಾ ಭಾಗಶಃ ರಾಜ್ಯನಿಧಿಗಳಿಂದ ಪೋಷಿತವಾದ ಅಥವಾ ಸಾರ್ವಜನಿಕರ ಉಪಯೋಗಕ್ಕಾಗಿ ಸಮರ್ಪಿತವಾದ ಬಾವಿಗಳನ್ನು, ಕೆರೆಗಳನ್ನು, ಸ್ನಾನಘಟ್ಟಗಳನ್ನು, ರಸ್ತೆಗಳನ್ನು ಮತ್ತು ಸಾರ್ವಜನಿಕರು ಸೇರುವ ಸ್ಥಳಗಳನ್ನು ಉಪಯೋಗಿಸುವ ಸಂಬಂಧದಲ್ಲಿ

- ಯಾವುದೇ ಅಸಮರ್ಥತೆಗೆ, ಹೊಣೆಗಾರಿಕೆಗೆ, ನಿರ್ಬಂಧಕ್ಕೆ ಅಥವಾ ಷರತ್ತಿಗೆ ಒಳಪಟ್ಟಿರತಕ್ಕದ್ದಲ್ಲ.

(3) ಈ ಅನುಚ್ಛೇದದಲ್ಲಿ ಇರುವುದು ಯಾವುದೂ, ಹೆಂಗಸರು ಮತ್ತು ಮಕ್ಕಳಿಗಾಗಿ ವಿಶೇಷ ಉಪಬಂಧವನ್ನು ಮಾಡದಂತೆ ರಾಜ್ಯವನ್ನು ಪ್ರತಿಬಂಧಿಸತಕ್ಕದ್ದಲ್ಲ.

[1][(4) ಈ ಅನುಚ್ಛೇದದಲ್ಲಿ ಅಥವಾ 29ನೆಯ ಅನುಚ್ಛೇದದ (2)ನೆಯ ಖಂಡದಲ್ಲಿ ಇರುವುದು ಯಾವುದೂ, ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವ ನಾಗರಿಕರ ಯಾವುವೇ ವರ್ಗಗಳ ಪುರೋಭಿವೃದ್ಧಿಗಾಗಿ ಅಥವಾ ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಬುಡಕಟ್ಟುಗಳ ಸಲುವಾಗಿ ರಾಜ್ಯವು ಯಾವುದೇ ವಿಶೇಷ ಉಪಬಂಧವನ್ನು ಮಾಡದಂತೆ ಪ್ರತಿಬಂಧಿಸತಕ್ಕದ್ದಲ್ಲ.][1]

[2][(5) ಈ ಅನುಚ್ಛೇದದಲ್ಲಿ ಅಥವಾ 19ನೇ ಅನುಚ್ಛೇದದ (1)ನೇ ಖಂಡದ (ಜಿ) ಉಪಖಂಡದಲ್ಲಿರುವುದಾವುದೂ, ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವ ನಾಗರಿಕರ ಯಾವುವೇ ವರ್ಗಗಳ ಪುರೋಭಿವೃದ್ಧಿಗಾಗಿ ಅಥವಾ ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಬುಡಕಟ್ಟುಗಳ ಸಲುವಾಗಿ ಕಾನೂನಿನ ಮೂಲಕ ಯಾವುದೇ ವಿಶೇಷ ಉಪಬಂಧಗಳನ್ನು ಮಾಡದಂತೆ, ಆ ವಿಶೇಷ ಉಪಬಂಧಗಳು 30ನೇ ಅನುಚ್ಛೇದದ (1)ನೇ ಖಂಡದಲ್ಲಿ ಹೇಳಿರುವ ಅಲ್ಪಸಂಖ್ಯಾತ ಶೈಕ್ಷಣಿಕ ಸಂಸ್ಥೆಗಳನ್ನು ಹೊರತುಪಡಿಸಿ ರಾಜ್ಯದಿಂದ ಅನುದಾನ ಪಡೆದಿರುವ ಅಥವಾ ಅನುದಾನ ಪಡೆಯದಿರುವ ಖಾಸಗಿ ಶೈಕ್ಷಣಿಕ ಸಂಸ್ಥೆಗಳೂ ಸೇರಿದಂತೆ ಶೈಕ್ಷಣಿಕ ಸಂಸ್ಥೆಗಳಲ್ಲಿ ಪ್ರವೇಶಕ್ಕೆ ಸಂಬಂಧಿಸಿರುವಷ್ಟರ ಮಟ್ಟಿಗೆ, ರಾಜ್ಯವನ್ನು ಪ್ರತಿಬಂಧಿಸತಕ್ಕದ್ದಲ್ಲ.][2]

[3][‘(6) ಈ ಅನುಚ್ಛೇದದಲ್ಲಿ ಅಥವಾ 19ನೇ ಅನುಚ್ಛೇದದ (1)ನೇ ಖಂಡದ (ಜಿ) ಉಪ-ಖಂಡದಲ್ಲಿ ಅಥವಾ ಅನುಚ್ಛೇದ 29ರ ಖಂಡ (2) ರಲ್ಲಿ ಇರುವುದು ಯಾವುದೂ,-

(ಎ) (4) ಮತ್ತು (5) ನೇ ಖಂಡಗಳಲ್ಲಿ ನಮೂದಿಸಿದ ವರ್ಗಗಳಲ್ಲದ, ಆರ್ಥಿಕವಾಗಿ ದುರ್ಬಲರಾದ ನಾಗರಿಕರ ಯಾವುವೇ ವರ್ಗಗಳ ಪುರೋಭಿವೃದ್ಧಿಗಾಗಿ ಯಾವುದೇ ವಿಶೇಷ ಉಪಬಂಧವನ್ನು; ಮತ್ತು

(ಬಿ) (4) ಮತ್ತು (5)ನೇ ಖಂಡಗಳಲ್ಲಿ ನಮೂದಿಸಿದ ವರ್ಗಗಳಲ್ಲದ ಆರ್ಥಿಕವಾಗಿ ದುರ್ಬಲರಾದ ನಾಗರಿಕರ ಯಾವುದೇ ವರ್ಗಗಳ ಪುರೋಭಿವೃದ್ಧಿಗಾಗಿ, 30ನೇ ಅನುಚ್ಛೇದದ (1) ನೇ ಖಂಡದಲ್ಲಿ ಉಲ್ಲೇಖಿಸಿರುವ ಅಲ್ಪಸಂಖ್ಯಾತರ ಶೈಕ್ಷಣಿಕ ಸಂಸ್ಥೆಗಳನ್ನು ಹೊರತುಪಡಿಸಿ, ರಾಜ್ಯದಿಂದ ಅನುದಾನ ಪಡೆಯುತ್ತಿರುವ ಅಥವಾ ಅನುದಾನ ಪಡೆಯದಿರುವ ಖಾಸಗಿ ಶೈಕ್ಷಣಿಕ ಸಂಸ್ಥೆಗಳು ಸೇರಿದಂತೆ, ಶೈಕ್ಷಣಿಕ ಸಂಸ್ಥೆಗಳಿಗೆ ಅವರುಗಳ ಪ್ರವೇಶಕ್ಕೆ ಅಂತಹ ವಿಶೇಷ ಉಪಬಂಧಗಳು ಸಂಬಂಧಿಸಿರುವಷ್ಟರ ಮಟ್ಟಿಗೆ ಹೇಳುವುದಾದರೆ ಅಸ್ತಿತ್ವದಲ್ಲಿರುವ ಮೀಸಲಾತಿಗಳಿಗೆ ಹೆಚ್ಚುವರಿಯಾಗಿ ಆದರೆ ಪ್ರತಿಯೊಂದು ಪ್ರವರ್ಗದಲ್ಲಿನ ಒಟ್ಟು ಸ್ಥಾನಗಳ ಗರಿಷ್ಠ ಶೇಕಡಾ ಹತ್ತರಷ್ಟಕ್ಕೆ ಒಳಪಟ್ಟು ಮೀಸಲಾತಿಯನ್ನು ಒದಗಿಸುವುದಕ್ಕಾಗಿ ಯಾವುದೇ ವಿಶೇಷ ಉಪಬಂಧವನ್ನು,

– ಮಾಡದಂತೆ ರಾಜ್ಯವನ್ನು ಪ್ರತಿಬಂಧಿಸತಕ್ಕದ್ದಲ್ಲ.

**ವಿವರಣೆ.**- ಈ ಅನುಚ್ಛೇದದ ಮತ್ತು 16ನೇ ಪ್ರಕರಣದ ಉದ್ದೇಶಗಳಿಗಾಗಿ **"**ಆರ್ಥಿಕವಾಗಿ ದುರ್ಬಲ ವರ್ಗಗಳು**"** ಯಾವುವೆಂದರೆ ಕುಟುಂಬದ ಆದಾಯದ ಮತ್ತು ಅವರ ಆರ್ಥಿಕ ಅನಾನುಕೂಲತೆ ಸೂಚ್ಯಂಕಗಳ ಆಧಾರದ ಮೇಲೆ ಕಾಲಕಾಲಕ್ಕೆ ರಾಜ್ಯವು ಅಧಿಸೂಚಿಸಬಹುದಾದಂಥವುಗಳಾಗಿರತಕ್ಕದ್ದು.’][3]

**16. ಸಾರ್ವಜನಿಕ ನಿಯೋಜನೆಯ ವಿಷಯದಲ್ಲಿ ಸಮಾನಾವಕಾಶ:**- (1) ರಾಜ್ಯದ ಅಧೀನದಲ್ಲಿರುವ ಯಾವುದೇ ಪದಕ್ಕೆ ಸಂಬಂಧಿಸಿದಂತೆ ನಿಯೋಜನೆ ಅಥವಾ ನೇಮಕದ ವಿಷಯದಲ್ಲಿ ಎಲ್ಲ ನಾಗರಿಕರಿಗೂ ಸಮಾನ ಅವಕಾಶವಿರತಕ್ಕದ್ದು.

(2) ಧರ್ಮ, ಮೂಲವಂಶ, ಜಾತಿ, ಲಿಂಗ, ಸಂತತಿ, ಜನ್ಮಸ್ಥಳ, ನಿವಾಸದ ಅಥವಾ ಇವುಗಳಲ್ಲಿ ಯಾವುದೇ ಒಂದರ ಆಧಾರದ ಮೇಲೆ ಮಾತ್ರವೇ ಯಾರೇ ನಾಗರಿಕನು ರಾಜ್ಯದ ಅಧೀನದಲ್ಲಿರುವ ಯಾವುದೇ ನಿಯೋಜನೆಗೆ ಅಥವಾ ಪದಕ್ಕೆ ಸಂಬಂಧಿಸಿದಂತೆ ಅನರ್ಹತೆಗೆ ಒಳಗಾಗತಕ್ಕದ್ದಲ್ಲ ಅಥವಾ ಅವನ ವಿರುದ್ಧ ತಾರತಮ್ಯವನ್ನು ಮಾಡತಕ್ಕದ್ದಲ್ಲ.

(3) ಈ ಅನುಚ್ಛೇದದಲ್ಲಿ ಇರುವುದು ಯಾವುದೂ, [4][ಒಂದು ರಾಜ್ಯ ಸರ್ಕಾರದ ಅಥವಾ ಒಕ್ಕೂಟ ರಾಜ್ಯಕ್ಷೇತ್ರದ ಅಧೀನದಲ್ಲಿರುವ ಅಥವಾ ಯಾವುದೇ ರಾಜ್ಯದ ಅಥವಾ ಒಕ್ಕೂಟ ರಾಜ್ಯಕ್ಷೇತ್ರದೊಳಗಿರುವ ಯಾವುದೇ ಸ್ಥಳೀಯ ಅಥವಾ ಇತರ ಪ್ರಾಧಿಕಾರದ ಅಧೀನದಲ್ಲಿರುವ ಯಾವುದೇ ವರ್ಗದ ಅಥವಾ ವರ್ಗಗಳ ಪದಕ್ಕೆ, ನಿಯೋಜನೆಗೆ ಅಥವಾ ನೇಮಕಕ್ಕೆ ಸಂಬಂಧಿಸಿದಂತೆ ಅಂಥ ನಿಯೋಜನೆಗೆ ಅಥವಾ ನೇಮಕಕ್ಕೆ ಮುಂಚೆ ಆ ರಾಜ್ಯದಲ್ಲಿ ಅಥವಾ ಆ ಒಕ್ಕೂಟ ರಾಜ್ಯಕ್ಷೇತ್ರದಲ್ಲಿ ನಿವಾಸದ ಯಾವುದೇ ಅಗತ್ಯತೆಯನ್ನು][4] ನಿಯಮಿಸುವ ಯಾವುದೇ ಕಾನೂನನ್ನು ಮಾಡದಂತೆ ಸಂಸತ್ತನ್ನು ಪ್ರತಿಬಂಧಿಸತಕ್ಕದ್ದಲ್ಲ.

---

1. 1951ನೆಯ ಇಸವಿಯ ಸಂವಿಧಾನ (ಮೊದಲನೆಯ ತಿದ್ದುಪಡಿ) ಅಧಿನಿಯಮದ 2ನೆಯ ಪ್ರಕರಣದ ಮೂಲಕ ಸೇರಿಸಲಾಗಿದೆ.
2. 2005 ನೇ ಇಸವಿಯ ಸಂವಿಧಾನ (ತೊಂಬತ್ಮೂರನೆಯ ತಿದ್ದುಪಡಿ) ಅಧಿನಿಯಮದ 2ನೆಯ ಪ್ರಕರಣದ ಮೂಲಕ (20.1.2006 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.
3. 2019ನೇ ಇಸವಿಯ ಸಂವಿಧಾನ (ನೂರಾ ಮೂರನೆಯ ತಿದ್ದುಪಡಿ) ಅಧಿನಿಯಮದ ಮೂಲಕ (ದಿನಾಂಕ 14, ಜನವರಿ 2019 ರಂದು ಜಾರಿಗೆ ಬರುವಂತೆ) ಸೇರಿಸಲಾಗಿದೆ.
4. 1956ನೆಯ ಇಸವಿಯ ಸಂವಿಧಾನ (ಏಳನೆಯ ತಿದ್ದುಪಡಿ) ಅಧಿನಿಯಮದ 29ನೆಯ ಪ್ರಕರಣದ ಹಾಗೂ ಅನುಸೂಚಿಯ ಮೂಲಕ "ಮೊದಲನೆಯ ಅನುಸೂಚಿಯಲ್ಲಿ ಉಲ್ಲೇಖಿತವಾಗಿರುವ ಯಾವುದೊಂದು ರಾಜ್ಯದ ಅಥವಾ ಅದರ ರಾಜ್ಯಕ್ಷೇತ್ರದ ಯಾವುದೇ ಸ್ಥಳೀಯ ಅಥವಾ ಇತರ ಪ್ರಾಧಿಕಾರದ ಅಧೀನದಲ್ಲಿರುವ, ಯಾವುದೇ ವರ್ಗದ ಅಥವಾ ವರ್ಗಗಳ ನೌಕರಿಗೆ ಅಥವಾ ಹುದ್ದೆಗಳಿಗೆ ನೇಮಕ ಮಾಡಿಕೊಳ್ಳುವ ವಿಚಾರದಲ್ಲಿ ಆ ನೌಕರಿಗೆ ಅಥವಾ ಹುದ್ದೆಗಳಿಗೆ ನೇಮಕ ಮಾಡಿಕೊಳ್ಳುವುದಕ್ಕೆ ಮುಂಚೆ ಆ ರಾಜ್ಯದಲ್ಲಿ ನಿವಾಸಿಸಿರಬೇಕಾದ ಸಂಗತಿಯ ಸಂಬಂಧವಾಗಿ" ಎಂಬ ಪದಗಳಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.

(4) Nothing in this article shall prevent the State from making any provision for the reservation of appointments or posts in favour of any backward class of citizens, which, in the opinion of the State, is not adequately represented in the services under the State.

[1][(4A) Nothing in this article shall prevent the State from making any provision for reservation [2][in matters of promotion, with consequential seniority, to any class][2] or classes of posts in the services under the State in favour of the Scheduled Castes and the Scheduled Tribes which, in the opinion of the State, are not adequately represented in the services under the State.][2]

[3][(4B) Nothing in this article shall prevent the State from considering any unfilled vacancies of a year which are reserved for being filled up in that year in accordance with any provision for reservation made under clause (4) or clause (4A) as a separate class of vacancies to be filled up in any succeeding year or years and such class of vacancies shall not be considered together with the vacancies of the year in which they are being filled up for determining the ceiling of fifty per cent. reservation on total number of vacancies of that year.]

(5) Nothing in this article shall affect the operation of any law which provides that the incumbent of an office in connection with the affairs of any religious or denominational institution or any member of the governing body thereof shall be a person professing a particular religion or belonging to a particular denomination.

[4][“(6) Nothing in this article shall prevent the State from making any provision for the reservation of appointments or posts in favour of any economically weaker sections of citizens other than the classes mentioned in clause (4), in addition to the existing reservation and subject to a maximum of ten per cent of the posts in each category.”][4]

**17. Abolition of Untouchability:-** “Untouchability” is abolished and its practice in any form is forbidden. The enforcement of any disability arising out of “Untouchability” shall be an offence punishable in accordance with law.

**18. Abolition of titles:-** (1) No title, not being a military or academic distinction, shall be conferred by the State.

(2) No citizen of India shall accept any title from any foreign State.

(3) No person who is not a citizen of India shall, while he holds any office of profit or trust under the State, accept without the consent of the President any title from any foreign State.

(4) No person holding any office of profit or trust under the State shall, without the consent of the President, accept any present, emolument, or office of any kind from or under any foreign State.

---

1. Ins. by the Constitution (Seventy-seventh Amendment) Act, 1995, s. 2.
2. Subs. by the Constitution (Eighty-fifth Amendment) Act, 2001, s. 2, for certain words (w.e.f. 17-6-1995).
3. Ins. by the Constitution (Eighty-first Amendment) Act, 2000, s. 2 (w.e.f. 9-6-2000).
4. . Ins. by the Constitution (One hundred and third Amendment) Act, 2019, s. 3 (w.e.f. 14-1-2019).

(4) ಈ ಅನುಚ್ಛೇದದಲ್ಲಿ ಇರುವುದು ಯಾವುದೂ, ಯಾವುದೇ ಹಿಂದುಳಿದ ವರ್ಗದ ನಾಗರಿಕರು ರಾಜ್ಯದ ಅಧೀನದಲ್ಲಿರುವ ಸೇವೆಗಳಲ್ಲಿ ಸಾಕಷ್ಟು ಪ್ರಾತಿನಿಧ್ಯವನ್ನು ಹೊಂದಿಲ್ಲವೆಂದು ರಾಜ್ಯವು ಅಭಿಪ್ರಾಯಪಟ್ಟಲ್ಲಿ ಅಂಥವರಿಗಾಗಿ ನೇಮಕಗಳನ್ನು ಅಥವಾ ಹುದ್ದೆಗಳನ್ನು ಮೀಸಲಿಡುವುದಕ್ಕಾಗಿ ಯಾವುದೇ ಉಪಬಂಧವನ್ನು ಮಾಡದಂತೆ ರಾಜ್ಯವನ್ನು ಪ್ರತಿಬಂಧಿಸತಕ್ಕದ್ದಲ್ಲ.

[1][(4ಎ) ಈ ಅನುಚ್ಛೇದದಲ್ಲಿರುವುದು ಯಾವುದೂ, ರಾಜ್ಯದ ಅಧೀನದಲ್ಲಿರುವ ಸೇವೆಗಳಲ್ಲಿ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳವರು ಸಾಕಷ್ಟು ಪ್ರಾತಿನಿಧ್ಯವನ್ನು ಹೊಂದಿಲ್ಲವೆಂದು ರಾಜ್ಯವು ಅಭಿಪ್ರಾಯಪಟ್ಟಲ್ಲಿ, ರಾಜ್ಯದ ಅಧೀನದ ಸೇವೆಗಳಲ್ಲಿನ [2][ಯಾವುದೇ ವರ್ಗದ ಅಥವಾ ವರ್ಗಗಳ ಹುದ್ದೆಗಳಿಗೆ, ತತ್ಪರಿಣಾಮದ ಜ್ಯೇಷ್ಠತೆಯೊಂದಿಗೆ, ಬಡ್ತಿ ವಿಷಯದಲ್ಲಿ][2] ಅಂಥವರಿಗಾಗಿ ಮೀಸಲಾತಿಯ ಯಾವುದೇ ಉಪಬಂಧವನ್ನು ಮಾಡದಂತೆ ರಾಜ್ಯವನ್ನು ಪ್ರತಿಬಂಧಿಸತಕ್ಕದ್ದಲ್ಲ.][1]

[3][(4ಬಿ) ಈ ಅನುಚ್ಛೇದದಲ್ಲಿ ಇರುವುದು ಯಾವುದೂ, ಒಂದು ವರ್ಷದಲ್ಲಿ, (4)ನೇ ಖಂಡದ ಅಥವಾ (4ಎ) ಖಂಡದ ಮೇರೆಗೆ ಮಾಡಿದ ಯಾವುದೇ ಮೀಸಲಾತಿ ಉಪಬಂಧಕ್ಕನುಸಾರವಾಗಿ, ಆ ವರ್ಷದಲ್ಲಿ ಭರ್ತಿ ಮಾಡುವುದಕ್ಕಾಗಿ ಯಾವುವೇ ಹುದ್ದೆಗಳನ್ನು ಮೀಸಲಾಗಿಟ್ಟಿದ್ದು, ಭರ್ತಿ ಮಾಡದೆ ಇರುವ ಆ ಹುದ್ದೆಗಳನ್ನು ಯಾವುದೇ ಮುಂಬರುವ ವರ್ಷದಲ್ಲಿ ಅಥವಾ ವರ್ಷಗಳಲ್ಲಿ ಭರ್ತಿ ಮಾಡಬೇಕಾದ ಪ್ರತ್ಯೇಕ ಹುದ್ದೆಗಳ ವರ್ಗವೆಂದು ಪರಿಗಣಿಸಲು ರಾಜ್ಯವನ್ನು ಪ್ರತಿಬಂಧಿಸತಕ್ಕದ್ದಲ್ಲ ಮತ್ತು ಅಂಥ ವರ್ಗದ ಖಾಲಿ ಹುದ್ದೆಗಳನ್ನು, ಯಾವ ವರ್ಷದಲ್ಲಿ ಅವುಗಳನ್ನು ಭರ್ತಿ ಮಾಡಿಕೊಳ್ಳಲಾಗುತ್ತದೆಯೋ ಆ ವರ್ಷದಲ್ಲಿನ ಹುದ್ದೆಗಳೊಂದಿಗೆ, ಆ ವರ್ಷದ ಒಟ್ಟು ಸಂಖ್ಯೆಯ ಹುದ್ದೆಗಳ ಮೇಲಣ ಶೇ. 50ರ ಮೀಸಲಾತಿಯ ಪರಿಮಿತಿಯನ್ನು ನಿರ್ಧರಿಸುವಾಗ, ಗಣನೆಗೆ ತೆಗೆದುಕೊಳ್ಳತಕ್ಕದ್ದಲ್ಲ.]

(5) ಈ ಅನುಚ್ಛೇದದಲ್ಲಿ ಇರುವುದು ಯಾವುದೂ, ಯಾವುದೇ ಧಾರ್ಮಿಕ ಅಥವಾ ಸಾಂಪ್ರದಾಯಿಕ ಸಂಸ್ಥೆಯ ವ್ಯವಹಾರಗಳಿಗೆ ಸಂಬಂಧಪಟ್ಟ ಪದಧಾರಕನು ಅಥವಾ ಆ ಸಂಸ್ಥೆಯ ಕಾರ್ಯನಿರ್ವಾಹಕ ಮಂಡಳಿಯ ಯಾರೇ ಸದಸ್ಯನು ಒಂದು ನಿರ್ದಿಷ್ಟ ಧರ್ಮವನ್ನು ಒಪ್ಪಿಕೊಂಡವನಾಗಿರತಕ್ಕದ್ದು ಅಥವಾ ಒಂದು ನಿರ್ದಿಷ್ಟ ಸಂಪ್ರದಾಯಕ್ಕೆ ಸೇರಿದವನಾಗಿರತಕ್ಕದ್ದು ಎಂಬ ಉಪಬಂಧವನ್ನು ಮಾಡುವ ಯಾವುದೇ ಕಾನೂನಿನ ಜಾರಿಗೆ ಬಾಧಕವಾಗತಕ್ಕದ್ದಲ್ಲ.

> [4]["(6) ಈ ಅನುಚ್ಛೇದದಲ್ಲಿ ಇರುವುದು ಯಾವುದೂ ಅಸ್ತಿತ್ವದಲ್ಲಿರುವ ಮೀಸಲಾತಿಗೆ ಹೆಚ್ಚುವರಿಯಾಗಿ ಆದರೆ ಪ್ರತಿಯೊಂದು ಪ್ರವರ್ಗದಲ್ಲಿನ ಹುದ್ದೆಗಳಲ್ಲಿ ಗರಿಷ್ಠ ಶೇಕಡಾ ಹತ್ತರಷ್ಟಕ್ಕೆ ಒಳಪಟ್ಟು, (4)ನೇ ಖಂಡದಲ್ಲಿ ಉಲ್ಲೇಖಿಸಿರುವ ವರ್ಗಗಳಲ್ಲದ ಆರ್ಥಿಕವಾಗಿ ದುರ್ಬಲರಾದ ನಾಗರಿಕರ ವರ್ಗಗಳಿಗೆ ನೇಮಕಗಳಲ್ಲಿ ಅಥವಾ ಹುದ್ದೆಗಳಲ್ಲಿ ಯಾವುದೇ ಉಪಬಂಧವನ್ನು ಮಾಡದಂತೆ ರಾಜ್ಯವನ್ನು ಪ್ರತಿಬಂಧಿಸತಕ್ಕದ್ದಲ್ಲ".][4]

**17. ಅಸ್ಪೃಶ್ಯತೆಯ ನಿರ್ಮೂಲನ:-** "ಅಸ್ಪೃಶ್ಯತೆ"ಯನ್ನು ನಿರ್ಮೂಲನಗೊಳಿಸಲಾಗಿದೆ ಮತ್ತು ಯಾವುದೇ ರೂಪದಲ್ಲಿ ಅದರ ಆಚರಣೆಯನ್ನು ನಿಷೇಧಿಸಲಾಗಿದೆ. "ಅಸ್ಪೃಶ್ಯತೆ" ಯಿಂದ ಉದ್ಭವಿಸುವ ಯಾವುದೇ ಅಸಮರ್ಥತೆಯನ್ನು ಆಚರಣೆಗೆ ತರುವುದು ಕಾನೂನಿಗನುಸಾರವಾಗಿ ದಂಡನೀಯವಾದ ಅಪರಾಧವಾಗತಕ್ಕದ್ದು.

**18. ಬಿರುದುಗಳ ರದ್ದಿಯಾತಿ:-** (1) ರಾಜ್ಯವು ಸೇನಾ ಅಥವಾ ವಿದ್ಯಾ ಸಂಬಂಧವಾದ ಪ್ರಶಸ್ತಿಯಲ್ಲದ ಯಾವುದೇ ಬಿರುದನ್ನು ಪ್ರದಾನ ಮಾಡತಕ್ಕದ್ದಲ್ಲ.

(2) ಭಾರತದ ಯಾರೇ ನಾಗರಿಕನು ಯಾವುದೇ ವಿದೇಶಿ ರಾಜ್ಯದಿಂದ ಯಾವುದೇ ಬಿರುದನ್ನು ಸ್ವೀಕರಿಸತಕ್ಕದ್ದಲ್ಲ.

(3) ಭಾರತದ ನಾಗರಿಕನಲ್ಲದ ಯಾರೇ ವ್ಯಕ್ತಿಯು ರಾಜ್ಯದ ಅಧೀನದಲ್ಲಿನ ಯಾವುದೇ ಲಾಭದಾಯಕ ಅಥವಾ ನಂಬಿಕೆಯ ಪದದಲ್ಲಿರುವಾಗ ರಾಷ್ಟ್ರಪತಿಯ ಸಮ್ಮತಿಯಿಲ್ಲದೆ ಯಾವುದೇ ವಿದೇಶಿ ರಾಜ್ಯದಿಂದ ಯಾವುದೇ ಬಿರುದನ್ನು ಸ್ವೀಕರಿಸತಕ್ಕದ್ದಲ್ಲ.

(4) ರಾಜ್ಯದ ಅಧೀನದಲ್ಲಿನ ಯಾವುದೇ ಲಾಭದಾಯಕ ಅಥವಾ ನಂಬಿಕೆಯ ಪದದಲ್ಲಿರುವ ಯಾರೇ ವ್ಯಕ್ತಿಯು ರಾಷ್ಟ್ರಪತಿಯ ಸಮ್ಮತಿಯಿಲ್ಲದೆ ಯಾವುದೇ ವಿದೇಶಿ ರಾಜ್ಯದಿಂದ ಯಾವುದೇ ಪಾರಿತೋಷಕವನ್ನು, ಉಪಲಬ್ಧಿಯನ್ನು ಅಥವಾ ಯಾವುದೇ ವಿದೇಶಿ ರಾಜ್ಯದ ಅಧೀನದಲ್ಲಿನ ಯಾವುದೇ ವಿಧದ ಪದವನ್ನು ಸ್ವೀಕರಿಸತಕ್ಕದ್ದಲ್ಲ.

---

1. 1995ನೆಯ ಇಸವಿಯ ಸಂವಿಧಾನ (ಎಪ್ಪತ್ತೇಳನೆಯ ತಿದ್ದುಪಡಿ) ಅಧಿನಿಯಮದ 2ನೆಯ ಪ್ರಕರಣದ ಮೂಲಕ ಸೇರಿಸಲಾಗಿದೆ.
2. 2001ನೇ ಇಸವಿಯ ಸಂವಿಧಾನ (ಎಂಬತ್ತೈದನೆಯ ತಿದ್ದುಪಡಿ) ಅಧಿನಿಯಮದ 2ನೆಯ ಪ್ರಕರಣದ ಮೂಲಕ ಕೆಲವು ಪದಗಳಿಗೆ ಬದಲಾಗಿ (17.6.1995 ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.
3. 2000ದ ಇಸವಿಯ ಸಂವಿಧಾನ (ಎಂಬತ್ತೊಂದನೆಯ ತಿದ್ದುಪಡಿ) ಅಧಿನಿಯಮದ ಮೂಲಕ (9.6.2000 ದಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.
4. 2019ನೇ ಇಸವಿಯ ಸಂವಿಧಾನ (ನೂರಾ ಮೂರನೆಯ ತಿದ್ದುಪಡಿ) ಅಧಿನಿಯಮದ ಮೂಲಕ (ದಿನಾಂಕ 14, ಜನವರಿ 2019 ರಂದು ಜಾರಿಗೆ ಬರುವಂತೆ) ಸೇರಿಸಲಾಗಿದೆ.

### *Right to Freedom*

**19. Protection of certain rights regarding freedom of speech, etc:-** (1) All citizens shall have the right—

(*a*) to freedom of speech and expression;

(*b*) to assemble peaceably and without arms;

(*c*) to form associations or unions [1][or co-operative societies];

(*d*) to move freely throughout the territory of India;

(*e*) to reside and settle in any part of the territory of India; [2][and]

[3](f) * * * * *

(*g*) to practice any profession, or to carry on any occupation, trade or business.

[4][(2) Nothing in sub-clause (*a*) of clause (1) shall affect the operation of any existing law, or prevent the State from making any law, in so far as such law imposes reasonable restrictions on the exercise of the right conferred by the said sub-clause in the interests of [5][the sovereignty and integrity of India,] the security of the State, friendly relations with foreign States, public order, decency or morality, or in relation to contempt of court, defamation or incitement to an offence.]

(3) Nothing in sub-clause (*b*) of the said clause shall affect the operation of any existing law in so far as it imposes, or prevent the State from making any law imposing, in the interests of [5][the sovereignty and integrity of India or] public order, reasonable restrictions on the exercise of the right conferred by the said sub-clause.

(4) Nothing in sub-clause (*c*) of the said clause shall affect the operation of any existing law in so far as it imposes, or prevent the State from making any law imposing, in the interests of [5][the sovereignty and integrity of India or] public order or morality, reasonable restrictions on the exercise of the right conferred by the said sub-clause.

(5) Nothing in [6][sub-clauses (*d*) and (*e*)] of the said clause shall affect the operation of any existing law in so far as it imposes, or prevent the State from making any law imposing, reasonable restrictions on the exercise of any of the rights conferred by the said sub-clauses either in the interests of the general public or for the protection of the interests of any Scheduled Tribe.

---

1. Ins. by the Constitution (Ninety-seventh Amendment) Act, 2011, s. 2

2. Ins. by the Constitution (Forty-fourth Amendment) Act, 1978, s. 2 (w.e.f. 20-6-1979).

3. Sub-clause (*f*) omitted by s. 2, *ibid.* (w.e.f. 20-6-1979).

4. Subs. by the Constitution (First Amendment) Act, 1951, s. 3, for cl. (2) (with retrospective effect).

5. Ins. by the Constitution (Sixteenth Amendment) Act, 1963, s. 2.

6. Subs. by the Constitution (Forty-fourth Amendment) Act, 1978, s. 2, for "sub-clauses (d), (e) and (f)" (w.e.f 20.6.1979).

[1][(4) ಈ ಅನುಚ್ಛೇದದ ಮೂಲಕ ಉಚ್ಚ ನ್ಯಾಯಾಲಯಕ್ಕೆ ಪ್ರದಾನ ಮಾಡಿರುವ ಅಧಿಕಾರವು 32ನೆಯ ಅನುಚ್ಛೇದದ (2)ನೆಯ ಖಂಡದ ಮೂಲಕ ಸರ್ವೋಚ್ಚ ನ್ಯಾಯಾಲಯಕ್ಕೆ ಪ್ರದಾನ ಮಾಡಿರುವ ಅಧಿಕಾರವನ್ನು ಅಲ್ಪೀಕರಿಸುವಂಥದ್ದಾಗಿರತಕ್ಕದ್ದಲ್ಲ.]

[2]**226ಎ.** [226ನೇ ಅನುಚ್ಛೇದದ ಮೇರೆಗಿನ ವ್ಯವಹರಣೆಗಳಲ್ಲಿ ಕೇಂದ್ರ ಕಾನೂನುಗಳ ಸಂವಿಧಾನಾತ್ಮಕ ಸಿಂಧುತ್ವವನ್ನು ಪರ್ಯಾಲೋಚಿಸತಕ್ಕದ್ದಲ್ಲ.] 1977ನೇ ಇಸವಿಯ ಸಂವಿಧಾನ (ನಲವತ್ತಮೂರನೆಯ ತಿದ್ದುಪಡಿ) ಅಧಿನಿಯಮದ 8ನೇ ಪ್ರಕರಣದ ಮೂಲಕ (13-4-78 ರಿಂದ ಜಾರಿಗೆ ಬರುವಂತೆ) ನಿರಸನಗೊಳಿಸಲಾಗಿದೆ.

**227. ಎಲ್ಲ ನ್ಯಾಯಾಲಯಗಳ ಮೇಲೆ ಉಚ್ಚ ನ್ಯಾಯಾಲಯದ ಅಧೀಕ್ಷಣಾಧಿಕಾರ:-** [3][(1) ಪ್ರತಿಯೊಂದು ಉಚ್ಚ ನ್ಯಾಯಾಲಯವು, ಅದು ಯಾವ ರಾಜ್ಯಕ್ಷೇತ್ರಗಳ ಸಂಬಂಧದಲ್ಲಿ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸುವುದೋ ಆ ರಾಜ್ಯಕ್ಷೇತ್ರಗಳ ಆದ್ಯಂತ ಇರುವ ಎಲ್ಲ ನ್ಯಾಯಾಲಯಗಳ ಮತ್ತು ನ್ಯಾಯಾಧಿಕರಣಗಳ ಮೇಲೆ ಅಧೀಕ್ಷಣಾಧಿಕಾರವನ್ನು ಹೊಂದಿರತಕ್ಕದ್ದು.]

(2) ಹಿಂದೆ ಹೇಳಿದ ಉಪಬಂಧದ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ ಉಚ್ಚ ನ್ಯಾಯಾಲಯವು,-

(ಎ) ಅಂಥ ನ್ಯಾಯಾಲಯಗಳಿಂದ ವಿವರ ಪಟ್ಟಿಕೆಗಳನ್ನು ತರಿಸಿಕೊಳ್ಳಬಹುದು;

(ಬಿ) ಅಂಥ ನ್ಯಾಯಾಲಯಗಳ ಪದ್ಧತಿ ಮತ್ತು ವ್ಯವಹರಣೆಗಳನ್ನು ವಿನಿಯಮಗೊಳಿಸುವುದಕ್ಕಾಗಿ ಸಾಮಾನ್ಯ ನಿಯಮವನ್ನು ರಚಿಸಿ ಹೊರಡಿಸಬಹುದು ಮತ್ತು ನಮೂನೆಗಳನ್ನು ಗೊತ್ತುಪಡಿಸಬಹುದು; ಮತ್ತು

(ಸಿ) ಅಂಥ ಯಾವುವೇ ನ್ಯಾಯಾಲಯಗಳ ಅಧಿಕಾರಿಗಳು ಯಾವ ನಮೂನೆಗಳಲ್ಲಿ ಪುಸ್ತಕಗಳನ್ನು, ನಮೂದುಗಳನ್ನು ಮತ್ತು ಲೆಕ್ಕಪತ್ರಗಳನ್ನು ಇಡತಕ್ಕದ್ದೋ ಅಂಥ ನಮೂನೆಗಳನ್ನು ಗೊತ್ತುಪಡಿಸಬಹುದು.

(3) ಉಚ್ಚ ನ್ಯಾಯಾಲಯವು ಅಂಥ ನ್ಯಾಯಾಲಯಗಳ ಷರೀಫರಿಗೆ ಮತ್ತು ಎಲ್ಲಾ ಗುಮಾಸ್ತರಿಗೆ ಹಾಗೂ ಅಧಿಕಾರಿಗಳಿಗೆ ಹಾಗೂ ಅಲ್ಲಿ ವೃತ್ತಿ ನಡೆಸುತ್ತಿರುವ ಅಟಾರ್ನಿಗಳಿಗೆ, ನ್ಯಾಯವಾದಿಗಳಿಗೆ ಮತ್ತು ಪ್ಲೀಡರುಗಳಿಗೆ ಕೊಡಬಹುದಾದ ಫೀಜುಗಳ ಕೋಷ್ಟಕಗಳನ್ನು ಸಹ ನಿರ್ಧರಿಸಬಹುದು:

ಪರಂತು, (2)ನೆಯ ಅಥವಾ (3)ನೆಯ ಖಂಡದ ಮೇರೆಗೆ ರಚಿಸಿದ ಯಾವುವೇ ನಿಯಮಗಳು, ಗೊತ್ತುಪಡಿಸಿದ ನಮೂನೆಗಳು, ನಿರ್ಧರಿಸಿದ ಫೀಜುಗಳ ಕೋಷ್ಟಕಗಳು ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಉಪಬಂಧಗಳಿಗೆ ಅಸಂಗತವಾಗಿರತಕ್ಕದ್ದಲ್ಲ ಮತ್ತು ಅವುಗಳಿಗೆ ರಾಜ್ಯಪಾಲನ ಪೂರ್ವಾನುಮೋದನೆ ಅಗತ್ಯವಾಗಿರತಕ್ಕದ್ದು.

(4) ಈ ಅನುಚ್ಛೇದದಲ್ಲಿರುವುದು ಯಾವುದೂ ಸಶಸ್ತ್ರ ಬಲಗಳಿಗೆ ಸಂಬಂಧಪಟ್ಟ ಯಾವುದೇ ಕಾನೂನಿನ ಮೂಲಕ ಅಥವಾ ಅದರ ಮೇರೆಗೆ ಸ್ಥಾಪಿತವಾದ ಯಾವುದೇ ನ್ಯಾಯಾಲಯದ ಅಥವಾ ನ್ಯಾಯಾಧಿಕರಣದ ಮೇಲೆ ಉಚ್ಚ ನ್ಯಾಯಾಲಯಕ್ಕೆ ಅಧೀಕ್ಷಣಾಧಿಕಾರಗಳನ್ನು ಪ್ರದಾನ ಮಾಡುವುದಾಗಿ ಭಾವಿಸತಕ್ಕದ್ದಲ್ಲ.

[4] * * * * *

**228. ಉಚ್ಚ ನ್ಯಾಯಾಲಯಕ್ಕೆ ಕೆಲವು ಮೊಕದ್ದಮೆಗಳ ವರ್ಗಾವಣೆ:-** ಉಚ್ಚ ನ್ಯಾಯಾಲಯಕ್ಕೆ ಅಧೀನವಾಗಿರುವ ನ್ಯಾಯಾಲಯದಲ್ಲಿ ಇತ್ಯರ್ಥವಾಗದೆ ಉಳಿದಿರುವ ಮೊಕದ್ದಮೆಯು ಈ ಸಂವಿಧಾನದ ಅರ್ಥವಿವರಣೆಯ ಬಗ್ಗೆ ಕಾನೂನಿಗೆ ಸಂಬಂಧಿಸಿದ ಮುಖ್ಯವಾದ ಪ್ರಶ್ನೆಯನ್ನು ಒಳಗೊಂಡಿದೆಯೆಂದು ಮತ್ತು ಅಂಥ ಪ್ರಶ್ನೆಯ ನಿರ್ಧಾರವು ಆ ಮೊಕದ್ದಮೆಯನ್ನು ವಿಲೆ ಮಾಡುವುದಕ್ಕೆ ಅವಶ್ಯವಾಗಿದೆಯೆಂದು ಉಚ್ಚ ನ್ಯಾಯಾಲಯಕ್ಕೆ ಮನದಟ್ಟಾದರೆ ಅದು [5][ಆ ಮೊಕದ್ದಮೆಯನ್ನು ತರಿಸಿಕೊಳ್ಳತಕ್ಕದ್ದು ಮತ್ತು [6]* * *]

---

1. 1978ನೇ ಇಸವಿಯ ಸಂವಿಧಾನ (ನಲವತ್ತನಾಲ್ಕನೆಯ ತಿದ್ದುಪಡಿ) ಅಧಿನಿಯಮದ 30ನೇ ಪ್ರಕರಣದ ಮೂಲಕ ಮೂಲ (7)ನೇ ಖಂಡಕ್ಕೆ (4)ನೇ ಖಂಡ ಎಂದು ಪುನರ್ ಸಂಖ್ಯೆ ಕೊಡಲಾಗಿದೆ.
2. 1976ನೆಯ ಇಸವಿಯ ಸಂವಿಧಾನ (ನಲವತ್ತೆರಡನೆಯ ತಿದ್ದುಪಡಿ) ಅಧಿನಿಯಮದ 39ನೇ ಪ್ರಕರಣದ ಮೂಲಕ (1-2-77 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.
3. 1ನೆಯ ಖಂಡವನ್ನು 1976ನೇ ಇಸವಿಯ ಸಂವಿಧಾನ (ನಲವತ್ತಎರಡನೆಯ ತಿದ್ದುಪಡಿ) ಅಧಿನಿಯಮದ 40ನೇ ಪ್ರಕರಣದ ಮೂಲಕ (ದಿನಾಂಕ 1-2-77ರಿಂದ ಜಾರಿಗೆ ಬರುವಂತೆ) ಹಾಗೂ ಆ ತರುವಾಯ 1978ನೆಯ ಇಸವಿಯ ಸಂವಿಧಾನ (ನಲವತ್ತನಾಲ್ಕನೆಯ ತಿದ್ದುಪಡಿ) ಅಧಿನಿಯಮದ 31ನೇ ಪ್ರಕರಣದ ಮೂಲಕ ದಿನಾಂಕ 20-6-79 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದ್ದು, ಮೇಲ್ಕಂಡಂತೆ ಓದಿಕೊಳ್ಳತಕ್ಕದ್ದು.
4. 1976ನೆಯ ಇಸವಿಯ ಸಂವಿಧಾನ (ನಲವತ್ತೆರಡನೆಯ ತಿದ್ದುಪಡಿ) ಅಧಿನಿಯಮದ 40ನ 'ಯ ಪ್ರಕರಣದ ಮೂಲಕ (1-2-1977ರಿಂದ ಜಾರಿಗೆ ಬರುವಂತೆ) 5ನೇ ಖಂಡವನ್ನು ಸೇರಿಸಲಾಗಿತ್ತು ಮತ್ತು ಅದನ್ನು 1978ನೇ ಇಸವಿಯ ಸಂವಿಧಾನ (ನಲವತ್ತನಾಲ್ಕನೆಯ ತಿದ್ದುಪಡಿ) ಅಧಿನಿಯಮದ 31ನೆಯ ಪ್ರಕರಣದ ಮೂಲಕ (20-6-1979ರಿಂದ ಜಾರಿಗೆ ಬರುವಂತೆ) ಬಿಟ್ಟುಬಿಡಲಾಗಿದೆ.
5. 1976ನೆಯ ಇಸವಿಯ ಸಂವಿಧಾನ (ನಲವತ್ತೆರಡನೆಯ ತಿದ್ದುಪಡಿ) ಅಧಿನಿಯಮದ 41ನೇ ಪ್ರಕರಣದ ಮೂಲಕ "ಆ ಮೊಕದ್ದಮೆಯನ್ನು ಅದು ಹಿಂತೆಗೆದುಕೊಳ್ಳತಕ್ಕದ್ದು ಮತ್ತು ..... ಬಹುದು" ಎಂಬ ಪದಗಳಿಗೆ ಬದಲಾಗಿ (1-2-77ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.
6. 1977ನೆಯ ಇಸವಿಯ ಸಂವಿಧಾನ (ನಲವತ್ತಮೂರನೆಯ ತಿದ್ದುಪಡಿ) ಅಧಿನಿಯಮದ 9ನೇ ಪ್ರಕರಣದ ಮೂಲಕ "131ಎ ಅನುಚ್ಛೇದದ ಉಪಬಂಧಗಳಿಗೊಳಪಟ್ಟು" ಎಂಬ ಪದಗಳು, ಅಂಕಿಗಳು ಮತ್ತು ಅಕ್ಷರಗಳನ್ನು (13-4-1978ರಿಂದ ಜಾರಿಗೆ ಬರುವಂತೆ) ಬಿಟ್ಟುಬಿಡಲಾಗಿದೆ.

(*a*) either dispose of the case itself, or

(*b*) determine the said question of law and return the case to the court from which the case has been so withdrawn together with a copy of its judgment on such question, and the said court shall on receipt thereof proceed to dispose of the case in conformity with such judgment.

[1]**228A.** [*Special provisions as to disposal of questions relating to constitutional validity of State laws.*] *Rep. by the Constitution (Forty-third Amendment) Act,* 1977, *s*. 10 (*w.e.f.* 13-4-1978).

**229. Officers and servants and the expenses of High Courts:-** (1) Appointments of officers and servants of a High Court shall be made by the Chief Justice of the Court or such other Judge or officer of the Court as he may direct:

Provided that the Governor of the State [2]*** may by rule require that in such cases as may be specified in the rule no person not already attached to the Court shall be appointed to any office connected with the Court save after consultation with the State Public Service Commission.

(2) Subject to the provisions of any law made by the Legislature of the State, the conditions of service of officers and servants of a High Court shall be such as may be prescribed by rules made by the Chief Justice of the Court or by some other Judge or officer of the Court authorised by the Chief Justice to make rules for the purpose:

Provided that the rules made under this clause shall, so far as they relate to salaries, allowances, leave or pensions, require the approval of the Governor of the State [2]***.

(3) The administrative expenses of a High Court, including all salaries, allowances and pensions payable to or in respect of the officers and servants of the Court, shall be charged upon the Consolidated Fund of the State, and any fees or other moneys taken by the Court shall form part of that Fund.

[3][**230. Extension of jurisdiction of High Courts to Union territories:-** (1) Parliament may by law extend the jurisdiction of a High Court to, or exclude the jurisdiction of a High Court from, any Union territory.

(2) Where the High Court of a State exercises jurisdiction in relation to a Union territory,-

---

1. Ins. by the Constitution (Forty-second Amendment) Act, 1976, s.42 (w.e.f. 1.2.1997)

2. The words "in which the High Court has its principal seat" omitted by the Constitution (Seventh Amendment) Act, 1956, s. 29 and Sch.

3. Subs. by s. 16, *ibid.*, for arts. 230, 231 and 232.

(ಎ) ಆ ಮೊಕದ್ದಮೆಯನ್ನು ತಾನೇ ವಿಲೆ ಮಾಡಬಹುದು, ಅಥವಾ

(ಬಿ) ಸದರಿ ಕಾನೂನಿನ ಪ್ರಶ್ನೆಯನ್ನು ತಾನೆ ನಿರ್ಧರಿಸಬಹುದು ಮತ್ತು ಆ ಮೊಕದ್ದಮೆಯನ್ನು ಯಾವ ನ್ಯಾಯಾಲಯದಿಂದ ತರಿಸಿಕೊಳ್ಳಲಾಗಿತ್ತೋ ಆ ನ್ಯಾಯಾಲಯಕ್ಕೆ ಅಂಥ ಪ್ರಶ್ನೆಯ ಮೇಲಿನ ತನ್ನ ತೀರ್ಪಿನ ಒಂದು ಪ್ರತಿಯೊಂದಿಗೆ ಅದನ್ನು ವಾಪಸ್ಸು ಕಳುಹಿಸಿಕೊಡಬಹುದು ಮತ್ತು ಸದರಿ ಅಧೀನ ನ್ಯಾಯಾಲಯವು ಆ ಮೊಕದ್ದಮೆಯನ್ನು ಸ್ವೀಕರಿಸಿದ ಮೇಲೆ, ಆ ತೀರ್ಪಿಗೆ ಅನುಸಾರ ಅದನ್ನು ವಿಲೆ ಮಾಡಲು ಕ್ರಮಕೈಗೊಳ್ಳತಕ್ಕದ್ದು.

[1]**228ಎ. [ರಾಜ್ಯ ಕಾನೂನುಗಳ ಸಂವಿಧಾನಾತ್ಮಕ ಸಿಂಧುತ್ವಕ್ಕೆ ಸಂಬಂಧಿಸಿದ ಪ್ರಶ್ನೆಗಳ ವಿಲೆಯ ಬಗ್ಗೆ ವಿಶೇಷ ಉಪಬಂಧಗಳು**]. 1977ನೇ ಇಸವಿಯ ಸಂವಿಧಾನ (ನಲವತ್ತಮೂರನೆಯ ತಿದ್ದುಪಡಿ) ಅಧಿನಿಯಮದ 10ನೆಯ ಪ್ರಕರಣದ ಮೂಲಕ 13-4-1978ರಿಂದ ಜಾರಿಗೆ ಬರುವಂತೆ ನಿರಸನಗೊಳಿಸಲಾಗಿದೆ.

**229. ಉಚ್ಚ ನ್ಯಾಯಾಲಯಗಳ ಅಧಿಕಾರಿಗಳು ಮತ್ತು ನೌಕರರು ಹಾಗೂ ವೆಚ್ಚಗಳು:-** (1) ಉಚ್ಚ ನ್ಯಾಯಾಲಯದ ಅಧಿಕಾರಿಗಳು ಮತ್ತು ನೌಕರರ ನೇಮಕಗಳನ್ನು ಆ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಯು ಅಥವಾ ಅವನು ನಿರ್ದೇಶಿಸಬಹುದಾದಂಥ ಆ ನ್ಯಾಯಾಲಯದ ಇತರ ನ್ಯಾಯಾಧೀಶನು ಅಥವಾ ಅಧಿಕಾರಿಯು ಮಾಡತಕ್ಕದ್ದು:

ಪರಂತು, [2] * * * ಆ ರಾಜ್ಯದ ರಾಜ್ಯಪಾಲನು ನಿಯಮದ ಮೂಲಕ ಆ ನಿಯಮದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಸಂದರ್ಭಗಳಲ್ಲಿ, ಆ ನ್ಯಾಯಾಲಯಕ್ಕೆ ಈ ಮೊದಲೇ ಸೇರಿಲ್ಲದ ಯಾರೇ ವ್ಯಕ್ತಿಯನ್ನು ಆ ರಾಜ್ಯದ ಲೋಕಸೇವಾ ಆಯೋಗದೊಡನೆ ಸಮಾಲೋಚನೆ ಮಾಡಿದ ಹೊರತು ಆ ನ್ಯಾಯಾಲಯಕ್ಕೆ ಸಂಬಂಧಪಟ್ಟ ಯಾವುದೇ ಪದಕ್ಕೆ ನೇಮಕ ಮಾಡತಕ್ಕದ್ದಲ್ಲವೆಂದು ಅಗತ್ಯಪಡಿಸಬಹುದು.

(2) ರಾಜ್ಯದ ವಿಧಾನಮಂಡಲವು ಮಾಡಿದ ಯಾವುದೇ ಕಾನೂನಿನ ಉಪಬಂಧಗಳಿಗೆ ಒಳಪಟ್ಟು, ಉಚ್ಚ ನ್ಯಾಯಾಲಯದ ಅಧಿಕಾರಿಗಳ ಮತ್ತು ನೌಕರರ ಸೇವಾ ಷರತ್ತುಗಳು, ಆ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಯು ಅಥವಾ ಆ ಉದ್ದೇಶಕ್ಕಾಗಿ ನಿಯಮಗಳನ್ನು ರಚಿಸಲು ಅವನು ಅಧಿಕೃತಗೊಳಿಸುವಂಥ ಆ ನ್ಯಾಯಾಲಯದ ಇತರ ನ್ಯಾಯಾಧೀಶನು ಅಥವಾ ಅಧಿಕಾರಿಯು ರಚಿಸಿದ ನಿಯಮಗಳ ಮೂಲಕ ನಿಯಮಿಸಬಹುದಾದಂತೆ ಇರತಕ್ಕದ್ದು:

ಪರಂತು, ಸಂಬಳಗಳಿಗೆ, ಭತ್ಯೆಗಳಿಗೆ, ರಜೆಗೆ ಅಥವಾ ನಿವೃತ್ತಿವೇತನಗಳಿಗೆ ಸಂಬಂಧಪಡುವಷ್ಟರ ಮಟ್ಟಿಗೆ, ಈ ಖಂಡದ ಮೇರೆಗೆ ಮಾಡಿದ ನಿಯಮಗಳಿಗೆ [2] * * * ಆ ರಾಜ್ಯದ ರಾಜ್ಯಪಾಲನ ಅನುಮೋದನೆಯು ಅಗತ್ಯವಾಗಿರತಕ್ಕದ್ದು.

(3) ಉಚ್ಚ ನ್ಯಾಯಾಲಯದ ಅಧಿಕಾರಿಗಳಿಗೆ ಮತ್ತು ನೌಕರರಿಗೆ ಅಥವಾ ಅವರಿಗೆ ಸಂಬಂಧಿಸಿದಂತೆ ಸಂದಾಯವಾಗಬೇಕಾದ ಎಲ್ಲ ಸಂಬಳಗಳು, ಭತ್ಯೆಗಳು ಮತ್ತು ನಿವೃತ್ತಿವೇತನಗಳೂ ಸೇರಿ, ಆ ಉಚ್ಚ ನ್ಯಾಯಾಲಯದ ಆಡಳಿತ ವೆಚ್ಚವನ್ನು ಆ ರಾಜ್ಯದ ಸಂಚಿತ ನಿಧಿಯ ಮೇಲೆ ಹೊರಿಸತಕ್ಕದ್ದು ಮತ್ತು ಆ ನ್ಯಾಯಾಲಯಕ್ಕೆ ಬರುವ ಯಾವುವೇ ಫೀಜುಗಳು ಅಥವಾ ಇತರ ಹಣಗಳು ಆ ಸಂಚಿತ ನಿಧಿಯ ಭಾಗವಾಗತಕ್ಕದ್ದು.

[3][**230. ಉಚ್ಚ ನ್ಯಾಯಾಲಯಗಳ ಅಧಿಕಾರವ್ಯಾಪ್ತಿಯನ್ನು ಒಕ್ಕೂಟ ರಾಜ್ಯಕ್ಷೇತ್ರಗಳಿಗೆ ವಿಸ್ತರಿಸುವುದು:-** (1) ಸಂಸತ್ತು, ಕಾನೂನಿನ ಮೂಲಕ ಯಾವುದೇ ಉಚ್ಚ ನ್ಯಾಯಾಲಯದ ಅಧಿಕಾರವ್ಯಾಪ್ತಿಯನ್ನು ಯಾವುದೇ ಒಕ್ಕೂಟ ರಾಜ್ಯಕ್ಷೇತ್ರಕ್ಕೆ ವಿಸ್ತರಿಸಬಹುದು ಅಥವಾ ಯಾವುದೇ ಉಚ್ಚ ನ್ಯಾಯಾಲಯದ ಅಧಿಕಾರ ವ್ಯಾಪ್ತಿಯನ್ನು ಯಾವುದೇ ಒಕ್ಕೂಟ ರಾಜ್ಯಕ್ಷೇತ್ರದಿಂದ ಹೊರತುಪಡಿಸಬಹುದು.

(2) ಯಾವುದೇ ರಾಜ್ಯದ ಉಚ್ಚ ನ್ಯಾಯಾಲಯವು ಒಂದು ಒಕ್ಕೂಟ ರಾಜ್ಯಕ್ಷೇತ್ರದ ಸಂಬಂಧದಲ್ಲಿ ಅಧಿಕಾರವ್ಯಾಪ್ತಿಯನ್ನು ಚಲಾಯಿಸುತ್ತಿರುವಾಗ,-

---

1. 1976ನೇ ಇಸವಿಯ ಸಂವಿಧಾನ (ನಲವತ್ತನಾಲ್ಕನೆಯ ತಿದ್ದುಪಡಿ) ಅಧಿನಿಯಮದ 42ನೇ ಪ್ರಕರಣದ ಮೂಲಕ (1-2-77ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿತ್ತು.
2. 1956ನೆ ಇಸವಿಯ ಸಂವಿಧಾನ (ಏಳನೆಯ ತಿದ್ದುಪಡಿ) ಅಧಿನಿಯಮದ 29ನೆಯ ಪ್ರಕರಣದ ಮೂಲಕ ಹಾಗೂ ಅನುಸೂಚಿಯ ಮೂಲಕ ಆ "ಉಚ್ಚ ನ್ಯಾಯಾಲಯದ ಮುಖ್ಯ ಸ್ಥಾನವು ಯಾವ ರಾಜ್ಯದಲ್ಲಿದೆಯೋ" ಎಂಬ ಪದಗಳನ್ನು ಬಿಟ್ಟುಬಿಡಲಾಗಿದೆ.
3. 1956ನೇ ಇಸವಿಯ ಸಂವಿಧಾನ (ಏಳನೆಯ ತಿದ್ದುಪಡಿ) ಅಧಿನಿಯಮದ 16ನೆಯ ಪ್ರಕರಣದ ಮೂಲಕ ಮತ್ತು 230, 231 ಮತ್ತು 232ನೆಯ ಅನುಚ್ಛೇದಗಳಿಗೆ ಬದಲಾಗಿ ಈ ಅನುಚ್ಛೇದಗಳನ್ನು ಪ್ರತ್ಯಾಯೋಜಿಸಲಾಗಿದೆ.

(*a*) nothing in this Constitution shall be construed as empowering the Legislature of the State to increase, restrict or abolish that jurisdiction; and

(*b*) the reference in article 227 to the Governor shall, in relation to any rules, forms or tables for subordinate courts in that territory, be construed as a reference to the President.

**231. Establishment of a common High Court for two or more States:-** (1) Notwithstanding anything contained in the preceding provisions of this Chapter, Parliament may by law establish a common High Court for two or more States or for two or more States and a Union territory.

(2) In relation to any such High Court,-

(a) [1]* * * * *

(b) the reference in article 227 to the Governor shall, in relation to any rules, forms or tables for subordinate courts, be construed as a reference to the Governor of the State in which the subordinate courts are situate; and

(*c*) the references in articles 219 and 229 to the State shall be construed as a reference to the State in which the High Court has its principal seat:

Provided that if such principal seat is in a Union territory, the references in articles 219 and 229 to the Governor, Public Service Commission, Legislature and Consolidated Fund of the State shall be construed respectively as references to the President, Union Public Service Commission, Parliament and Consolidated Fund of India.]

## CHAPTER VI - SUBORDINATE COURTS

**233. Appointment of district judges:-** (1) Appointments of persons to be, and the posting and promotion of, district judges in any State shall be made by the Governor of the State in consultation with the High Court exercising jurisdiction in relation to such State.

(2) A person not already in the service of the Union or of the State shall only be eligible to be appointed a district judge if he has been for not less than seven years an advocate or a pleader and is recommended by the High Court for appointment.

---

1. Omitted by the Constitution (Ninety-ninth Amendment) Act, 2014, s. 10 (w.e.f. 13-4-2015). This amendment has been struck down by the Supreme Court's order dated 16th October, 2015

(ಎ) ಈ ಸಂವಿಧಾನದಲ್ಲಿರುವುದು ಯಾವುದೂ ಆ ರಾಜ್ಯದ ವಿಧಾನಮಂಡಲಕ್ಕೆ ಆ ಅಧಿಕಾರ ವ್ಯಾಪ್ತಿಯನ್ನು ಹೆಚ್ಚಿಸುವ, ನಿರ್ಬಂಧಿಸುವ ಅಥವಾ ರದ್ದುಮಾಡುವ ಅಧಿಕಾರವನ್ನು ಕೊಡುತ್ತದೆ ಎಂದು ಅರ್ಥೈಸತಕ್ಕದ್ದಲ್ಲ; ಮತ್ತು

(ಬಿ) 227ನೇ ಅನುಚ್ಛೇದದಲ್ಲಿ ರಾಜ್ಯಪಾಲನಿಗೆ ಸಂಬಂಧಪಟ್ಟ ಉಲ್ಲೇಖವನ್ನು ಆ ರಾಜ್ಯಕ್ಷೇತ್ರದಲ್ಲಿನ ಅಧೀನ ನ್ಯಾಯಾಲಯಗಳ ಬಗ್ಗೆ ಮಾಡಿದ ಯಾವುವೇ ನಿಯಮಗಳು, ನಮೂನೆಗಳು ಅಥವಾ ಕೋಷ್ಟಕಗಳಿಗೆ ಸಂಬಂಧಿಸಿದಂತೆ, ರಾಷ್ಟ್ರಪತಿಯನ್ನು ಕುರಿತು ಮಾಡಿರುವ ಉಲ್ಲೇಖವೆಂದು ಅರ್ಥೈಸತಕ್ಕದ್ದು.

**231. ಎರಡು ಅಥವಾ ಹೆಚ್ಚು ರಾಜ್ಯಗಳಿಗೆ ಒಂದೇ ಉಚ್ಚ ನ್ಯಾಯಾಲಯವನ್ನು ಸ್ಥಾಪಿಸುವುದು:–** (1) ಈ ಅಧ್ಯಾಯದ ಹಿಂದಿನ ಉಪಬಂಧಗಳಲ್ಲಿ ಏನೇ ಅಡಕವಾಗಿದ್ದಾಗ್ಯೂ, ಸಂಸತ್ತು ಕಾನೂನಿನ ಮೂಲಕ ಎರಡು ಅಥವಾ ಹೆಚ್ಚು ರಾಜ್ಯಗಳಿಗೆ ಅಥವಾ ಎರಡು ಅಥವಾ ಹೆಚ್ಚು ರಾಜ್ಯಗಳು ಮತ್ತು ಒಂದು ಒಕ್ಕೂಟ ರಾಜ್ಯಕ್ಷೇತ್ರಕ್ಕೆ ಒಂದೇ ಉಚ್ಚ ನ್ಯಾಯಾಲಯವನ್ನು ಸ್ಥಾಪಿಸಬಹುದು.

(2) ಅಂಥ ಯಾವುದೇ ಉಚ್ಚ ನ್ಯಾಯಾಲಯಕ್ಕೆ ಸಂಬಂಧಿಸಿದಂತೆ,–

(ಎ) [1]* * * * *

(ಬಿ) 227ನೆಯ ಅನುಚ್ಛೇದದಲ್ಲಿ ರಾಜ್ಯಪಾಲನಿಗೆ ಸಂಬಂಧಪಟ್ಟ ಉಲ್ಲೇಖವನ್ನು ಅಧೀನ ನ್ಯಾಯಾಲಯಗಳ ಬಗ್ಗೆ ಮಾಡಿರುವ ಯಾವುವೇ ನಿಯಮಗಳು, ನಮೂನೆಗಳು ಅಥವಾ ಕೋಷ್ಟಕಗಳಿಗೆ ಸಂಬಂಧಿಸಿದಂತೆ, ಆ ಅಧೀನ ನ್ಯಾಯಾಲಯಗಳು ಇರುವ ರಾಜ್ಯದ ರಾಜ್ಯಪಾಲನನ್ನು ಕುರಿತು ಮಾಡಿದ ಉಲ್ಲೇಖವೆಂದು ಅರ್ಥೈಸತಕ್ಕದ್ದು; ಮತ್ತು

(ಸಿ) 219ನೆಯ ಮತ್ತು 229ನೆಯ ಅನುಚ್ಛೇದಗಳಲ್ಲಿ ರಾಜ್ಯಕ್ಕೆ ಸಂಬಂಧಪಟ್ಟ ಉಲ್ಲೇಖಗಳನ್ನು ಉಚ್ಚ ನ್ಯಾಯಾಲಯದ ಮುಖ್ಯ ಸ್ಥಾನವಿರುವ ರಾಜ್ಯವನ್ನು ಕುರಿತು ಮಾಡಿರುವ ಉಲ್ಲೇಖವೆಂದು ಅರ್ಥೈಸತಕ್ಕದ್ದು:

ಪರಂತು, ಅಂಥ ಮುಖ್ಯಸ್ಥಾನವು ಒಂದು ಒಕ್ಕೂಟ ರಾಜ್ಯಕ್ಷೇತ್ರದಲ್ಲಿದ್ದರೆ, 219ನೆಯ ಮತ್ತು 229ನೆಯ ಅನುಚ್ಛೇದಗಳಲ್ಲಿ ರಾಜ್ಯದ ರಾಜ್ಯಪಾಲನಿಗೆ, ಲೋಕಸೇವಾ ಆಯೋಗಕ್ಕೆ, ವಿಧಾನಮಂಡಲಕ್ಕೆ ಮತ್ತು ಸಂಚಿತನಿಧಿಗೆ ಸಂಬಂಧಪಟ್ಟ ಉಲ್ಲೇಖಗಳನ್ನು ಅನುಕ್ರಮವಾಗಿ ರಾಷ್ಟ್ರಪತಿ, ಕೇಂದ್ರ ಲೋಕಸೇವಾ ಆಯೋಗ, ಸಂಸತ್ತು ಮತ್ತು ಭಾರತದ ಸಂಚಿತ ನಿಧಿ ಕುರಿತು ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು.

## ಅಧ್ಯಾಯ – VI ಅಧೀನ ನ್ಯಾಯಾಲಯಗಳು

**233. ಜಿಲ್ಲಾ ನ್ಯಾಯಾಧೀಶರ ನೇಮಕ:–** (1) ಯಾವುದೇ ರಾಜ್ಯದ ರಾಜ್ಯಪಾಲನು, ಆ ರಾಜ್ಯದಲ್ಲಿ ಜಿಲ್ಲಾ ನ್ಯಾಯಾಧೀಶರ ನೇಮಕ, ಸ್ಥಳನಿಯುಕ್ತಿ ಮತ್ತು ಬಡ್ತಿಯನ್ನು ಅಂಥ ರಾಜ್ಯಕ್ಕೆ ಸಂಬಂಧಿಸಿದಂತೆ ಅಧಿಕಾರವ್ಯಾಪ್ತಿಯನ್ನು ಚಲಾಯಿಸುತ್ತಿರುವ ಉಚ್ಚ ನ್ಯಾಯಾಲಯದೊಡನೆ ಸಮಾಲೋಚಿಸಿದ ತರುವಾಯ ಮಾಡತಕ್ಕದ್ದು.

(2) ಒಕ್ಕೂಟದ ಅಥವಾ ರಾಜ್ಯದ ಸೇವೆಯಲ್ಲಿ ಈ ಮೊದಲೇ ಇಲ್ಲದಿರುವ ಯಾರೇ ವ್ಯಕ್ತಿಯು ಏಳು ವರ್ಷಗಳಿಗಿಂತ ಕಡಿಮೆಯಿಲ್ಲದಷ್ಟು ಕಾಲ ನ್ಯಾಯವಾದಿಯಾಗಿದ್ದು ಅಥವಾ ಪ್ಲೀಡರ್ ಆಗಿದ್ದು ಅವನನ್ನು ಜಿಲ್ಲಾ ನ್ಯಾಯಾಧೀಶನಾಗಿ ನೇಮಿಸಲು ಉಚ್ಚ ನ್ಯಾಯಾಲಯವು ಶಿಫಾರಸ್ಸು ಮಾಡಿದ್ದರೆ ಮಾತ್ರ ಅವನು ಹಾಗೆ ನೇಮಕಗೊಳ್ಳಲು ಅರ್ಹನಾಗಿರತಕ್ಕದ್ದು.

---

1. ಸಂವಿಧಾನ (99ನೆಯ ತಿದ್ದುಪಡಿ) ಅಧಿನಿಯಮ, 2014 ಪ್ರ. 10ರ (13.4.2015ರಿಂದ ಜಾರಿಗೆ ಬರುವಂತೆ) ಮೂಲಕ ಬಿಟ್ಟುಬಿಡಲಾಗಿದೆ. ಈ ತಿದ್ದುಪಡಿಯನ್ನು ಸರ್ವೋಚ್ಚ ನ್ಯಾಯಾಲಯವು ತನ್ನ ಆದೇಶ ದಿನಾಂಕ:16–10–2015ರಲ್ಲಿ ಅಸಿಂಧುಗೊಳಿಸಿದೆ.

[1][**233A. Validation of appointments of, and judgments, etc., delivered by, certain district judges**:- Notwithstanding any judgment, decree or order of any court,-

(*a*) (*i*) no appointment of any person already in the judicial service of a State or of any person who has been for not less than seven years an advocate or a pleader, to be a district judge in that State, and

(*ii*) no posting, promotion or transfer of any such person as a district judge,

made at any time before the commencement of the Constitution (Twentieth Amendment) Act, 1966, otherwise than in accordance with the provisions of article 233 or article 235 shall be deemed to be illegal or void or ever to have become illegal or void by reason only of the fact that such appointment, posting, promotion or transfer was not made in accordance with the said provisions;]

(*b*) no jurisdiction exercised, no judgment, decree, sentence or order passed or made, and no other act or proceeding done or taken, before the commencement of the Constitution (Twentieth Amendment) Act, 1966 by, or before, any person appointed, posted, promoted or transferred as a district judge in any State otherwise than in accordance with the provisions of article 233 or article 235 shall be deemed to be illegal or invalid or ever to have become illegal or invalid by reason only of the fact that such appointment, posting, promotion or transfer was not made in accordance with the said provisions.]

**234. Recruitment of persons other than district judges to the judicial service:-** Appointments of persons other than district judges to the judicial service of a State shall be made by the Governor of the State in accordance with rules made by him in that behalf after consultation with the State Public Service Commission and with the High Court exercising jurisdiction in relation to such State.

**235. Control over subordinate courts:-** The control over district courts and courts subordinate thereto including the posting and promotion of, and the grant of leave to, persons belonging to the judicial service of a State and holding any post inferior to the post of district judge shall be vested in the High Court, but nothing in this article shall be construed as taking away from any such person any right of appeal which he may have under the law regulating the conditions of his service or as authorising the High Court to deal with him otherwise than in accordance with the conditions of his service prescribed under such law.

---

1. Ins. by the Constitution (Twentieth Amendment) Act, 1966, s. 2.

[1][233ಎ. **ಕೆಲವು ಜಿಲ್ಲಾ ನ್ಯಾಯಾಧೀಶರ ನೇಮಕ ಮತ್ತು ಅವರು ಕೊಟ್ಟಿರುವ ತೀರ್ಪು, ಇತ್ಯಾದಿಗಳ ಸಿಂಧುತ್ವ:-** ಯಾವುದೇ ನ್ಯಾಯಾಲಯದ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶ ಏನೇ ಇದ್ದಾಗ್ಯೂ, 1966ನೇ ಇಸವಿಯ ಸಂವಿಧಾನ (ಇಪ್ಪತ್ತನೆಯ ತಿದ್ದುಪಡಿ) ಅಧಿನಿಯಮದ ಪ್ರಾರಂಭಕ್ಕೆ ಮುಂಚೆ ಯಾವುದೇ ಕಾಲದಲ್ಲಿ,-

(ಎ) (i) ಯಾವುದೇ ರಾಜ್ಯದ ನ್ಯಾಯಿಕ ಸೇವೆಯಲ್ಲಿ ಈಗಾಗಲೇ ಇರುವ ಯಾರೇ ವ್ಯಕ್ತಿಯನ್ನು ಅಥವಾ ಏಳು ವರ್ಷಗಳಿಗೆ ಕಡಿಮೆಯಿಲ್ಲದಷ್ಟು ಕಾಲ ನ್ಯಾಯವಾದಿಯಾಗಿದ್ದ ಅಥವಾ ಪ್ಲೀಡರನಾಗಿದ್ದ ಯಾರೇ ವ್ಯಕ್ತಿಯನ್ನು 233ನೆಯ ಅಥವಾ 235ನೆಯ ಅನುಚ್ಛೇದದ ಉಪಬಂಧಗಳಿಗನುಸಾರವಾಗಿಯಲ್ಲದೆ ಅನ್ಯಥಾ ಆ ರಾಜ್ಯದಲ್ಲಿ ಜಿಲ್ಲಾ ನ್ಯಾಯಾಧೀಶನನ್ನಾಗಿ ಮಾಡಿದ ಯಾವುದೇ ನೇಮಕವನ್ನು, ಮತ್ತು

(ii) ಸದರಿ ಉಪಬಂಧಗಳಿಗನುಸಾರವಾಗಲ್ಲದೆ ಅನ್ಯಥಾ ಜಿಲ್ಲಾ ನ್ಯಾಯಾಧೀಶನಾಗಿ ನೇಮಕಗೊಂಡ ಅಂಥ ಯಾರೇ ವ್ಯಕ್ತಿಯ ಯಾವುದೇ ಸ್ಥಳ ನಿಯುಕ್ತಿ, ಬಡ್ತಿ ಅಥವಾ ವರ್ಗಾವಣೆಯನ್ನು

- ಸದರಿ ಉಪಬಂಧಗಳಿಗನುಸಾರವಾಗಿ ಮಾಡಿಲ್ಲವೆಂಬ ಸಂಗತಿಯ ಕಾರಣಮಾತ್ರದಿಂದ ಅವು ಕಾನೂನುಬಾಹಿರವಾಗಿವೆ ಅಥವಾ ಅನೂರ್ಜಿತವಾಗಿವೆ ಎಂದು ಅಥವಾ ಎಂದಾದರೂ ಕಾನೂನು ಬಾಹಿರವಾಗಿದ್ದುವು ಅಥವಾ ಅನೂರ್ಜಿತವಾಗಿದ್ದುವು ಎಂದು ಭಾವಿಸತಕ್ಕದ್ದಲ್ಲ;

(ಬಿ) 1966ನೆಯ ಸಂವಿಧಾನ (ಇಪ್ಪತ್ತನೆಯ ತಿದ್ದುಪಡಿ) ಅಧಿನಿಯಮದ ಪ್ರಾರಂಭಕ್ಕೆ ಮುಂಚೆ 233ನೆಯ ಅಥವಾ 235ನೆಯ ಅನುಚ್ಛೇದದ ಉಪಬಂಧಗಳಿಗನುಸಾರವಾಗಿಯಲ್ಲದೆ ಅನ್ಯಥಾ ಯಾವುದೇ ರಾಜ್ಯದಲ್ಲಿ ಜಿಲ್ಲಾ ನ್ಯಾಯಾಧೀಶನಾಗಿ ನೇಮಕಗೊಂಡಿರುವ, ಸ್ಥಳನಿಯುಕ್ತಿ ಹೊಂದಿರುವ, ಬಡ್ತಿ ಪಡೆದಿರುವ ಅಥವಾ ವರ್ಗಾವಣೆಯಾಗಿರುವ ಯಾರೇ ವ್ಯಕ್ತಿಯು ಚಲಾಯಿಸಿದ ಯಾವುದೇ ಅಧಿಕಾರವ್ಯಾಪ್ತಿ, ಕೊಟ್ಟ ಅಥವಾ ಮಾಡಿದ ಯಾವುದೇ ತೀರ್ಪು, ಡಿಕ್ರಿ, ಶಿಕ್ಷೆ ಅಥವಾ ಆದೇಶವು ಅಥವಾ ಅವನ ಸಮ್ಮುಖದಲ್ಲಿ ಮಾಡಲಾದ ಅಥವಾ ಕೈಗೊಳ್ಳಲಾದ ಇತರ ಯಾವುದೇ ಕಾರ್ಯ ಅಥವಾ ವ್ಯವಹರಣೆಯು, ಅಂಥ ನೇಮಕಾತಿ, ಸ್ಥಳ ನಿಯುಕ್ತಿ, ಬಡ್ತಿ ಅಥವಾ ವರ್ಗಾವಣೆಯನ್ನು ಸದರಿ ಉಪಬಂಧಗಳಿಗನುಸಾರ ಮಾಡಿಲ್ಲವೆಂಬ ಸಂಗತಿಯ ಕಾರಣಮಾತ್ರದಿಂದಲೇ ಕಾನೂನುಬಾಹಿರವಾಗಿವೆ ಅಥವಾ ಅಸಿಂಧುವಾಗಿವೆ ಎಂದು ಅಥವಾ ಎಂದಾದರೂ ಕಾನೂನು ಬಾಹಿರವಾಗಿದ್ದವು ಅಥವಾ ಅಸಿಂಧುವಾಗಿದ್ದವು ಎಂದು ಭಾವಿಸತಕ್ಕದ್ದಲ್ಲ.]

**234. ನ್ಯಾಯಿಕ ಸೇವೆಗೆ ಜಿಲ್ಲಾ ನ್ಯಾಯಾಧೀಶರಲ್ಲದ ಇತರ ವ್ಯಕ್ತಿಗಳ ನೇಮಕಾತಿ:-** ರಾಜ್ಯದ ನ್ಯಾಯಿಕ ಸೇವೆಗೆ ಜಿಲ್ಲಾ ನ್ಯಾಯಾಧೀಶರಲ್ಲದ ಇತರ ವ್ಯಕ್ತಿಗಳ ನೇಮಕಗಳನ್ನು ಮಾಡುವ ಸಂಬಂಧದಲ್ಲಿ ರಾಜ್ಯಪಾಲನು ರಾಜ್ಯ ಲೋಕಸೇವಾ ಆಯೋಗದೊಡನೆ ಮತ್ತು ಅಂಥ ರಾಜ್ಯಕ್ಕೆ ಸಂಬಂಧಿಸಿದಂತೆ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸುತ್ತಿರುವ ಉಚ್ಚ ನ್ಯಾಯಾಲಯದೊಡನೆ ಸಮಾಲೋಚಿಸಿದ ನಂತರ ತಾನು ರಚಿಸಿದ ನಿಯಮಗಳಿಗನುಸಾರವಾಗಿ ಅಂಥ ನೇಮಕಗಳನ್ನು ಮಾಡತಕ್ಕದ್ದು.

**235. ಅಧೀನ ನ್ಯಾಯಾಲಯಗಳ ಮೇಲೆ ನಿಯಂತ್ರಣ:-** ರಾಜ್ಯದ ನ್ಯಾಯಿಕ ಸೇವೆಗೆ ಸೇರಿದ ಮತ್ತು ಜಿಲ್ಲಾ ನ್ಯಾಯಾಧೀಶನ ಪದಕ್ಕೆ ಕಡಿಮೆ ಇರುವ ಯಾವುದೇ ಪದದಲ್ಲಿರುವ ವ್ಯಕ್ತಿಗಳ ಸ್ಥಳನಿಯುಕ್ತಿ, ಬಡ್ತಿ ಮತ್ತು ಅವರಿಗೆ ರಜೆ ಕೊಡುವುದೂ ಸೇರಿ ಜಿಲ್ಲಾ ನ್ಯಾಯಾಲಯಗಳ ಮತ್ತು ಅವುಗಳಿಗೆ ಅಧೀನವಾಗಿರುವ ನ್ಯಾಯಾಲಯಗಳ ಮೇಲಣ ನಿಯಂತ್ರಣವು ಉಚ್ಚ ನ್ಯಾಯಾಲಯದಲ್ಲಿ ನಿಹಿತವಾಗಿರತಕ್ಕದ್ದು; ಆದರೆ ಈ ಅನುಚ್ಛೇದದಲ್ಲಿರುವುದು ಯಾವುದೂ, ಅಂಥ ಯಾರೇ ವ್ಯಕ್ತಿಯ ಸೇವಾ ಷರತ್ತುಗಳನ್ನು ವಿನಿಯಮಗೊಳಿಸುವ ಕಾನೂನಿನ ಮೇರೆಗೆ ಅಪೀಲು ಮಾಡಲು ಅವನು ಹೊಂದಿರಬಹುದಾದ ಯಾವುದೇ ಹಕ್ಕನ್ನು ಅವನಿಂದ ಕಸಿದುಕೊಳ್ಳುವುದೆಂದು ಅಥವಾ ಅಂಥ ಕಾನೂನಿನ ಮೇರೆಗೆ ನಿಯಮಿಸಿದ ಅವನ ಸೇವಾ ಷರತ್ತುಗಳಿಗನುಸಾರವಾಗಿಯಲ್ಲದೆ ಅನ್ಯಥಾ ಅವನೊಡನೆ ವ್ಯವಹರಿಸಲು ಉಚ್ಚ ನ್ಯಾಯಾಲಯವನ್ನು ಅಧಿಕೃತಗೊಳಿಸುವುದೆಂದು ಅರ್ಥೈಸತಕ್ಕದ್ದಲ್ಲ.

---

1. 1966ನೇ ಇಸವಿಯ ಸಂವಿಧಾನ (ಇಪ್ಪತ್ತನೆಯ ತಿದ್ದುಪಡಿ) ಅಧಿನಿಯಮದ 2ನೆಯ ಪ್ರಕರಣದ ಮೂಲಕ ಸೇರಿಸಲಾಗಿದೆ.

**236. Interpretation:-** In this Chapter,-

(*a*) the expression "district judge" includes judge of a city civil court, additional district judge, joint district judge, assistant district judge, chief judge of a small cause court, chief presidency magistrate, additional chief presidency magistrate, sessions judge, additional sessions judge and assistant sessions Judge;

(*b*) the expression "judicial service" means a service consisting exclusively of persons intended to fill the post of district judge and other civil judicial posts inferior to the post of district judge.

**237. Application of the provisions of this Chapter to certain class or classes of magistrates:-** The Governor may by public notification direct that the foregoing provisions of this Chapter and any rules made thereunder shall with effect from such date as may be fixed by him in that behalf apply in relation to any class or classes of magistrates in the State as they apply in relation to persons appointed to the judicial service of the State subject to such exceptions and modifications as may be specified in the notification.

**236. ಅರ್ಥ ವಿವರಣೆ:-** ಈ ಅಧ್ಯಾಯದಲ್ಲಿ,-

(ಎ) "ಜಿಲ್ಲಾ ನ್ಯಾಯಾಧೀಶ" ಎಂಬ ಪದವು ನಗರ ಸಿವಿಲ್ ನ್ಯಾಯಾಲಯದ ನ್ಯಾಯಾಧೀಶ, ಹೆಚ್ಚುವರಿ ಜಿಲ್ಲಾ ನ್ಯಾಯಾಧೀಶ, ಜಂಟಿ ಜಿಲ್ಲಾ ನ್ಯಾಯಾಧೀಶ, ಸಹಾಯಕ ಜಿಲ್ಲಾ ನ್ಯಾಯಾಧೀಶ, ಲಘು ವಿವಾದ ನ್ಯಾಯಾಲಯದ ಮುಖ್ಯ ನ್ಯಾಯಾಧೀಶ, ಚೀಫ್ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟ್, ಅಡಿಷನಲ್ ಚೀಫ್ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟ್, ಸೆಷನ್ಸ್ ನ್ಯಾಯಾಧೀಶ, ಹೆಚ್ಚುವರಿ ಸೆಷನ್ಸ್ ನ್ಯಾಯಾಧೀಶ ಮತ್ತು ಸಹಾಯಕ ಸೆಷನ್ಸ್ ನ್ಯಾಯಾಧೀಶರನ್ನು ಒಳಗೊಳ್ಳುತ್ತದೆ;

(ಬಿ) "ನ್ಯಾಯಿಕ ಸೇವೆ" ಎಂದರೆ ಜಿಲ್ಲಾ ನ್ಯಾಯಾಧೀಶನ ಹುದ್ದೆಯನ್ನು ಮತ್ತು ಜಿಲ್ಲಾ ನ್ಯಾಯಾಧೀಶನ ಹುದ್ದೆಗಿಂತ ಕಡಿಮೆಯಿರುವ ಇತರ ಸಿವಿಲ್ ನ್ಯಾಯಿಕ ಹುದ್ದೆಗಳನ್ನು ಭರ್ತಿಮಾಡುವ ಉದ್ದೇಶದಿಂದ ನೇಮಕಮಾಡಲಾಗುವ ವ್ಯಕ್ತಿಗಳನ್ನು ಮಾತ್ರವೇ ಒಳಗೊಂಡ ಸೇವೆ ಎಂದರ್ಥ.

**237. ಕೆಲವು ದರ್ಜೆ ಅಥವಾ ದರ್ಜೆಗಳ ಮ್ಯಾಜಿಸ್ಟ್ರೇಟರುಗಳಿಗೆ ಈ ಅಧ್ಯಾಯದ ಉಪಬಂಧಗಳ ಅನ್ವಯ:-** ಈ ಅಧ್ಯಾಯದಲ್ಲಿ ಹಿಂದೆ ಹೇಳಿದ ಉಪಬಂಧಗಳು ಮತ್ತು ಅವುಗಳ ಮೇರೆಗೆ ರಚಿಸಿದ ಯಾವುವೇ ನಿಯಮಗಳು ರಾಜ್ಯದ ನ್ಯಾಯಿಕ ಸೇವೆಗೆ ನೇಮಕಗೊಂಡಿರುವ ವ್ಯಕ್ತಿಗಳ ಸಂಬಂಧದಲ್ಲಿ ಅನ್ವಯಿಸುವಂತೆಯೇ, ರಾಜ್ಯಪಾಲನು ಸಾರ್ವಜನಿಕ ಅಧಿಸೂಚನೆಯ ಮೂಲಕ ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ವಿನಾಯಿತಿಗಳು ಮತ್ತು ಮಾರ್ಪಾಟುಗಳಿಗೆ ಒಳಪಟ್ಟು, ಅವನು ಈ ಬಗ್ಗೆ ನಿಗದಿಪಡಿಸಬಹುದಾದಂಥ ದಿನಾಂಕದಿಂದ ರಾಜ್ಯದಲ್ಲಿರುವ ಯಾವುದೇ ದರ್ಜೆಯ ಅಥವಾ ಯಾವುವೇ ದರ್ಜೆಗಳ ಮ್ಯಾಜಿಸ್ಟ್ರೇಟರುಗಳಿಗೆ ಸಂಬಂಧಿಸಿದಂತೆಯೂ ಅನ್ವಯಿಸತಕ್ಕದ್ದೆಂದು ನಿರ್ದೇಶಿಸಬಹುದು.

## *Part VII*

[*The States in Part B of the First Schedule.*] *Rep. by the Constitution* (*Seventh Amendment*) *Act,* 1956, *s.* 29 *and Sch.*

## PART VIII

### [1][THE UNION TERRITORIES]

[2][**239. Administration of Union territories:-** (1) Save as otherwise provided by Parliament by law, every Union territory shall be administered by the President acting, to such extent as he thinks fit, through an administrator to be appointed by him with such designation as he may specify.

(2) Notwithstanding anything contained in Part VI, the President may appoint the Governor of a State as the administrator of an adjoining Union territory, and where a Governor is so appointed, he shall exercise his functions as such administrator independently of his Council of Ministers.

[3][**239A. Creation of local Legislatures or Council of Ministers or both for certain Union territories:-** (1) Parliament may by law create [4][for the Union territory of [5][Puducherry]],-

(a) a body, whether elected or partly nominated and partly elected, to function as a Legislature for the Union territory, or

(b) a Council of Ministers,

or both with such constitution, powers and functions, in each case, as may be specified in the law.

(2) Any such law as is referred to in clause (1) shall not be deemed to be an amendment of this Constitution for the purposes of article 368 notwithstanding that it contains any provision which amends or has the effect of amending this Constitution.]

[6][**239AA. Special provisions with respect to Delhi:-** (1) As from the date of commencement of the Constitution (Sixty-ninth Amendment) Act, 1991, the Union territory of Delhi shall be called the National Capital Territory of Delhi (hereafter in this Part referred to as the National Capital Territory) and the administrator thereof appointed under article 239 shall be designated as the Lieutenant Governor.

---

1. Subs. by the Constitution (Seventh Amendment) Act, 1956, s. 17, for the heading "THE STATES IN PART- C OF THE FIRST SCHEDULE''.
2. Subs. by s. 17, *ibid.*, for arts. 239 and 240.
3. Ins. by the Constitution (Fourteenth Amendment) Act, 1962, s. 4.
4. Subs. by the Goa, Daman and Diu Reorganisation Act, 1987 (18 of 1987), s. 63, for "for any of the Union territories of Goa, Daman and Diu and Pondicherry" (w.e.f. 30-5-1987).
5. Subs. by the Pondicherry (Alteration of Name) Act, 2006 (44 of 2006), s. 4, for "Pondicherry" (w.e.f. 1-10-2006).
6. Ins. by the Constitution (Sixty-ninth Amendment) Act, 1991, s. 2 (w.e.f. 1-2-1992)

## ಭಾಗ - VII

[ಮೊದಲನೆಯ ಅನುಸೂಚಿಯ 'ಬಿ' ಭಾಗದಲ್ಲಿರುವ ರಾಜ್ಯಗಳು.] 1956ನೆಯ ಇಸವಿಯ ಸಂವಿಧಾನ (ಏಳನೆಯ ತಿದ್ದುಪಡಿ) ಅಧಿನಿಯಮದ 29ನೆಯ ಪ್ರಕರಣದ ಮತ್ತು ಅನುಸೂಚಿಯ ಮೂಲಕ ನಿರಸನಗೊಳಿಸಲಾಗಿದೆ.

## ಭಾಗ - VIII

## [1][ಒಕ್ಕೂಟ ರಾಜ್ಯ ಕ್ಷೇತ್ರಗಳು]

[2][**239. ಒಕ್ಕೂಟ ರಾಜ್ಯಕ್ಷೇತ್ರಗಳ ಆಡಳಿತ:-** (1) ಸಂಸತ್ತು ಕಾನೂನಿನ ಮೂಲಕ ಅನ್ಯಥಾ ಉಪಬಂಧಿಸಿರುವ ಹೊರತು ರಾಷ್ಟ್ರಪತಿಯು ತಾನು ನೇಮಿಸಬಹುದಾದ ಮತ್ತು ನಿರ್ದಿಷ್ಟಪಡಿಸಬಹುದಾದಂಥ ಪದನಾಮವನ್ನು ಹೊಂದಿರುವ ಒಬ್ಬ ಆಡಳಿತಗಾರನ ಮೂಲಕ ತನಗೆ ಯುಕ್ತವೆಂದು ತೋರುವಷ್ಟರಮಟ್ಟಿಗೆ ಕಾರ್ಯನಿರ್ವಹಿಸಿ ಪ್ರತಿಯೊಂದು ಒಕ್ಕೂಟ ರಾಜ್ಯಕ್ಷೇತ್ರದ ಆಡಳಿತವನ್ನು ನಡೆಸತಕ್ಕದ್ದು.

(2) ಭಾಗ - VI ರಲ್ಲಿ ಏನೇ ಒಳಗೊಂಡಿದ್ದಾಗ್ಯೂ, ರಾಷ್ಟ್ರಪತಿಯು ಒಂದು ರಾಜ್ಯದ ರಾಜ್ಯಪಾಲನನ್ನು ಆ ರಾಜ್ಯಕ್ಕೆ ಹೊಂದಿಕೊಂಡಿರುವ ಯಾವುದೇ ಒಕ್ಕೂಟ ರಾಜ್ಯಕ್ಷೇತ್ರದ ಆಡಳಿತಗಾರನನ್ನಾಗಿ ನೇಮಕ ಮಾಡಬಹುದು ಮತ್ತು ಹಾಗೆ ನೇಮಕಗೊಂಡ ರಾಜ್ಯಪಾಲನು ಅಂಥ ಆಡಳಿತಗಾರನಾಗಿ ತನ್ನ ಮಂತ್ರಿಮಂಡಲದಿಂದ ಸ್ವತಂತ್ರನಾಗಿ ತನ್ನ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.]

[3][**239ಎ. ಕೆಲವು ಒಕ್ಕೂಟ ರಾಜ್ಯಕ್ಷೇತ್ರಗಳಿಗಾಗಿ ಸ್ಥಳೀಯ ವಿಧಾನಮಂಡಲಗಳನ್ನು ಅಥವಾ ಮಂತ್ರಿ ಮಂಡಲವನ್ನು ಅಥವಾ ಎರಡನ್ನೂ ಸೃಜಿಸುವುದು:-** (1) [4][[5][ಪುದುಚೆರಿ] ಒಕ್ಕೂಟ ರಾಜ್ಯಕ್ಷೇತ್ರಕ್ಕೆ ಸಂಬಂಧಿಸಿದಂತೆ] ಸಂಸತ್ತು ಕಾನೂನಿನ ಮೂಲಕ,-

(ಎ) ಆ ಒಕ್ಕೂಟ ರಾಜ್ಯಕ್ಷೇತ್ರದ ವಿಧಾನಮಂಡಲವಾಗಿ ಕಾರ್ಯನಿರ್ವಹಿಸಲು ಚುನಾಯಿತರಾದ ಅಥವಾ ಭಾಗಶಃ ನಾಮನಿರ್ದೇಶಿತರಾದ ಮತ್ತು ಭಾಗಶಃ ಚುನಾಯಿತರಾದ ಸದಸ್ಯರಿಂದ ಕೂಡಿದ ಒಂದು ನಿಕಾಯವನ್ನು, ಅಥವಾ

(ಬಿ) ಒಂದು ಮಂತ್ರಿ ಮಂಡಲವನ್ನು

- ಅಥವಾ ಇವೆರಡನ್ನೂ ಸೃಜಿಸಬಹುದು ಮತ್ತು ಪ್ರತಿಯೊಂದು ಸಂದರ್ಭದಲ್ಲೂ ಅವುಗಳ ರಚನೆ, ಅಧಿಕಾರಗಳು ಮತ್ತು ಪ್ರಕಾರ್ಯಗಳನ್ನು ಆ ಕಾನೂನಿನಲ್ಲಿ ನಿರ್ದಿಷ್ಟಪಡಿಸಬಹುದು.

(2) (1)ನೆಯ ಖಂಡದಲ್ಲಿ ಉಲ್ಲೇಖಿಸಲಾದಂಥ ಯಾವುದೇ ಕಾನೂನು ಈ ಸಂವಿಧಾನವನ್ನು ತಿದ್ದುಪಡಿ ಮಾಡುವ ಅಥವಾ ತಿದ್ದುಪಡಿ ಮಾಡುವ ಪರಿಣಾಮವುಳ್ಳ ಯಾವುದೇ ಉಪಬಂಧವನ್ನು ಒಳಗೊಂಡಿದ್ದಾಗ್ಯೂ, ಅದನ್ನು 368ನೆಯ ಅನುಚ್ಛೇದದ ಉದ್ದೇಶಗಳಿಗಾಗಿ ಈ ಸಂವಿಧಾನದ ಒಂದು ತಿದ್ದುಪಡಿಯೆಂದು ಭಾವಿಸತಕ್ಕದ್ದಲ್ಲ.]

[6][**239ಎಎ. ದೆಹಲಿಗೆ ಸಂಬಂಧಿಸಿದ ವಿಶೇಷ ಉಪಬಂಧಗಳು:-** (1) ಸಂವಿಧಾನ (ಅರವತ್ತೊಂಬತ್ತನೇ ತಿದ್ದುಪಡಿ) ಅಧಿನಿಯಮ, 1991ರ ಪ್ರಾರಂಭದ ದಿನಾಂಕದಿಂದ ದೆಹಲಿ ಒಕ್ಕೂಟ ರಾಜ್ಯಕ್ಷೇತ್ರವನ್ನು ರಾಷ್ಟ್ರದ ರಾಜಧಾನಿ ದೆಹಲಿ ರಾಜ್ಯಕ್ಷೇತ್ರವೆಂದು ಕರೆಯತಕ್ಕದ್ದು (ಈ ಭಾಗದಲ್ಲಿ ಇನ್ನು ಮುಂದೆ ರಾಷ್ಟ್ರದ ರಾಜಧಾನಿ ರಾಜ್ಯಕ್ಷೇತ್ರ ಎಂದು ಉಲ್ಲೇಖಿಸಲಾಗಿದೆ) ಮತ್ತು 239ನೇ ಅನುಚ್ಛೇದದ ಮೇರೆಗೆ ನೇಮಕ ಮಾಡಲಾಗುವ ಅದರ ಆಡಳಿತಗಾರನನ್ನು ಉಪ ರಾಜ್ಯಪಾಲ ಎಂದು ಹೆಸರಿಸತಕ್ಕದ್ದು.

---

1. 1956ನೆಯ ಇಸವಿಯ ಸಂವಿಧಾನ (ಏಳನೆಯ ತಿದ್ದುಪಡಿ) ಅಧಿನಿಯಮದ 17ನೆಯ ಪ್ರಕರಣದ ಮೂಲಕ "ಮೊದಲನೆಯ ಅನುಸೂಚಿಯ (ಸಿ) ಭಾಗದಲ್ಲಿ ನಿರ್ದಿಷ್ಟಪಡಿಸಿದ ರಾಜ್ಯಗಳು" ಎಂಬ ಮೂಲಶೀರ್ಷಿಕೆಗೆ ಬದಲಾಗಿ ಈ ಶೀರ್ಷಿಕೆಯನ್ನು ಪ್ರತ್ಯಾಯೋಜಿಸಲಾಗಿದೆ.
2. ಅದೇ ಅಧಿನಿಯಮದ 17ನೆಯ ಪ್ರಕರಣದ ಮೇರೆಗೆ 239ನೆಯ ಮತ್ತು 240ನೆಯ ಅನುಚ್ಛೇದಗಳಿಗೆ ಬದಲಾಗಿ ಈ ಅನುಚ್ಛೇದಗಳನ್ನು ಪ್ರತ್ಯಾಯೋಜಿಸಲಾಗಿದೆ.
3. 1962ನೆಯ ಇಸವಿಯ ಸಂವಿಧಾನ (ಹದಿನಾಲ್ಕನೆಯ ತಿದ್ದುಪಡಿ) ಅಧಿನಿಯಮದ 4ನೆಯ ಪ್ರಕರಣದ ಮೂಲಕ ಸೇರಿಸಲಾಗಿದೆ.
4. 1987ನೆಯ ಇಸವಿಯ ಗೋವಾ, ದಾಮನ್ ಮತ್ತು ದೀವ್ ಪುನಾರಚನೆ ಅಧಿನಿಯಮ (1987ರ 18)ದ 63ನೇ ಪ್ರಕರಣದ ಮೂಲಕ "ಗೋವಾ, ದಾಮನ್ ಮತ್ತು ದೀವ್ ಹಾಗು ಪಾಂಡಿಚೆರಿಯ ಯಾವುದೇ ಒಕ್ಕೂಟ ರಾಜ್ಯ ಕ್ಷೇತ್ರಗಳ" ಎಂಬ ಪದಗಳ ಬದಲಾಗಿ (30-5-1987 ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.
5. 2006ನೇ ಇಸವಿಯ ಪಾಂಡಿಚೆರಿ (ಹೆಸರು ಬದಲಾವಣೆ) ಅಧಿನಿಯಮದ (2006ರ 44) 4ನೇ ಪ್ರಕರಣದ ಮೂಲಕ "ಪಾಂಡಿಚೆರಿ"ಗೆ ಬದಲಾಗಿ (1.10.2006 ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.
6. 1991ನೇ ಇಸವಿಯ ಸಂವಿಧಾನ (ಅರವತ್ತೊಂಬತ್ತನೇ ತಿದ್ದುಪಡಿ) ಅಧಿನಿಯಮದ 2ನೇ ಪ್ರಕರಣದ ಮೂಲಕ (1.2.1992 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.

(2) (*a*) There shall be a Legislative Assembly for the National Capital Territory and the seats in such Assembly shall be filled by members chosen by direct election from territorial constituencies in the National Capital Territory.

(*b*) The total number of seats in the Legislative Assembly, the number of seats reserved for Scheduled Castes, the division of the National Capital Territory into territorial constituencies (including the basis for such division) and all other matters relating to the functioning of the Legislative Assembly shall be regulated by law made by Parliament.

(*c*) The provisions of articles 324 to 327 and 329 shall apply in relation to the National Capital Territory, the Legislative Assembly of the National Capital Territory and the members thereof as they apply, in relation to a State, the Legislative Assembly of a State and the members thereof respectively; and any reference in articles 326 and 329 to "appropriate Legislature" shall be deemed to be a reference to Parliament.

(3) (*a*) Subject to the provisions of this Constitution, the Legislative Assembly shall have power to make laws for the whole or any part of the National Capital Territory with respect to any of the matters enumerated in the State List or in the Concurrent List in so far as any such matter is applicable to Union territories except matters with respect to Entries 1, 2 and 18 of the State List and Entries 64, 65 and 66 of that List in so far as they relate to the said Entries 1, 2 and 18.

(*b*) Nothing in sub-clause (*a*) shall derogate from the powers of Parliament under this Constitution to make laws with respect to any matter for a Union territory or any part thereof.

(*c*) If any provision of a law made by the Legislative Assembly with respect to any matter is repugnant to any provision of a law made by Parliament with respect to that matter, whether passed before or after the law made by the Legislative Assembly, or of an earlier law, other than a law made by the Legislative Assembly, then, in either case, the law made by Parliament, or, as the case may be, such earlier law, shall prevail and the law made by the Legislative Assembly shall, to the extent of the repugnancy, be void:

Provided that if any such law made by the Legislative Assembly has been reserved for the consideration of the President and has received his assent, such law shall prevail in the National Capital Territory:

Provided further that nothing in this sub-clause shall prevent Parliament from enacting at any time any law with respect to the same matter including a law adding to, amending, varying or repealing the law so made by the Legislative Assembly.

(4) There shall be a Council of Ministers consisting of not more than ten per cent. of the total number of members in the Legislative Assembly, with the Chief Minister at the head to aid and advise the Lieutenant Governor in the exercise of his functions in relation to matters with respect to which the Legislative Assembly has power to make laws, except in so far as he is, by or under any law, required to act in his discretion:

(2)(ಎ) ರಾಷ್ಟ್ರದ ರಾಜಧಾನಿ ರಾಜ್ಯಕ್ಷೇತ್ರಕ್ಕೆ ಒಂದು ವಿಧಾನ ಸಭೆ ಇರತಕ್ಕದ್ದು ಮತ್ತು ಅಂಥ ಸಭೆಯಲ್ಲಿನ ಸ್ಥಾನಗಳನ್ನು ರಾಷ್ಟ್ರದ ರಾಜಧಾನಿ ರಾಜ್ಯಕ್ಷೇತ್ರದಲ್ಲಿನ ಪ್ರಾದೇಶಿಕ ಚುನಾವಣಾ ಕ್ಷೇತ್ರಗಳಿಂದ ನೇರ ಚುನಾವಣೆಯ ಮೂಲಕ ಆಯ್ಕೆಯಾಗುವ ಸದಸ್ಯರಿಂದ ಭರ್ತಿ ಮಾಡತಕ್ಕದ್ದು.

(ಬಿ) ವಿಧಾನ ಸಭೆಯಲ್ಲಿನ ಸ್ಥಾನಗಳ ಒಟ್ಟು ಸಂಖ್ಯೆ ಅನುಸೂಚಿತ ಜಾತಿಗಳಿಗೆ ಕಾದಿರಿಸುವ ಸ್ಥಾನಗಳ ಸಂಖ್ಯೆ, ರಾಷ್ಟ್ರದ ರಾಜಧಾನಿ ರಾಜ್ಯಕ್ಷೇತ್ರವನ್ನು ಪ್ರಾದೇಶಿಕ ಚುನಾವಣಾ ಕ್ಷೇತ್ರಗಳಾಗಿ ವಿಭಜಿಸುವುದು (ಅಂಥ ವಿಭಜನೆಯ ಆಧಾರವೂ ಸೇರಿ) ಮತ್ತು ವಿಧಾನ ಸಭೆಯ ಕಾರ್ಯನಿರ್ವಹಣೆಗೆ ಸಂಬಂಧಿಸಿದ ಇತರ ಎಲ್ಲಾ ವಿಷಯಗಳನ್ನು ಸಂಸತ್ತು ರಚಿಸಿದ ಕಾನೂನಿನ ಮೂಲಕ ವಿನಿಯಮಿಸತಕ್ಕದ್ದು.

(ಸಿ) 324 ರಿಂದ 327ರ ವರೆಗಿನ ಮತ್ತು 329ನೇ ಅನುಚ್ಛೇದಗಳ ಉಪಬಂಧಗಳು, ಅನುಕ್ರಮವಾಗಿ ಒಂದು ರಾಜ್ಯ, ಒಂದು ರಾಜ್ಯದ ವಿಧಾನ ಸಭೆ ಮತ್ತು ಅದರ ಸದಸ್ಯರಿಗೆ ಸಂಬಂಧಿಸಿದಂತೆ ಅನ್ವಯವಾಗುವಂತೆಯೇ ರಾಷ್ಟ್ರದ ರಾಜಧಾನಿ ರಾಜ್ಯಕ್ಷೇತ್ರ, ರಾಷ್ಟ್ರದ ರಾಜಧಾನಿ ರಾಜ್ಯಕ್ಷೇತ್ರದ ವಿಧಾನಸಭೆ ಮತ್ತು ಅದರ ಸದಸ್ಯರಿಗೆ ಸಂಬಂಧಿಸಿದಂತೆಯೂ ಅನ್ವಯವಾಗತಕ್ಕದ್ದು ಮತ್ತು "ಸಮುಚಿತ ವಿಧಾನಮಂಡಲ"ಕ್ಕೆ ಸಂಬಂಧಿಸಿದಂತೆ 326 ಮತ್ತು 329ನೇ ಅನುಚ್ಛೇದಗಳಲ್ಲಿ ಮಾಡಿದ ಯಾವುದೇ ಉಲ್ಲೇಖವನ್ನು ಸಂಸತ್ತಿಗೆ ಮಾಡಿದ ಉಲ್ಲೇಖವೆಂದು ಭಾವಿಸತಕ್ಕದ್ದು.

(3)(ಎ) ಈ ಸಂವಿಧಾನದ ಉಪಬಂಧಗಳಿಗೆ ಒಳಪಟ್ಟು, ವಿಧಾನ ಸಭೆಯು, ರಾಜ್ಯಪಟ್ಟಿಯಲ್ಲಿ ಅಥವಾ ಸಮವರ್ತಿ ಪಟ್ಟಿಯಲ್ಲಿ ನಿರೂಪಿಸಲಾಗಿರುವ ವಿಷಯಗಳ ಪೈಕಿ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ, ರಾಜ್ಯಪಟ್ಟಿಯ 1, 2 ಮತ್ತು 18ನೇ ನಮೂದುಗಳು ಮತ್ತು ಆ ಪಟ್ಟಿಯ 64, 65 ಮತ್ತು 66ನೇ ನಮೂದುಗಳು, ಸದರಿ 1, 2 ಮತ್ತು 18ನೇ ನಮೂದುಗಳಿಗೆ ಸಂಬಂಧಪಡುವಷ್ಟರ ಮಟ್ಟಿಗೆ ಆ ನಮೂದುಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಹೊರತುಪಡಿಸಿ, ಅಂಥ ಯಾವುದೇ ವಿಷಯವು ಒಕ್ಕೂಟ ರಾಜ್ಯಕ್ಷೇತ್ರಗಳಿಗೆ ಅನ್ವಯವಾಗುವಷ್ಟರ ಮಟ್ಟಿಗೆ, ರಾಷ್ಟ್ರದ ರಾಜಧಾನಿ ರಾಜ್ಯಕ್ಷೇತ್ರದ ಇಡೀ ಪ್ರದೇಶಕ್ಕೆ ಅಥವಾ ಅದರ ಯಾವುದೇ ಭಾಗಕ್ಕೆ ಸಂಬಂಧಿಸಿದಂತೆ ಕಾನೂನುಗಳನ್ನು ರಚಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

(ಬಿ) (ಎ)ಉಪ-ಖಂಡದಲ್ಲಿರುವುದು ಯಾವುದೂ, ಒಕ್ಕೂಟ ರಾಜ್ಯಕ್ಷೇತ್ರ ಅಥವಾ ಅದರ ಯಾವುದೇ ಭಾಗಕ್ಕೆ ಸಂಬಂಧಪಟ್ಟ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಕಾನೂನುಗಳನ್ನು ರಚಿಸಲು ಈ ಸಂವಿಧಾನದ ಮೇರೆಗೆ ಸಂಸತ್ತಿಗೆ ಇರುವ ಅಧಿಕಾರಗಳನ್ನು ಅಲ್ಪೀಕರಿಸತಕ್ಕದ್ದಲ್ಲ.

(ಸಿ) ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ವಿಧಾನ ಸಭೆಯು ರಚಿಸಿದ ಕಾನೂನಿನ ಯಾವುದೇ ಉಪಬಂಧವು, ವಿಧಾನ ಸಭೆಯು ಆ ಕಾನೂನನ್ನು ರಚಿಸುವುದಕ್ಕೆ ಮುಂಚೆ ಅಥವಾ ಆ ತರುವಾಯ ಸಂಸತ್ತು ಆ ವಿಷಯಕ್ಕೆ ಸಂಬಂಧಿಸಿದಂತೆ ರಚಿಸಿದ ಕಾನೂನಿನ ಉಪಬಂಧಕ್ಕೆ ಅಥವಾ ವಿಧಾನ ಸಭೆಯು ರಚಿಸಿದ ಕಾನೂನನ್ನು ಹೊರತುಪಡಿಸಿ, ಆ ಮುಂಚಿನ ಕಾನೂನಿನ ಯಾವುದೇ ಉಪಬಂಧಕ್ಕೆ ವಿರುದ್ಧವಾಗಿದ್ದರೆ, ಎರಡೂ ಸಂದರ್ಭಗಳಲ್ಲಿ, ಸಂಸತ್ತು ರಚಿಸಿದ ಕಾನೂನು ಅಥವಾ, ಸಂದರ್ಭಾನುಸಾರ, ಅಂಥ ಮುಂಚಿನ ಕಾನೂನು ಪ್ರಭಾವವುಳ್ಳದ್ದಾಗಿರತಕ್ಕದ್ದು ಮತ್ತು ವಿಧಾನ ಸಭೆಯು ರಚಿಸಿದ ಕಾನೂನು ಹಾಗೆ ವಿರುದ್ಧವಾಗಿರುವಷ್ಟರ ಮಟ್ಟಿಗೆ ಅನೂರ್ಜಿತವಾಗತಕ್ಕದ್ದು :

ಪರಂತು, ವಿಧಾನಸಭೆಯು ರಚಿಸಿದಂಥ ಯಾವುದೇ ಕಾನೂನನ್ನು ರಾಷ್ಟ್ರಪತಿಯ ಪರ್ಯಾಲೋಚನೆಗಾಗಿ ಕಾದಿರಿಸಿದ್ದು ಅದಕ್ಕೆ ಅವನ ಅನುಮತಿ ದೊರೆತಿದ್ದರೆ, ಅಂಥ ಕಾನೂನು ರಾಷ್ಟ್ರದ ರಾಜಧಾನಿ ರಾಜ್ಯಕ್ಷೇತ್ರದಲ್ಲಿ ಪ್ರಭಾವವುಳ್ಳದ್ದಾಗಿರತಕ್ಕದ್ದು:

ಮತ್ತೂ ಪರಂತು, ಈ ಉಪಖಂಡದಲ್ಲಿರುವುದು ಯಾವುದೂ, ವಿಧಾನ ಸಭೆಯು ಹಾಗೆ ರಚಿಸಿದ ಕಾನೂನಿಗೆ ಹೆಚ್ಚಿನ ವಿಷಯವನ್ನು ಸೇರಿಸುವುದು, ಅದನ್ನು ತಿದ್ದುಪಡಿ ಮಾಡುವುದು, ವ್ಯತ್ಯಾಸಗೊಳಿಸುವುದು ಅಥವಾ ನಿರಸನಗೊಳಿಸುವುದೂ ಸೇರಿದಂತೆ, ಅದೇ ವಿಷಯಕ್ಕೆ ಸಂಬಂಧಿಸಿದಂತೆ ಯಾವುದೇ ಸಮಯದಲ್ಲಿ ಯಾವುದೇ ಕಾನೂನನ್ನು ಅಧಿನಿಯಮಿಸದಂತೆ ಸಂಸತ್ತನ್ನು ಪ್ರತಿಬಂಧಿಸತಕ್ಕದ್ದಲ್ಲ.

(4) ಮುಖ್ಯಮಂತ್ರಿಯ ನೇತೃತ್ವದಲ್ಲಿ ವಿಧಾನ ಸಭೆಯ ಒಟ್ಟು ಸದಸ್ಯರ ಶೇಕಡಾ ಹತ್ತಕ್ಕೆ ಮೀರದಷ್ಟು ಸದಸ್ಯರಿಂದ ಕೂಡಿದ ಒಂದು ಮಂತ್ರಿಮಂಡಲವಿರತಕ್ಕದ್ದು ಮತ್ತು ಯಾವುದೇ ಕಾನೂನಿನ ಮೂಲಕ ಅಥವಾ ಅದರ ಮೇರೆಗೆ ಉಪ ರಾಜ್ಯಪಾಲನು ತನ್ನ ವಿವೇಚನಾನುಸಾರ ಕಾರ್ಯ ನಿರ್ವಹಿಸಲು ಅವನನ್ನು ಅಗತ್ಯಪಡಿಸಿರುವಷ್ಟರಮಟ್ಟಿಗೆ ಹೊರತು, ಯಾವ ವಿಷಯಗಳಿಗೆ ಸಂಬಂಧಪಟ್ಟಂತೆ ಕಾನೂನುಗಳನ್ನು ರಚಿಸಲು ವಿಧಾನ ಸಭೆಯು ಅಧಿಕಾರವನ್ನು ಹೊಂದಿದೆಯೋ ಆ ವಿಷಯಗಳಿಗೆ ಸಂಬಂಧಪಟ್ಟಂತೆ ಉಪ ರಾಜ್ಯಪಾಲನ ಪ್ರಕಾರ್ಯಗಳ ನಿರ್ವಹಣೆಯಲ್ಲಿ ಅವನಿಗೆ ಮಂತ್ರಿಮಂಡಲವು ನೆರವು ಮತ್ತು ಸಲಹೆ ನೀಡತಕ್ಕದ್ದು:

Provided that in the case of difference of opinion between the Lieutenant Governor and his Ministers on any matter, the Lieutenant Governor shall refer it to the President for decision and act according to the decision given thereon by the President and pending such decision it shall be competent for the Lieutenant Governor in any case where the matter, in his opinion, is so urgent that it is necessary for him to take immediate action, to take such action or to give such direction in the matter as he deems necessary.

(5) The Chief Minister shall be appointed by the President and other Ministers shall be appointed by the President on the advice of the Chief Minister and the Ministers shall hold office during the pleasure of the President.

(6) The Council of Ministers shall be collectively responsible to the Legislative Assembly.

[1][(7) (a)] Parliament may, by law, make provisions for giving effect to, or supplementing the provisions contained in the foregoing clauses and for all matters incidental or consequential thereto.

[2][(*b*) Any such law as is referred to in sub-clause (*a*) shall not be deemed to be an amendment of this Constitution for the purposes of article 368 notwithstanding that it contains any provision which amends or has the effect of amending, this Constitution.]

(8) The provisions of article 239B shall, so far as may be, apply in relation to the National Capital Territory, the Lieutenant Governor and the Legislative Assembly, as they apply in relation to the Union territory of [3][Puducherry], the administrator and its Legislature, respectively; and any reference in that article to "clause (1) of article 239A" shall be deemed to be a reference to this article or article 239AB, as the case may be.

**239AB. Provision in case of failure of constitutional machinery:-** If the President, on receipt of a report from the Lieutenant Governor or otherwise, is satisfied,-

(a) that a situation has arisen in which the administration of the National Capital Territory cannot be carried on in accordance with the provisions of article 239AA or of any law made in pursuance of that article; or

(b) that for the proper administration of the National Capital Territory it is necessary or expedient so to do,

the President may by order suspend the operation of any provision of article 239AA or of all or any of the provisions of any law made in pursuance of that article for such period and subject to such conditions as may be specified in such law and make such incidental and consequential provisions as may appear to him to be necessary or expedient for administering the National Capital Territory in accordance with the provisions of article 239 and article 239AA.

---

1. Subs. by the Constitution (Seventieth Amendment) Act, 1992, s. 3, for "(7)" (w.e.f. 21.12.1991).

2. Ins by s. 3 ibid

3. Subs. by the Pondicherry (Alteration of Name) Act, 2006 (44 of 2006), s. 4, for "Pondicherry" (w.e.f. 1-10-2006)

ಪರಂತು, ಯಾವುದೇ ವಿಷಯದ ಬಗ್ಗೆ ಉಪ ರಾಜ್ಯಪಾಲ ಮತ್ತು ಅವನ ಮಂತ್ರಿಗಳ ನಡುವೆ ಭಿನ್ನಾಭಿಪ್ರಾಯ ಉಂಟಾದ ಸಂದರ್ಭದಲ್ಲಿ, ಉಪ ರಾಜ್ಯಪಾಲನು ಅದನ್ನು ತೀರ್ಮಾನಕ್ಕಾಗಿ ರಾಷ್ಟ್ರಪತಿಗೆ ಕಳುಹಿಸತಕ್ಕದ್ದು ಮತ್ತು ಆ ಬಗ್ಗೆ ರಾಷ್ಟ್ರಪತಿಯು ನೀಡಿದ ತೀರ್ಮಾನಕ್ಕನುಸಾರವಾಗಿ ಅವನು ಕ್ರಮ ಕೈಗೊಳ್ಳತಕ್ಕದ್ದು ಮತ್ತು ಅಂಥ ತೀರ್ಮಾನ ಆಗುವವರೆಗೆ, ಆ ವಿಷಯವು ಅತಿ ಜರೂರು ವಿಷಯವಾಗಿದ್ದು, ತಾನು ಕೂಡಲೇ ಕ್ರಮ ಕೈಗೊಳ್ಳಬೇಕಾಗಿರುವುದೆಂದು ಉಪ ರಾಜ್ಯಪಾಲನು ಅಭಿಪ್ರಾಯಪಡುವ ಯಾವುದೇ ಸಂದರ್ಭದಲ್ಲಿ, ಅಂಥ ಕ್ರಮವನ್ನು ಕೈಗೊಳ್ಳಲು ಅಥವಾ ಆ ವಿಷಯದ ಬಗ್ಗೆ ತಾನು ಅವಶ್ಯವೆಂದು ಭಾವಿಸುವಂಥ ನಿರ್ದೇಶನವನ್ನು ನೀಡಲು ಉಪ ರಾಜ್ಯಪಾಲನು ಸಕ್ಷಮನಾಗಿರತಕ್ಕದ್ದು.

(5) ಮುಖ್ಯ ಮಂತ್ರಿಯನ್ನು ರಾಷ್ಟ್ರಪತಿಯು ನೇಮಕ ಮಾಡತಕ್ಕದ್ದು ಮತ್ತು ಇತರ ಮಂತ್ರಿಗಳನ್ನು ಮುಖ್ಯ ಮಂತ್ರಿಯ ಸಲಹೆಯ ಮೇರೆಗೆ ರಾಷ್ಟ್ರಪತಿಯು ನೇಮಕ ಮಾಡತಕ್ಕದ್ದು ಮತ್ತು ಆ ಮಂತ್ರಿಗಳು ರಾಷ್ಟ್ರಪತಿಯ ಇಷ್ಟಪರ್ಯಂತ ಪದಧಾರಣ ಮಾಡತಕ್ಕದ್ದು.

(6) ಮಂತ್ರಿ ಮಂಡಲವು ಸಾಮೂಹಿಕವಾಗಿ ವಿಧಾನ ಸಭೆಗೆ ಜವಾಬ್ದಾರಿಯಾಗಿರತಕ್ಕದ್ದು.

[1][(7) (ಎ)] ಸಂಸತ್ತು, ಹಿಂದೆ ಹೇಳಿದ ಖಂಡಗಳಲ್ಲಿ ಒಳಗೊಂಡ ಉಪಬಂಧಗಳನ್ನು ಜಾರಿಗೆ ತರಲು ಅಥವಾ ಅವುಗಳಿಗೆ ಹೆಚ್ಚಿಗೆ ಸೇರ್ಪಡೆ ಮಾಡಲು ಮತ್ತು ಅವುಗಳಿಗೆ ಪ್ರಾಸಂಗಿಕವಾದ ಅಥವಾ ಆನುಷಂಗಿಕವಾದ ಎಲ್ಲಾ ವಿಷಯಗಳ ಬಗ್ಗೆ ಕಾನೂನಿನ ಮೂಲಕ ಉಪಬಂಧ ಕಲ್ಪಿಸಬಹುದು.

[2][(ಬಿ) (ಎ) ಉಪಖಂಡದಲ್ಲಿ ಉಲ್ಲೇಖಿಸಲಾಗಿರುವಂಥ ಯಾವುದೇ ಕಾನೂನು ಈ ಸಂವಿಧಾನವನ್ನು ತಿದ್ದುಪಡಿ ಮಾಡುವ ಅಥವಾ ತಿದ್ದುಪಡಿ ಮಾಡುವ ಪರಿಣಾಮವನ್ನು ಹೊಂದಿರುವ ಯಾವುದೇ ಉಪಬಂಧವನ್ನು ಒಳಗೊಂಡಿದ್ದರೂ, ಅದನ್ನು 368ನೇ ಅನುಚ್ಛೇದದ ಉದ್ದೇಶಗಳಿಗಾಗಿ ಈ ಸಂವಿಧಾನದ ಒಂದು ತಿದ್ದುಪಡಿಯೆಂದು ಭಾವಿಸತಕ್ಕದ್ದಲ್ಲ.]

(8) 239ಬಿ ಅನುಚ್ಛೇದದ ಉಪಬಂಧಗಳು ಅವು ಅನುಕ್ರಮವಾಗಿ [3][ಪುದುಚೆರಿ] ಒಕ್ಕೂಟ ರಾಜ್ಯ ಕ್ಷೇತ್ರ, ಅದರ ಆಡಳಿತಗಾರ ಮತ್ತು ವಿಧಾನಮಂಡಲಕ್ಕೆ ಅನ್ವಯವಾಗುವಂತೆಯೇ ಸಾಧ್ಯವಾಗಬಹುದಾದಷ್ಟು ಮಟ್ಟಿಗೆ ರಾಷ್ಟ್ರದ ರಾಜಧಾನಿ ರಾಜ್ಯಕ್ಷೇತ್ರ, ಅದರ ಉಪರಾಜ್ಯಪಾಲ ಮತ್ತು ವಿಧಾನ ಸಭೆಗೂ ಅನ್ವಯವಾಗತಕ್ಕದ್ದು, ಮತ್ತು ಆ ಅನುಚ್ಛೇದದಲ್ಲಿ "239ಎ ಅನುಚ್ಛೇದದ (1)ನೇ ಖಂಡ" ಕ್ಕೆ ಮಾಡಿದ ಯಾವುದೇ ಉಲ್ಲೇಖವನ್ನು ಈ ಅನುಚ್ಛೇದಕ್ಕೆ ಅಥವಾ ಸಂದರ್ಭಾನುಸಾರ 239ಎಬಿ ಅನುಚ್ಛೇದಕ್ಕೆ ಮಾಡಿದ ಉಲ್ಲೇಖವೆಂದು ಭಾವಿಸತಕ್ಕದ್ದು.]

**239ಎಬಿ. ಸಂವಿಧಾನಾತ್ಮಕ ವ್ಯವಸ್ಥೆಯು ವಿಫಲವಾದ ಸಂದರ್ಭದಲ್ಲಿ ಉಪಬಂಧ:-** ರಾಷ್ಟ್ರಪತಿಯು ಉಪ ರಾಜ್ಯಪಾಲನಿಂದ ವರದಿಯನ್ನು ಸ್ವೀಕರಿಸಿದ ಮೇಲೆ ಅಥವಾ ಅನ್ಯಥಾ,-

(ಎ) 239ಎಎ ಅನುಚ್ಛೇದದ ಅಥವಾ ಆ ಅನುಚ್ಛೇದದ ಅನುಸಾರವಾಗಿ ರಚಿಸಿದ ಯಾವುದೇ ಕಾನೂನಿನ ಉಪಬಂಧಗಳಿಗೆ ಅನುಸಾರವಾಗಿ ರಾಷ್ಟ್ರದ ರಾಜಧಾನಿ ರಾಜ್ಯಕ್ಷೇತ್ರದ ಆಡಳಿತವನ್ನು ನಡೆಸಲಾಗದ ಪರಿಸ್ಥಿತಿಯು ಉದ್ಭವಿಸಿದೆ ಎಂದು; ಅಥವಾ

(ಬಿ) ರಾಷ್ಟ್ರದ ರಾಜಧಾನಿ ರಾಜ್ಯಕ್ಷೇತ್ರದ ಆಡಳಿತವನ್ನು ಸೂಕ್ತವಾಗಿ ನಡೆಸಲು ಹಾಗೆ ಮಾಡುವುದು ಅವಶ್ಯವೆಂದು ಅಥವಾ ವಿಹಿತವೆಂದು ರಾಷ್ಟ್ರಪತಿಗೆ ಮನದಟ್ಟಾದರೆ

- ಅವನು ಆದೇಶದ ಮೂಲಕ 239ಎಎ ಅನುಚ್ಛೇದದ ಯಾವುದೇ ಉಪಬಂಧದ ಅಥವಾ ಆ ಅನುಚ್ಛೇದವನ್ನು ಅನುಸರಿಸಿ ರಚಿಸಿದ ಯಾವುದೇ ಕಾನೂನಿನ ಎಲ್ಲಾ ಅಥವಾ ಯಾವುವೇ ಉಪಬಂಧಗಳ ಜಾರಿಯನ್ನು, ಅಂಥ ಕಾನೂನಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅವಧಿಯವರೆಗೆ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು ಸ್ಥಗಿತಗೊಳಿಸಬಹುದು ಮತ್ತು 239ನೇ ಅನುಚ್ಛೇದದ ಮತ್ತು 239ಎಎ ಅನುಚ್ಛೇದದ ಉಪಬಂಧಗಳಿಗೆ ಅನುಸಾರವಾಗಿ ರಾಷ್ಟ್ರದ ರಾಜಧಾನಿ ರಾಜ್ಯಕ್ಷೇತ್ರದ ಆಡಳಿತವನ್ನು ನಡೆಸಲು ಅವಶ್ಯ ಅಥವಾ ವಿಹಿತವೆಂದು ತನಗೆ ಕಂಡುಬರಬಹುದಾದಂಥ ಪ್ರಾಸಂಗಿಕವಾದ ಮತ್ತು ಆನುಷಂಗಿಕವಾದ ಉಪಬಂಧಗಳನ್ನು ರಚಿಸಬಹುದು.

---

1. 1992ನೇ ಇಸವಿಯ ಸಂವಿಧಾನ (ಎಪ್ಪತ್ತನೆಯ ತಿದ್ದುಪಡಿ) ಅಧಿನಿಯಮದ 3ನೇ ಪ್ರಕರಣದ ಮೂಲಕ (7)ನೇ ಖಂಡಕ್ಕೆ ಬದಲಾಗಿ (21.12.1991 ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.
2. 1992ನೇ ಇಸವಿಯ ಸಂವಿಧಾನ (ಎಪ್ಪತ್ತನೆಯ ತಿದ್ದುಪಡಿ) ಅಧಿನಿಯಮದ 3ನೇ ಪ್ರಕರಣದ ಮೂಲಕ ಸೇರಿಸಲಾಗಿದೆ.
3. 2006ನೇ ಇಸವಿಯ ಪಾಂಡಿಚೆರಿ (ಹೆಸರು ಬದಲಾವಣೆ) ಅಧಿನಿಯಮದ (2006ರ 44) 4ನೇ ಪ್ರಕರಣದ ಮೂಲಕ (1.10.2006 ರಿಂದ ಜಾರಿಗೆ ಬರುವಂತೆ) "ಪಾಂಡಿಚೆರಿ"ಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.

[1][**239B. Power of administrator to promulgate Ordinances during recess of Legislature:-** (1) If at any time, except when the Legislature of [2][the Union territory of [3][Puducherry]] is in session, the administrator thereof is satisfied that circumstances exist which render it necessary for him to take immediate action, he may promulgate such Ordinances as the circumstances appear to him to require:

Provided that no such Ordinance shall be promulgated by the administrator except after obtaining instructions from the President in that behalf::

Provided further that whenever the said Legislature is dissolved, or its functioning remains suspended on account of any action taken under any such law as is referred to in clause (1) of article 239A, the administrator shall not promulgate any Ordinance during the period of such dissolution or suspension.

(2) An Ordinance promulgated under this article in pursuance of instructions from the President shall be deemed to be an Act of the Legislature of the Union territory which has been duly enacted after complying with the provisions in that behalf contained in any such law as is referred to in clause (1) of article 239A, but every such Ordinance,-

(*a*) shall be laid before the Legislature of the Union territory and shall cease to operate at the expiration of six weeks from the reassembly of the Legislature or if, before the expiration of that period, a resolution disapproving it is passed by the Legislature, upon the passing of the resolution; and

(*b*) may be withdrawn at any time by the administrator after obtaining instructions from the President in that behalf.

(3) If and so far as an Ordinance under this article makes any provision which would not be valid if enacted in an Act of the Legislature of the Union territory made after complying with the provisions in that behalf contained in any such law as is referred to in clause (1) of article 239A, it shall be void.]

[4]* * * *

---

1. Ins. by the Constitution (twenty seventh Amendment) Act, 1971, s.3, (w.e.f. 30.12.1971)
2. Subs. by the Goa, Daman and Diu Reorganisation Act, 1987 (18 of 1987), s. 63, for "a Union territory referred to in clause (1) of article 239A"(w.e.f. 30-5-1987).
3. Subs. by the Pondicherry (Alteration of Name) Act, 2006 (44 of 2006), s. 4, for "Pondicherry" (w.e.f. 1-10-2006)
4. Cl. (4) was ins. by the Constitution (Thirty-eighth Amendment) Act, 1975, s. 4 (retrospectively) and omitted by the Consititution (Forty-fourth Amendment) Act, 1978, s. 32 (w.e.f. 20-6-1979).

[1][**239ಬಿ. ವಿಧಾನಮಂಡಲದ ವಿರಾಮ ಕಾಲದಲ್ಲಿ ಅಧ್ಯಾದೇಶಗಳನ್ನು ಹೊರಡಿಸುವುದಕ್ಕೆ ಆಡಳಿತಗಾರನ ಅಧಿಕಾರ:–** (1) [2][[3][ಪುದುಚೆರಿ] ಒಕ್ಕೂಟ ರಾಜ್ಯಕ್ಷೇತ್ರದ ವಿಧಾನಮಂಡಲವು] ಅಧಿವೇಶನದಲ್ಲಿರುವ ಕಾಲವನ್ನು ಹೊರತುಪಡಿಸಿ ಉಳಿದ ಯಾವುದೇ ಕಾಲದಲ್ಲಿ ತಾನು ಕೂಡಲೇ ಕ್ರಮವನ್ನು ಕೈಕೊಳ್ಳುವುದು ಅವಶ್ಯವಾಗಿರುವ ಸನ್ನಿವೇಶಗಳು ಉದ್ಭವಿಸಿವೆಯೆಂದು ಆ ಒಕ್ಕೂಟ ರಾಜ್ಯಕ್ಷೇತ್ರದ ಆಡಳಿತಗಾರನಿಗೆ ಮನದಟ್ಟಾದರೆ, ಆ ಸನ್ನಿವೇಶಗಳು ಅವನನ್ನು ಅಗತ್ಯಪಡಿಸುತ್ತವೆ ಎಂದು ತೋರಬಹುದಾದಂಥ ಅಧ್ಯಾದೇಶಗಳನ್ನು ಹೊರಡಿಸಬಹುದು:

ಪರಂತು, ಆಡಳಿತಗಾರನು, ಆ ಬಗ್ಗೆ ರಾಷ್ಟ್ರಪತಿಯಿಂದ ಅನುದೇಶಗಳನ್ನು ಪಡೆದಿರುವ ಹೊರತು, ಯಾವುದೇ ಅಂಥ ಅಧ್ಯಾದೇಶವನ್ನು ಹೊರಡಿಸತಕ್ಕದ್ದಲ್ಲ:

ಮತ್ತೂ ಪರಂತು, ಸದರಿ ವಿಧಾನಮಂಡಲವು ವಿಸರ್ಜನೆಯಾದಾಗಲೆಲ್ಲ ಅಥವಾ 239ನೆಯ (ಎ) ಅನುಚ್ಛೇದದ (1)ನೆಯ ಖಂಡದಲ್ಲಿ ಉಲ್ಲಿಖಿತವಾದಂಥ ಯಾವುದೇ ಕಾನೂನಿನ ಮೇರೆಗೆ ಯಾವುದೇ ಕ್ರಮವನ್ನು ಕೈಗೊಂಡಿರುವ ಕಾರಣದಿಂದ, ಆ ವಿಧಾನಮಂಡಲವು ಕಾರ್ಯನಡೆಸುವುದು ಸ್ಥಗಿತವಾಗಿರುವಾಗ, ಆಡಳಿತಗಾರನು ಅಂಥ ವಿಸರ್ಜನೆಯ ಅಥವಾ ಸ್ಥಗಿತದ ಕಾಲಾವಧಿಯಲ್ಲಿ ಯಾವುದೇ ಅಧ್ಯಾದೇಶವನ್ನು ಹೊರಡಿಸತಕ್ಕದ್ದಲ್ಲ.

(2) ರಾಷ್ಟ್ರಪತಿಯ ಅನುದೇಶಗಳಿಗನುಸಾರವಾಗಿ ಈ ಅನುಚ್ಛೇದದ ಮೇರೆಗೆ ಹೊರಡಿಸಲಾದ ಅಧ್ಯಾದೇಶವನ್ನು, 239ಎ ಅನುಚ್ಛೇದದ (1)ನೆಯ ಖಂಡದಲ್ಲಿ ಉಲ್ಲಿಖಿತವಾದಂಥ ಯಾವುದೇ ಕಾನೂನಿನಲ್ಲಿ ಆ ಬಗ್ಗೆ ಒಳಗೊಂಡಿರುವ ಉಪಬಂಧಗಳನ್ನು ಅನುಸರಿಸಿ ಯುಕ್ತ ರೀತಿಯಲ್ಲಿ ಆ ಒಕ್ಕೂಟ ರಾಜ್ಯಕ್ಷೇತ್ರದ ವಿಧಾನಮಂಡಲದಿಂದ ಅಧಿನಿಯಮಿತವಾದ ಒಂದು ಅಧಿನಿಯಮವೆಂಬುದಾಗಿ ಭಾವಿಸತಕ್ಕದ್ದು, ಆದರೆ ಅಂಥ ಪ್ರತಿಯೊಂದು ಅಧ್ಯಾದೇಶವನ್ನು,–

(ಎ) ಆ ಒಕ್ಕೂಟ ರಾಜ್ಯಕ್ಷೇತ್ರದ ವಿಧಾನಮಂಡಲದ ಮುಂದೆ ಇರಿಸತಕ್ಕದ್ದು ಮತ್ತು ವಿಧಾನಮಂಡಲವು ಮತ್ತೆ ಅಧಿವೇಶನ ಸೇರಿದಾಗಿನಿಂದ ಆರು ವಾರಗಳು ಮುಕ್ತಾಯವಾದ ಅನಂತರ ಅದು ಜಾರಿಯಲ್ಲಿರುವುದು ನಿಂತುಹೋಗತಕ್ಕದ್ದು ಅಥವಾ ಆ ಅವಧಿಗೆ ಮುಂಚಿತವಾಗಿ ಆ ಅಧ್ಯಾದೇಶವನ್ನು ತಿರಸ್ಕರಿಸುವ ನಿರ್ಣಯವು ವಿಧಾನಮಂಡಲದಿಂದ ಅಂಗೀಕೃತವಾದರೆ ಆ ನಿರ್ಣಯವು ಅಂಗೀಕೃತವಾದೊಡನೆಯೇ ಅದು ಜಾರಿಯಲ್ಲಿರುವುದು ನಿಂತುಹೋಗತಕ್ಕದ್ದು; ಮತ್ತು

(ಬಿ) ರಾಷ್ಟ್ರಪತಿಯಿಂದ ಆ ಬಗ್ಗೆ ಅನುದೇಶಗಳನ್ನು ಪಡೆದುಕೊಂಡ ಆಡಳಿತಗಾರನು ಯಾವುದೇ ಕಾಲದಲ್ಲಿ ಆ ಅಧ್ಯಾದೇಶವನ್ನು ಹಿಂತೆಗೆದುಕೊಳ್ಳಬಹುದು.

(3) 239ಎ ಅನುಚ್ಛೇದದ (1)ನೆಯ ಖಂಡದಲ್ಲಿ ಉಲ್ಲಿಖಿತವಾದಂಥ ಯಾವುದೇ ಕಾನೂನಿನಲ್ಲಿ ಆ ಬಗ್ಗೆ ಒಳಗೊಂಡಿರುವ ಉಪಬಂಧಗಳನ್ನು ಅನುಸರಿಸಿ ಮಾಡಿದ ಒಕ್ಕೂಟ ರಾಜ್ಯಕ್ಷೇತ್ರದ ವಿಧಾನಮಂಡಲದ ಅಧಿನಿಯಮದಲ್ಲಿ ಅಧಿನಿಯಮಿತಗೊಳಿಸಿದ್ದರೆ ಸಿಂಧುವಾಗದೆ ಇರುತ್ತಿದ್ದ ಯಾವುದೇ ಉಪಬಂಧವನ್ನು, ಈ ಅನುಚ್ಛೇದದ ಮೇರೆಗಿನ ಅಧ್ಯಾದೇಶದ ಮೂಲಕ ಮಾಡಿದ್ದರೆ ಮತ್ತು ಮಾಡಿರುವಷ್ಟರಮಟ್ಟಿಗೆ ಅದು ಅನೂರ್ಜಿತವಾಗತಕ್ಕದ್ದು.]

[4] * * *

---

1. 1971ನೇ ಇಸವಿಯ ಸಂವಿಧಾನ (ಇಪ್ಪತ್ತೇಳನೆಯ ತಿದ್ದುಪಡಿ) ಅಧಿನಿಯಮದ 3ನೇ ಪ್ರಕರಣದ ಮೂಲಕ (30-12-1971ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.
2. 1987ರ ಗೋವ, ದಾಮನ್ ಮತ್ತು ದೀವ್ (ಪುನಾರಚನೆ) ಅಧಿನಿಯಮದ (1987ರ 18) 63ನೇ ಪ್ರಕರಣದ ಮೂಲಕ "239ಎ ಅನುಚ್ಛೇದದ (1)ನೇ ಖಂಡದಲ್ಲಿ ಉಲ್ಲೇಖಿಸಲಾದ ಒಕ್ಕೂಟ ರಾಜ್ಯಕ್ಷೇತ್ರದ" ಎಂಬುದಕ್ಕೆ ಬದಲಾಗಿ (30-5-1987ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.
3. 2006ನೇ ಇಸವಿಯ ಪಾಂಡಿಚೆರಿ (ಹೆಸರು ಬದಲಾವಣೆ) ಅಧಿನಿಯಮದ (2006ರ 44) 4ನೇ ಪ್ರಕರಣದ ಮೂಲಕ (1.10.2006 ರಿಂದ ಜಾರಿಗೆ ಬರುವಂತೆ) "ಪಾಂಡಿಚೆರಿ"ಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
4. 1975ನೆಯ ಇಸವಿಯ ಸಂವಿಧಾನ (ಮೂವತ್ತೆಂಟನೆಯ ತಿದ್ದುಪಡಿ) ಅಧಿನಿಯಮದ 4ನೆಯ ಪ್ರಕರಣದ ಮೂಲಕ (ಪೂರ್ವಾನ್ವಯವಾಗಿ) ಜಾರಿಗೆ ಬರುವಂತೆ ಸೇರಿಸಲಾಗಿತ್ತು. 1978ನೇ ಇಸವಿಯ ಸಂವಿಧಾನ (ನಲವತ್ತನಾಲ್ಕನೆಯ ತಿದ್ದುಪಡಿ) ಅಧಿನಿಯಮದ 32ನೇ ಪ್ರಕರಣದ ಮೂಲಕ (ದಿನಾಂಕ 20-6-79ರಿಂದ ಜಾರಿಗೆ ಬರುವಂತೆ) 4ನೇ ಖಂಡವನ್ನು ಬಿಟ್ಟುಬಿಡಲಾಗಿದೆ.

**240. Power of President to make regulations for certain Union territories:-** (1) The President may make regulations for the peace, progress and good government of the Union territory of,-

(*a*) the Andaman and Nicobar Islands;

[1][(*b*) Lakshadweep;]

[2][(*c*) Dadra and Nagar Haveli;]

[3][(*d*) Daman and Diu;]

[4][(*e*) Puducherry;]

[5]***

[6]***:

[7][Provided that when any body is created under article 239A to function as a Legislature for the [8][Union territory of [9][Puducherry], the President shall not make any regulation for the peace, progress and good government of that Union territory with effect from the date appointed for the first meeting of the Legislature:]

[10][Provided further that whenever the body functioning as a Legislature for the Union territory of [9][Puducherry] is dissolved, or the functioning of that body as such Legislature remains suspended on account of any action taken under any such law as is referred to in clause (1) of article 239A, the President may, during the period of such dissolution or suspension, make regulations for the peace, progress and good government of that Union territory.]

---

1. Subs. by the Laccadive, Minicoy and Amindivi Islands (Alteration of Name) Act, 1973 (34 of 1973), s. 4, for entry (*b*) (w.e.f. 1-11-1973).
2. Ins. by the Constitution (Tenth Amendment) Act, 1961, s. 3.
3. Subs. by the Goa, Daman and Diu Reorganisation Act, 1987 (18 of 1987), s. 63, for entry (*d*) (w.e.f. 30-5-1987). Entry (*d*) was ins. by the Constitution (Twelfth Amendment) Act, 1962, s. 3.
4. Subs. by The Pondicherry (Alteration of Name) Act, 2006 (44 of 2006), s. 4, for "Pondicherry" (w.e.f. 1-10-2006).
5. The entry (*f*) relating to Mizoram omitted by the State of Mizoram Act, 1986 (34 of 1986), s. 39 (w.e.f. 20-2-1987).
6. The entry (*g*) relating to Arunachal Pradesh omitted by the State of Arunachal Pradesh Act, 1986 (69 of 1986), s. 42 (w.e.f. 20-2-1987).
7. Ins. by the Constitution (Fourteenth Amendment) Act, 1962, s. 5.
8. Subs. by the Constitution (Twenty-seventh Amendment) Act, 1971, s. 4, for "Union territory of Goa, Daman and Diu or Pondicherry" (w.e.f. 15-2-1972).
9. Subs. by the Pondicherry (Alteration of Name) Act, 2006 (44 of 2006), s. 4, for "Pondicherry" (w.e.f. 1-10-2006).
10. Ins. by the Constitution (Twenty-seventh Amendment) Act, 1971, s. 4 (w.e.f. 15-2-1972).

**240. ಕೆಲವು ಒಕ್ಕೂಟ ರಾಜ್ಯ ಕ್ಷೇತ್ರಗಳಿಗಾಗಿ ವಿನಿಯಮಗಳನ್ನು ರಚಿಸಲು ರಾಷ್ಟ್ರಪತಿಯ ಅಧಿಕಾರ:–** (1) ರಾಷ್ಟ್ರಪತಿಯು,–

(ಎ) ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳು;

[1][(ಬಿ) ಲಕ್ಷ ದ್ವೀಪ;]

[2][(ಸಿ) ದಾದ್ರಾ ಮತ್ತು ನಗರ್‌ಹವೇಲಿ;]

[3][(ಡಿ) ದಾಮನ್ ಮತ್ತು ದೀವ್;]

[4][(ಇ) ಪುದುಚೆರಿ;]

[5] * * *

[6] * * *

– ಈ ಒಕ್ಕೂಟ ರಾಜ್ಯಕ್ಷೇತ್ರಗಳ ಶಾಂತಿ, ಪ್ರಗತಿ ಮತ್ತು ಉತ್ತಮ ಆಡಳಿತದ ಬಗ್ಗೆ ವಿನಿಯಮಗಳನ್ನು ರಚಿಸಬಹುದು:

[7][ಪರಂತು, [8][ಪುದುಚೆರಿ] [9][ಒಕ್ಕೂಟ ರಾಜ್ಯಕ್ಷೇತ್ರದ ವಿಧಾನಮಂಡಲವಾಗಿ ಕಾರ್ಯನಿರ್ವಹಿಸಲು 239ಎ ಅನುಚ್ಛೇದದ ಮೇರೆಗೆ ಯಾವುದೇ ನಿಕಾಯವನ್ನು ಸೃಜಿಸಿರುವಲ್ಲಿ, ಆ ವಿಧಾನಮಂಡಲದ ಮೊದಲನೆಯ ಸಭೆಗಾಗಿ ಗೊತ್ತುಮಾಡಿದ ದಿನಾಂಕದಿಂದ ರಾಷ್ಟ್ರಪತಿಯು ಆ ಒಕ್ಕೂಟ ರಾಜ್ಯಕ್ಷೇತ್ರದ ಶಾಂತಿ, ಪ್ರಗತಿ ಮತ್ತು ಉತ್ತಮ ಆಡಳಿತಕ್ಕಾಗಿ ಯಾವುದೇ ವಿನಿಯಮವನ್ನು ರಚಿಸತಕ್ಕದ್ದಲ್ಲ:]

[10][ಮತ್ತೂ ಪರಂತು, [8][ಪುದುಚೆರಿ] ಒಕ್ಕೂಟ ರಾಜ್ಯಕ್ಷೇತ್ರದ ಸಂಬಂಧದಲ್ಲಿ ವಿಧಾನಮಂಡಲವಾಗಿ ಕಾರ್ಯನಿರ್ವಹಿಸುತ್ತಿರುವ ನಿಕಾಯವು ವಿಸರ್ಜನೆಯಾದಾಗಲೆಲ್ಲ ಅಥವಾ 239ಎ ಅನುಚ್ಛೇದದ (1)ನೆಯ ಖಂಡದಲ್ಲಿ ಉಲ್ಲಿಖಿತವಾದಂಥ ಯಾವುದೇ ಕಾನೂನಿನ ಮೇರೆಗೆ ಯಾವುದೇ ಕ್ರಮವನ್ನು ಕೈಗೊಂಡಿರುವ ಕಾರಣದಿಂದ ಅಂಥ ವಿಧಾನಮಂಡಲವಾಗಿ ಆ ನಿಕಾಯವು ಕಾರ್ಯ ನಿರ್ವಹಿಸುವುದು ಸ್ಥಗಿತವಾಗಿರುವಾಗಲೆಲ್ಲ ರಾಷ್ಟ್ರಪತಿಯು ಅಂಥ ವಿಸರ್ಜನೆಯ ಅಥವಾ ಸ್ಥಗಿತದ ಅವಧಿಯಲ್ಲಿ, ಆ ಒಕ್ಕೂಟ ರಾಜ್ಯಕ್ಷೇತ್ರದ ಶಾಂತಿ, ಪ್ರಗತಿ ಮತ್ತು ಉತ್ತಮ ಆಡಳಿತಕ್ಕಾಗಿ ವಿನಿಯಮಗಳನ್ನು ರಚಿಸಬಹುದು.]

---

1. 1973ನೇ ಇಸವಿಯ ಲಕ್ಷದ್ವೀಪ, ಮಿನಿಕೋಯ್ ಮತ್ತು ಅಮೀನ್‌ದೀವಿ ದ್ವೀಪಗಳ (ಹೆಸರಿನ ಬದಲಾವಣೆ) (1973ರ 34) ಅಧಿನಿಯಮದ 4ನೆಯ ಪ್ರಕರಣದ ಮೂಲಕ (ಬಿ) ನಮೂದಿನ ಬದಲಾಗಿ (1-11-73ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.
2. 1961ನೆಯ ಇಸವಿಯ ಸಂವಿಧಾನ (ಹತ್ತನೆಯ ತಿದ್ದುಪಡಿ) ಅಧಿನಿಯಮದ 3ನೆಯ ಪ್ರಕರಣದ ಮೂಲಕ ಸೇರಿಸಲಾಗಿದೆ.
3. 1987ರ ಗೋವಾ, ದಾಮನ್ ಮತ್ತು ದೀವ್ (ಪುನಾರಚನೆ) ಅಧಿನಿಯಮದ (1987ರ 18) 63ನೇ ಪ್ರಕರಣದ ಮೂಲಕ (ಡಿ) ನಮೂದಿಗೆ ಬದಲಾಗಿ (30-5-1987ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.
4. 2006ನೇ ಇಸವಿಯ ಪಾಂಡಿಚೇರಿ (ಹೆಸರು ಬದಲಾವಣೆ) ಅಧಿನಿಯಮದ (2006ರ 44) 4ನೇ ಪ್ರಕರಣದ ಮೂಲಕ "ಪಾಂಡಿಚೆರಿ"ಗೆ ಬದಲಾಗಿ (1.10.2006 ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.
5. ಮಿಜೋರಾಂಗೆ ಸಂಬಂಧಿಸಿದ ನಮೂದು (ಎಫ್)ನ್ನು 1986ರ ಮಿಜೋರಾಂ ರಾಜ್ಯ ಅಧಿನಿಯಮದ (1986ರ 34) 39ನೇ ಪ್ರಕರಣದ ಮೂಲಕ (20.2.1987 ರಿಂದ ಜಾರಿಗೆ ಬರುವಂತೆ) ಬಿಟ್ಟುಬಿಡಲಾಗಿದೆ.
6. ಅರುಣಾಚಲ ಪ್ರದೇಶಕ್ಕೆ ಸಂಬಂಧಿಸಿದ ನಮೂದು (ಜಿ)ಯನ್ನು 1986ರ ಅರುಣಾಚಲ ಪ್ರದೇಶ ರಾಜ್ಯ ಅಧಿನಿಯಮದ (1986ರ 69) 42ನೇ ಪ್ರಕರಣದ ಮೂಲಕ (20.2.1987 ರಿಂದ ಜಾರಿಗೆ ಬರುವಂತೆ) ಬಿಟ್ಟುಬಿಡಲಾಗಿದೆ.
7. 1962 ನೇ ಇಸವಿಯ ಸಂವಿಧಾನ (ಹದಿನಾಲ್ಕನೇ ತಿದ್ದುಪಡಿ) ಅಧಿನಿಯಮದ 5ನೇ ಪ್ರಕರಣದ ಮೂಲಕ ಸೇರಿಸಲಾಗಿದೆ.
8. 1971 ನೇ ಇಸವಿಯ ಸಂವಿಧಾನ (ಇಪ್ಪತ್ತೇಳನೇ ತಿದ್ದುಪಡಿ) ಅಧಿನಿಯಮದ 4ನೇ ಪ್ರಕರಣದ ಮೂಲಕ "ಗೋವಾ, ದಮನ್ ಮತ್ತು ದೀವ್ ಅಥವಾ ಪಾಂಡಿಚೇರಿ ಒಕ್ಕೂಟ ರಾಜ್ಯ ಕ್ಷೇತ್ರದ" ಎಂಬುದಕ್ಕೆ ಬದಲಾಗಿ (15.2.1972 ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.
9. 2006ನೇ ಇಸವಿಯ ಪಾಂಡಿಚೇರಿ (ಹೆಸರು ಬದಲಾವಣೆ) ಅಧಿನಿಯಮದ (2006ರ 44) 4ನೇ ಪ್ರಕರಣದ ಮೂಲಕ "ಪಾಂಡಿಚೆರಿ"ಗೆ ಬದಲಾಗಿ (1.10.2006 ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.
10. 1971 ನೇ ಇಸವಿಯ ಸಂವಿಧಾನ (ಇಪ್ಪತ್ತೇಳನೇ ತಿದ್ದುಪಡಿ) ಅಧಿನಿಯಮದ 4ನೇ ಪ್ರಕರಣದ ಮೂಲಕ (15.2.1972 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.

(2) Any regulation so made may repeal or amend any Act made by Parliament or [1][any other law] which is for the time being applicable to the Union territory and, when promulgated by the President, shall have the same force and effect as an Act of Parliament which applies to that territory.]

**241. High Courts for Union territories:-** (1) Parliament may by law constitute a High Court for a [2][Union territory] or declare any court in any [3][such territory] to be a High Court for all or any of the purposes of this Constitution.

(2) The provisions of Chapter V of Part VI shall apply in relation to every High Court referred to in clause (1) as they apply in relation to a High Court referred to in article 214 subject to such modifications or exceptions as Parliament may by law provide.

[4][(3) Subject to the provisions of this Constitution and to the provisions of any law of the appropriate Legislature made by virtue of powers conferred on that Legislature by or under this Constitution, every High Court exercising jurisdiction immediately before the commencement of the Constitution (Seventh Amendment) Act, 1956, in relation to any Union territory shall continue to exercise such jurisdiction in relation to that territory after such commencement.

(4) Nothing in this article derogates from the power of Parliament to extend or exclude the jurisdiction of a High Court for a State to, or from, any Union territory or part thereof.]

**242.** [*Coorg.*] *Rep. by the Constitution* (*Seventh Amendment*) *Act,* 1956, *s.* 29 *and Sch.*

---

1. Subs. by s. 4, *ibid.*, for "any existing law"(w.e.f. 15-2-1972).
2. Subs. by the Constitution (Seventh Amendment) Act, 1956, s. 29 and Sch., for "State specified in Part C of the First Schedule".
3. Subs. by s. 29 and Sch., *ibid.*, for "such State".
4. Subs. by s. 29 and Sch., *ibid.*, for cls. (3) and (4).

# PART XIX

## MISCELLANEOUS

**361. Protection of President and Governors and Rajpramukhs:-** (1) The President, or the Governor or Rajpramukh of a State, shall not be answerable to any court for the exercise and performance of the powers and duties of his office or for any act done or purporting to be done by him in the exercise and performance of those powers and duties:

Provided that the conduct of the President may be brought under review by any court, tribunal or body appointed or designated by either House of Parliament for the investigation of a charge under article 61:

Provided further that nothing in this clause shall be construed as restricting the right of any person to bring appropriate proceedings against the Government of India or the Government of a State.

(2) No criminal proceedings whatsoever shall be instituted or continued against the President, or the Governor [1]*** of a State, in any court during his term of office.

(3) No process for the arrest or imprisonment of the President, or the Governor [1]*** of a State, shall issue from any court during his term of office.

(4) No civil proceedings in which relief is claimed against the President, or the Governor [1]*** of a State, shall be instituted during his term of office in any court in respect of any act done or purporting to be done by him in his personal capacity, whether before or after he entered upon his office as President, or as Governor [1]*** of such State, until the expiration of two months next after notice in writing has been delivered to the President or the Governor [2]***, as the case may be, or left at his office stating the nature of the proceedings, the cause of action therefore, the name, description and place of residence of the party by whom such proceedings are to be instituted and the relief which he claims.

[3][**361A. rotection of publication of proceedings of Parliament and State Legislatures:-** (1) No person shall be liable to any proceedings, civil or criminal, in any court in respect of the publication in a newspaper of a substantially true report of any proceedings of either House of Parliament or the Legislative Assembly, or, as the case may be, either House of the Legislature, of a State, unless the publication is proved to have been made with malice:

1 The words "or Rajpramukh" omitted by the Constitution (Seventh Amendment) Act, 1956, s. 29 and Sch.

2. The words "or the Rajpramukh" omitted by s. 29 and Sch., *ibid.*

3. Ins. by the Constitution (Forty-fourth Amendment) Act, 1978, s. 42 (w.e.f. 20-6-1979).

# ಭಾಗ - XIX

## ಸಂಕೀರ್ಣ

**361. ರಾಷ್ಟ್ರಪತಿಗೆ ಮತ್ತು ರಾಜ್ಯಪಾಲರಿಗೆ ಹಾಗೂ ರಾಜಪ್ರಮುಖರಿಗೆ ಸಂರಕ್ಷಣೆ:-** (1) ರಾಷ್ಟ್ರಪತಿಯು ಅಥವಾ ಒಂದು ರಾಜ್ಯದ ರಾಜ್ಯಪಾಲನು ಅಥವಾ ರಾಜಪ್ರಮುಖನು ತನ್ನ ಪದದ ಅಧಿಕಾರಗಳ ಚಲಾವಣೆಯ ಬಗ್ಗೆ ಮತ್ತು ಕರ್ತವ್ಯಗಳ ನೆರವೇರಿಕೆಯ ಬಗ್ಗೆ ಅಥವಾ ಆ ಅಧಿಕಾರಗಳ ಚಲಾವಣೆಯಲ್ಲಿ ಮತ್ತು ಕರ್ತವ್ಯಗಳ ನೆರವೇರಿಕೆಯಲ್ಲಿ ತಾನು ಮಾಡಿದ ಅಥವಾ ಮಾಡಿದಂತೆ ತಾತ್ಪರ್ಯವಾಗುವ ಯಾವುದೇ ಕಾರ್ಯದ ಬಗ್ಗೆ ಯಾವುದೇ ನ್ಯಾಯಾಲಯಕ್ಕೆ ಜವಾಬ್ದಾರನಾಗತಕ್ಕದ್ದಲ್ಲ:

ಪರಂತು, ರಾಷ್ಟ್ರಪತಿಯ ವರ್ತನೆಯು, 61ನೆಯ ಅನುಚ್ಛೇದದ ಮೇರೆಗಿನ ಆರೋಪದ ತನಿಖೆಗಾಗಿ ಸಂಸತ್ತಿನ ಯಾವುದಾದರೊಂದು ಸದನದಿಂದ ನೇಮಕಗೊಂಡ ಅಥವಾ ಹೆಸರಿಸಲಾದ ಯಾವುದೇ ನ್ಯಾಯಾಲಯದ, ನ್ಯಾಯಾಧಿಕರಣದ ಅಥವಾ ನಿಕಾಯದ ಪುನರವಲೋಕನಕ್ಕೆ ಒಳಪಡಬಹುದು:

ಮತ್ತೂ ಪರಂತು, ಈ ಖಂಡದಲ್ಲಿ ಇರುವುದು ಯಾವುದೂ, ಭಾರತ ಸರ್ಕಾರದ ಅಥವಾ ಒಂದು ರಾಜ್ಯ ಸರ್ಕಾರದ ವಿರುದ್ಧ ಸಮುಚಿತ ವ್ಯವಹರಣೆಗಳನ್ನು ಹೂಡಲು ಯಾರೇ ವ್ಯಕ್ತಿಗಿರುವ ಹಕ್ಕನ್ನು ನಿರ್ಬಂಧಿಸುವುದಾಗಿ ಅರ್ಥೈಸತಕ್ಕದ್ದಲ್ಲ.

(2) ರಾಷ್ಟ್ರಪತಿಯ ಅಥವಾ ಒಂದು ರಾಜ್ಯದ ರಾಜ್ಯಪಾಲನ [1] * * * ಪದಾವಧಿಯಲ್ಲಿ ಅವನ ವಿರುದ್ಧ ಯಾವುದೇ ಕ್ರಿಮಿನಲ್ ವ್ಯವಹರಣೆಗಳನ್ನು ಯಾವುದೇ ನ್ಯಾಯಾಲಯದಲ್ಲಿ ಹೂಡತಕ್ಕದ್ದಲ್ಲ ಅಥವಾ ಮುಂದುವರಿಸತಕ್ಕದ್ದಲ್ಲ.

(3) ರಾಷ್ಟ್ರಪತಿಯ ಅಥವಾ ಒಂದು ರಾಜ್ಯದ ರಾಜ್ಯಪಾಲನ [1] * * * ಪದಾವಧಿಯಲ್ಲಿ ಅವನನ್ನು ದಸ್ತಗಿರಿ ಮಾಡಲು ಅಥವಾ ಕಾರಾಗೃಹದಲ್ಲಿರಿಸಲು ಯಾವುದೇ ನ್ಯಾಯಾಲಯವು ಯಾವುದೇ ಆದೇಶಿಕೆಯನ್ನು ಹೊರಡಿಸತಕ್ಕದ್ದಲ್ಲ.

(4) ರಾಷ್ಟ್ರಪತಿಯಾಗಿ ಅಥವಾ ಒಂದು ರಾಜ್ಯದ ರಾಜ್ಯಪಾಲನಾಗಿ [1]* * * ಪದವನ್ನು ವಹಿಸಿಕೊಳ್ಳುವುದಕ್ಕೆ ಮುಂಚೆ ಅಥವಾ ವಹಿಸಿಕೊಂಡ ತರುವಾಯ ಅವನು ವೈಯಕ್ತಿಕವಾಗಿ ಮಾಡಿದ ಅಥವಾ ಮಾಡಿದಂತೆ ತಾತ್ಪರ್ಯವಾಗುವ ಯಾವುದೇ ಕಾರ್ಯಕ್ಕೆ ಸಂಬಂಧಿಸಿದಂತೆ ರಾಷ್ಟ್ರಪತಿಯ ಅಥವಾ ಅಂಥ ರಾಜ್ಯದ ರಾಜ್ಯಪಾಲನ [1]*** ವಿರುದ್ಧ ಪರಿಹಾರವನ್ನು ಯಾವ ಸಿವಿಲ್ ವ್ಯವಹರಣೆಗಳಲ್ಲಿ ಕ್ಲೇಮು ಮಾಡಬಹುದೋ ಆ ಯಾವುವೇ ಸಿವಿಲ್ ವ್ಯವಹರಣೆಗಳನ್ನು ಅವನ ಪದಾವಧಿಯಲ್ಲಿ ಯಾವುದೇ ನ್ಯಾಯಾಲಯದಲ್ಲಿ, ಆ ವ್ಯವಹರಣೆಗಳ ಸ್ವರೂಪ, ಅದರ ವ್ಯಾಜ್ಯ ಕಾರಣ, ಅಂಥ ವ್ಯವಹರಣೆಗಳನ್ನು ಹೂಡುವ ಪಕ್ಷಕಾರನ ಹೆಸರು, ವರ್ಣನೆ, ನಿವಾಸಸ್ಥಾನ ಮತ್ತು ಅವನು ಕ್ಲೇಮು ಮಾಡುವ ಪರಿಹಾರ ಇವನ್ನು ತಿಳಿಸುವ ಲಿಖಿತ ನೋಟೀಸನ್ನು ರಾಷ್ಟ್ರಪತಿಗೆ ಅಥವಾ ಸಂದರ್ಭಾನುಸಾರ ಆ ರಾಜ್ಯಪಾಲನಿಗೆ [2] * * * ತಲುಪಿಸಿದ ಬಳಿಕ ಅಥವಾ ಕಚೇರಿಯಲ್ಲಿ ಕೊಟ್ಟ ಅನಂತರ, ಎರಡು ತಿಂಗಳು ಮುಗಿಯುವವರೆಗೆ ಹೂಡತಕ್ಕದ್ದಲ್ಲ.

[3][**361ಎ. ಸಂಸತ್ತು ಮತ್ತು ರಾಜ್ಯ ವಿಧಾನಮಂಡಲಗಳ ವ್ಯವಹರಣೆಗಳ ಪ್ರಕಟಣೆಯ ಸಂರಕ್ಷಣೆ:-** (1) ಸಂಸತ್ತಿನ ಯಾವುದೇ ಸದನದ ಅಥವಾ ಒಂದು ರಾಜ್ಯದ ವಿಧಾನಸಭೆಯ ಅಥವಾ ಸಂದರ್ಭಾನುಸಾರ ವಿಧಾನಮಂಡಲದ ಯಾವುದೇ ಸದನದ ಯಾವುದೇ ವ್ಯವಹರಣೆಗಳ ಬಗ್ಗೆ ಸಾರಭೂತವಾಗಿ ನಿಜವಾದ ವರದಿಯನ್ನು ವೃತ್ತಪತ್ರಿಕೆಯಲ್ಲಿ ಪ್ರಕಟಿಸಿದುದಕ್ಕೆ ಸಂಬಂಧಿಸಿದಂತೆ, ಆ ಪ್ರಕಟಣೆಯನ್ನು ದ್ವೇಷಪೂರ್ವಕವಾಗಿ ಮಾಡಲಾಗಿದೆಯೆಂದು ರುಜುವಾತುಪಡಿಸಿದ ಹೊರತು, ಯಾರೇ ವ್ಯಕ್ತಿಯು ಯಾವುದೇ ನ್ಯಾಯಾಲಯದಲ್ಲಿ ಯಾವುದೇ ಸಿವಿಲ್ ಅಥವಾ ಕ್ರಿಮಿನಲ್ ವ್ಯವಹರಣೆಗಳಿಗೆ ಗುರಿಯಾಗತಕ್ಕದ್ದಲ್ಲ:

---

1. 1956ನೆಯ ಇಸವಿಯ ಸಂವಿಧಾನ (ಏಳನೆಯ ತಿದ್ದುಪಡಿ) ಅಧಿನಿಯಮದ 29ನೆಯ ಪ್ರಕರಣದ ಹಾಗೂ ಅನುಸೂಚಿಯ ಮೂಲಕ, "ಅಥವಾ ರಾಜಪ್ರಮುಖ" ಎಂಬ ಪದಗಳನ್ನು ಬಿಟ್ಟುಬಿಡಲಾಗಿದೆ.
2. 1956 ನೆಯ ಇಸವಿಯ ಸಂವಿಧಾನ (ಏಳನೆಯ ತಿದ್ದುಪಡಿ) ಅಧಿನಿಯಮದ 29ನೇ ಪ್ರಕರಣದ ಹಾಗೂ ಅನುಸೂಚಿಯ ಮೂಲಕ "ಅಥವಾ ರಾಜಪ್ರಮುಖನಿಗೆ" ಎಂಬ ಪದಗಳನ್ನು ಬಿಟ್ಟುಬಿಡಲಾಗಿದೆ.
3. 1978ನೆಯ ಇಸವಿಯ ಸಂವಿಧಾನ (ನಲವತ್ನಾಲ್ಕನೆಯ ತಿದ್ದುಪಡಿ) ಅಧಿನಿಯಮದ 42ನೆಯ ಪ್ರಕರಣದ ಮೂಲಕ (ದಿನಾಂಕ 20-6-79ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.

Provided that nothing in this clause shall apply to the publication of any report of the proceedings of a secret sitting of either House of Parliament or the Legislative Assembly, or, as the case may be, either House of the Legislature, of a State.

(2) Clause (1) shall apply in relation to reports or matters broadcast by means of wireless telegraphy as part of any programme or service provided by means of a broadcasting station as it applies in relation to reports or matters published in a newspaper.

***Explanation.—*** In this article, "newspaper" includes a news agency report containing material for publication in a newspaper.]

[1][**361B**. **Disqualification for appointment on remunerative political post:-** A member of a House belonging to any political party who is disqualified for being a member of the House under paragraph 2 of the Tenth Schedule shall also be disqualified to hold any remunerative political post for duration of the period commencing from the date of his disqualification till the date on which the term of his office as such member would expire or till the date on which he contests an election to a House and is declared elected, whichever is earlier.

***Explanation.—*** For the purposes of this article,**—**

*(a)* the expression "House" has the meaning assigned to it in clause (a) of paragraph 1 of the Tenth Schedule;

*(b)* the expression "remunerative political post" means any office**—**

*(i)* under the Government of India or the Government of a State where the salary or remuneration for such office is paid out of the public revenue of the Government of India or the Government of the State, as the case may be; or

*(ii)* under a body, whether incorporated or not, which is wholly or partially owned by the Government of India or the Government of a State and the salary or remuneration for such office is paid by such body,

except where such salary or remuneration paid is compensatory in nature.

**362.** [*Rights and privileges of Rulers of Indian States.*] *Rep. by the Constitution (Twenty-sixth Amendment) Act*, 1971, *s.* 2.

---

1. Ins. by the Constitution (Ninety-first Amendment) Act, 2003, s. 4.

ಪರಂತು, ಈ ಖಂಡದಲ್ಲಿರುವುದಾವುದೂ, ಸಂಸತ್ತಿನ ಯಾವುದೇ ಸದನದ ಅಥವಾ ಒಂದು ರಾಜ್ಯದ ವಿಧಾನಸಭೆಯ ಅಥವಾ ಸಂದರ್ಭಾನುಸಾರ ವಿಧಾನಮಂಡಲದ ಯಾವುದೇ ಸದನದ ರಹಸ್ಯ ಉಪವೇಶನದ ವ್ಯವಹರಣೆಗಳ ಯಾವುದೇ ವರದಿಯ ಪ್ರಕಟಣೆಗೆ ಅನ್ವಯವಾಗತಕ್ಕದ್ದಲ್ಲ.

(2) ವೃತ್ತಪತ್ರಿಕೆಯಲ್ಲಿ ಪ್ರಕಟಿಸಿದ ವರದಿಗಳ ಅಥವಾ ವಿಷಯಗಳ ಸಂಬಂಧದಲ್ಲಿ (1)ನೆಯ ಖಂಡವು ಅನ್ವಯವಾಗುವಂತೆಯೇ ಪ್ರಸಾರ ಕೇಂದ್ರದ ಮೂಲಕ ಬಿತ್ತರಿಸಿದ ಯಾವುದೇ ಕಾರ್ಯಕ್ರಮದ ಅಥವಾ ಸೇವೆಯ ಅಂಗವಾಗಿ, ವೈರ್‌ಲೆಸ್ ಟೆಲಿಗ್ರಾಫ್ ಮೂಲಕ ಪ್ರಸಾರ ಮಾಡಿದ ವರದಿಗಳ ಅಥವಾ ವಿಷಯಗಳ ಸಂಬಂಧದಲ್ಲಿಯೂ ಆ ಖಂಡವು ಅನ್ವಯವಾಗತಕ್ಕದ್ದು.

**ವಿವರಣೆ.–** ಈ ಅನುಚ್ಛೇದದಲ್ಲಿ 'ವೃತ್ತಪತ್ರಿಕೆ' ಎಂಬುದರಲ್ಲಿ ವೃತ್ತಪತ್ರಿಕೆಯಲ್ಲಿ ಪ್ರಕಟಣೆಗಾಗಿ ಇರುವ ವಿಷಯ ಸಾಮಗ್ರಿಗಳನ್ನು ಒಳಗೊಂಡಿರುವ ವಾರ್ತಾ ಏಜೆನ್ಸಿಯ ವರದಿಯೂ ಒಳಗೊಳ್ಳುತ್ತದೆ.]

[4][**361ಬಿ. ಲಾಭದ ರಾಜಕೀಯ ಹುದ್ದೆಗೆ ನೇಮಕಕ್ಕೆ ಅನರ್ಹತೆ:–** ಹತ್ತನೇ ಅನುಸೂಚಿಯ 2ನೇ ಪ್ಯಾರಾದ ಅಡಿಯಲ್ಲಿ ಸದನದ ಸದಸ್ಯನಾಗಿರಲು ಅನರ್ಹನಾಗಿರುವ, ಯಾವುದೇ ರಾಜಕೀಯ ಪಕ್ಷಕ್ಕೆ ಸೇರಿರುವ, ಸದನದ ಒಬ್ಬ ಸದಸ್ಯನು, ಆತನು ಅನರ್ಹತೆ ಹೊಂದಿದ ದಿನಾಂಕದಿಂದ ಪ್ರಾರಂಭವಾಗಿ ಯಾವ ದಿನಾಂಕದಂದು ಅಂಥ ಸದಸ್ಯನಾಗಿ ಅವನ ಪದಾವಧಿಯು ಮುಕ್ತಾಯವಾಗುತ್ತಿತ್ತೋ ಆ ದಿನಾಂಕದವರೆಗೆ ಅಥವಾ ಆತನು ಒಂದು ಸದನಕ್ಕೆ ಚುನಾವಣೆಯಲ್ಲಿ ಸ್ಪರ್ಧಿಸಿರುವನೋ, ಅದಕ್ಕೆ ಚುನಾಯಿತನಾಗಿದ್ದಾನೆಂದು ಘೋಷಿತನಾಗುವ ದಿನಾಂಕದವರೆಗೆ, ಅವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಆತನು ಲಾಭದ ರಾಜಕೀಯ ಹುದ್ದೆಯನ್ನು ಹೊಂದಲು ಕೂಡಾ ಅನರ್ಹನಾಗತಕ್ಕದ್ದು.

**ವಿವರಣೆ.–** ಈ ಅನುಚ್ಛೇದದ ಉದ್ದೇಶಗಳಿಗಾಗಿ,–

(ಎ) "ಸದನ" ಎಂಬ ಪದವು ಹತ್ತನೇ ಅನುಸೂಚಿಯ 1ನೇ ಪ್ಯಾರಾದ (ಎ) ಖಂಡದಲ್ಲಿ ಅದಕ್ಕೆ ಕೊಟ್ಟಿರುವ ಅರ್ಥವನ್ನೇ ಹೊಂದಿರತಕ್ಕದ್ದು;

(ಬಿ) "ಲಾಭಪ್ರದ ರಾಜಕೀಯ ಹುದ್ದೆ" ಎಂಬ ಪದಗಳಿಗೆ, ಆ ಹುದ್ದೆಗೆ ಸಂಬಳವನ್ನು ಅಥವಾ ಪರಿಶ್ರಮಧನವನ್ನು ಪರಿಹಾರಾತ್ಮಕ ಸ್ವರೂಪದಲ್ಲಿ ಸಂದಾಯ ಮಾಡಿದ್ದ ಹೊರತು,–

(i) ಅಂಥ ಯಾವುದೇ ಹುದ್ದೆಗೆ ಸಂದರ್ಭಾನುಸಾರ ಭಾರತ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಸಾರ್ವಜನಿಕ ರಾಜಸ್ವದಿಂದ ಸಂಬಳವನ್ನು ಅಥವಾ ಪರಿಶ್ರಮಧನವನ್ನು ಸಂದಾಯ ಮಾಡಲಾಗುತ್ತಿದೆಯೋ ಆ ಭಾರತ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಅಧೀನದಲ್ಲಿನ ಯಾವುದೇ ಹುದ್ದೆ ಎಂದು ಅರ್ಥ; ಅಥವಾ

(ii) ಭಾರತ ಸರ್ಕಾರವು ಅಥವಾ ರಾಜ್ಯ ಸರ್ಕಾರವು ಸಂಪೂರ್ಣವಾಗಿ ಅಥವಾ ಭಾಗಶಃ ಒಡೆತನವನ್ನು ಹೊಂದಿರುವ ನಿಕಾಯವು ಅದು ನಿಗಮಿತವಾಗಿರಲಿ ಅಥವಾ ಆಗಿರದಿರಲಿ ಮತ್ತು ಅಂಥ ನಿಕಾಯವು ಅಂಥ ಹುದ್ದೆಗೆ ಸಂಬಳವನ್ನು ಅಥವಾ ಪರಿಶ್ರಮಧನವನ್ನು ಸಂದಾಯ ಮಾಡುತ್ತಿದ್ದರೆ ಆ ನಿಕಾಯದ ಅಧೀನದಲ್ಲಿರುವ ಯಾವುದೇ ಹುದ್ದೆ ಎಂದು ಅರ್ಥ].

**362.** [ಭಾರತೀಯ ಸಂಸ್ಥಾನಗಳ ರಾಜರುಗಳ ಹಕ್ಕುಗಳು ಮತ್ತು ವಿಶೇಷ ಅಧಿಕಾರಗಳು] 1971ನೇ ಇಸವಿಯ ಸಂವಿಧಾನ (ಇಪ್ಪತ್ತಾರನೆಯ ತಿದ್ದುಪಡಿ) ಅಧಿನಿಯಮದ 2ನೆಯ ಪ್ರಕರಣದ ಮೂಲಕ ನಿರಸಿತವಾಗಿದೆ.

---

1. 2003 ನೇ ಇಸವಿಯ ಸಂವಿಧಾನ (ತೊಂಬತ್ತೊಂದನೆಯ ತಿದ್ದುಪಡಿ) ಅಧಿನಿಯಮದ 4ನೆಯ ಪ್ರಕರಣದ ಮೂಲಕ ಸೇರಿಸಲಾಗಿದೆ.

**363. Bar to interference by courts in disputes arising out of certain treaties, agreements, etc.:-** (1) Notwithstanding anything in this Constitution but subject to the provisions of article 143, neither the Supreme Court nor any other court shall have jurisdiction in any dispute arising out of any provision of a treaty, agreement, covenant, engagement, *sanad* or other similar instrument which was entered into or executed before the commencement of this Constitution by any Ruler of an Indian State and to which the Government of the Dominion of India or any of its predecessor Governments was a party and which has or has been continued in operation after such commencement, or in any dispute in respect of any right accruing under or any liability or obligation arising out of any of the provisions of this Constitution relating to any such treaty, agreement, covenant, engagement, *sanad* or other similar instrument.

(2) In this article—

(*a*) "Indian State" means any territory recognized before the commencement of this Constitution by His Majesty or the Government of the Dominion of India as being such a State; and

(*b*) "Ruler" includes the Prince, Chief or other person recognised before such commencement by His Majesty or the Government of the Dominion of India as the Ruler of any Indian State.

[1][**363A. Recognition granted to Rulers of Indian States to cease and privy purses to be abolished:-** Notwithstanding anything in this Constitution or in any law for the time being in force—

(*a*) the Prince, Chief or other person who, at any time before the commencement of the Constitution (Twenty-sixth Amendment) Act, 1971, was recognized by the President as the Ruler of an Indian State or any person who, at any time before such commencement, was recognised by the President as the successor of such ruler shall, on and from such commencement, cease to be recognised as such Ruler or the successor of such Ruler;

(*b*) on and from the commencement of the Constitution (Twenty-sixth Amendment) Act, 1971, privy purse is abolished and all rights, liabilities and obligations in respect of privy purse are extinguished and accordingly the Ruler or, as the case may be, the successor of such Ruler, referred to in clause (*a*) or any other person shall not be paid any sum as privy purse.]

**364. Special provisions as to major ports and aerodromes:-** (1) Notwithstanding anything in this Constitution, the President may by public notification direct that as from such date as may be specified in the notification—

---

1. Ins. by the Constitution (Twenty-sixth Amendment) Act, 1971, s. 3.

**363. ಕೆಲವು ಕೌಲುಗಳು, ಒಪ್ಪಂದಗಳು, ಮುಂತಾದವುಗಳಿಂದ ಉದ್ಭವಿಸುವ ವಿವಾದಗಳಲ್ಲಿ ನ್ಯಾಯಾಲಯಗಳ ಹಸ್ತಕ್ಷೇಪಕ್ಕೆ ಪ್ರತಿಷೇಧ:–** (1) ಈ ಸಂವಿಧಾನದಲ್ಲಿ ಏನೇ ಇದ್ದಾಗ್ಯೂ, ಆದರೆ 143ನೆಯ ಅನುಚ್ಛೇದದ ಉಪಬಂಧಗಳಿಗೆ ಒಳಪಟ್ಟು, ಈ ಸಂವಿಧಾನದ ಪ್ರಾರಂಭಕ್ಕೆ ಮುಂಚೆ ಯಾವುದೇ ಭಾರತೀಯ ಸಂಸ್ಥಾನದ ರಾಜನು ಯಾವ ಕೌಲು, ಒಪ್ಪಂದ, ಒಡಂಬಡಿಕೆ, ವಚನಬಂಧ, ಸನ್ನದು ಅಥವಾ ಅದೇ ಬಗೆಯ ಇತರ ಲಿಖಿತವನ್ನು ಮಾಡಿಕೊಂಡಿದ್ದನೋ ಅಥವಾ ಬರೆದುಕೊಟ್ಟಿದ್ದನೋ ಮತ್ತು ಅವುಗಳಲ್ಲಿ ಯಾವುದಕ್ಕೆ ಡೊಮಿನಿಯನ್ ಆಫ್ ಇಂಡಿಯಾ ಸರ್ಕಾರವು ಅಥವಾ ಅದಕ್ಕೆ ಹಿಂದೆ ಇದ್ದ ಸರ್ಕಾರಗಳಲ್ಲಿ ಯಾವುದೇ ಸರ್ಕಾರವು ಒಂದು ಪಕ್ಷವಾಗಿತ್ತೋ ಮತ್ತು ಈ ಸಂವಿಧಾನವು ಪ್ರಾರಂಭವಾದ ತರುವಾಯ ಅವುಗಳಲ್ಲಿ ಯಾವುದು ಜಾರಿಯಲ್ಲಿರುವುದು ಮುಂದುವರೆದಿದೆಯೋ ಅಥವಾ ಯಾವುದರ ಜಾರಿಯನ್ನು ಮುಂದುವರೆಸಲಾಗಿದೆಯೋ ಅಂಥ ಯಾವುದೇ ಕೌಲು, ಒಪ್ಪಂದ, ಒಡಂಬಡಿಕೆ, ವಚನಬಂಧ, ಸನ್ನದು ಅಥವಾ ಅದೇ ಬಗೆಯ ಇತರ ಲಿಖಿತದ ಯಾವುದೇ ಉಪಬಂಧದಿಂದ ಉದ್ಭವಿಸುವ ಯಾವುದೇ ವಿವಾದದಲ್ಲಿ, ಅಥವಾ ಅಂಥ ಯಾವುದೇ ಕೌಲು, ಒಪ್ಪಂದ, ಒಡಂಬಡಿಕೆ, ವಚನಬಂಧ, ಸನ್ನದು ಅಥವಾ ಅದೇ ಬಗೆಯ ಇತರ ಲಿಖಿತಕ್ಕೆ ಸಂಬಂಧಪಟ್ಟಂತೆ, ಈ ಸಂವಿಧಾನದ ಯಾವುದೇ ಉಪಬಂಧದ ಮೇರೆಗೆ ಪ್ರಾಪ್ತವಾಗುವ ಯಾವುದೇ ಹಕ್ಕಿಗೆ ಅಥವಾ ಆ ಉಪಬಂಧದಿಂದ ಉದ್ಭವಿಸುವ ಯಾವುದೇ ಹೊಣೆಗಾರಿಕೆಗೆ ಅಥವಾ ಬಾಧ್ಯತೆಗೆ ಸಂಬಂಧಿಸಿದ ಯಾವುದೇ ವಿವಾದದಲ್ಲಿ ಸರ್ವೋಚ್ಚ ನ್ಯಾಯಾಲಯವೇ ಆಗಲಿ ಅಥವಾ ಬೇರೆ ಯಾವುದೇ ನ್ಯಾಯಾಲಯವೇ ಆಗಲಿ ಅಧಿಕಾರವ್ಯಾಪ್ತಿಯನ್ನು ಹೊಂದಿರತಕ್ಕದ್ದಲ್ಲ.

(2) ಈ ಅನುಚ್ಛೇದದಲ್ಲಿ,–

(ಎ) "ಭಾರತೀಯ ಸಂಸ್ಥಾನ" ಎಂದರೆ, ಈ ಸಂವಿಧಾನದ ಪ್ರಾರಂಭಕ್ಕೆ ಮುಂಚೆ ಸಾಮ್ರಾಟನಿಂದ ಅಥವಾ ಡೊಮಿನಿಯನ್ ಆಫ್ ಇಂಡಿಯಾ ಸರ್ಕಾರದಿಂದ ಭಾರತೀಯ ಸಂಸ್ಥಾನ ಎಂದು ಮನ್ನಣೆ ಪಡೆದಿದ್ದ ಯಾವುದೇ ರಾಜ್ಯಕ್ಷೇತ್ರ; ಮತ್ತು

(ಬಿ) "ರಾಜ" ಎಂಬುದರಲ್ಲಿ, ಈ ಸಂವಿಧಾನದ ಪ್ರಾರಂಭಕ್ಕೆ ಮುಂಚೆ ಸಾಮ್ರಾಟನಿಂದ ಅಥವಾ ಡೊಮಿನಿಯನ್ ಆಫ್ ಇಂಡಿಯಾ ಸರ್ಕಾರದಿಂದ ಯಾವುದೇ ಭಾರತೀಯ ಸಂಸ್ಥಾನದ ರಾಜನೆಂದು ಮನ್ನಣೆ ಪಡೆದಿದ್ದ ಯಾರೇ ರಾಜಕುಮಾರ, ಅಧಿಪತಿ ಅಥವಾ ಇತರ ವ್ಯಕ್ತಿಯೂ ಒಳಗೊಳ್ಳುತ್ತಾನೆ.

[1][**363ಎ. ಭಾರತೀಯ ಸಂಸ್ಥಾನಗಳ ರಾಜರಿಗೆ ಕೊಟ್ಟಿರುವ ಮನ್ನಣೆಯು ನಿಂತುಹೋಗುವುದು ಮತ್ತು ರಾಜಧನಗಳನ್ನು ರದ್ದುಗೊಳಿಸುವುದು:–** ಈ ಸಂವಿಧಾನದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಇದ್ದಾಗ್ಯೂ–

(ಎ) 1971ನೆಯ ಇಸವಿಯ ಸಂವಿಧಾನ (ಇಪ್ಪತ್ತಾರನೆಯ ತಿದ್ದುಪಡಿ) ಅಧಿನಿಯಮವು ಪ್ರಾರಂಭವಾಗುವುದಕ್ಕೆ ಮುಂಚೆ ಯಾವುದೇ ಕಾಲದಲ್ಲಿ ರಾಷ್ಟ್ರಪತಿಯಿಂದ ಒಂದು ಭಾರತೀಯ ಸಂಸ್ಥಾನದ ರಾಜನೆಂದು ಮನ್ನಣೆ ಪಡೆದಿದ್ದ ರಾಜಕುಮಾರ, ಅಧಿಪತಿ ಅಥವಾ ಇತರ ವ್ಯಕ್ತಿಯು ಅಥವಾ ಅಂಥ ಪ್ರಾರಂಭಕ್ಕೆ ಮುಂಚೆ ಯಾವುದೇ ಕಾಲದಲ್ಲಿ ರಾಷ್ಟ್ರಪತಿಯಿಂದ ಅಂಥ ರಾಜನ ಉತ್ತರಾಧಿಕಾರಿ ಎಂದು ಮನ್ನಣೆ ಪಡೆದಿದ್ದ ಯಾರೇ ವ್ಯಕ್ತಿಯು, ಅಂಥ ಪ್ರಾರಂಭದಂದು ಮತ್ತು ಅಂಥ ಪ್ರಾರಂಭದಿಂದ ಅಂಥ ರಾಜನೆಂದು ಅಥವಾ ಅಂಥ ರಾಜನ ಉತ್ತರಾಧಿಕಾರಿ ಎಂದು ಮನ್ನಣೆ ಪಡೆದಿರುವುದು ನಿಂತುಹೋಗತಕ್ಕದ್ದು;

(ಬಿ) 1971ನೆಯ ಇಸವಿಯ ಸಂವಿಧಾನ (ಇಪ್ಪತ್ತಾರನೆಯ ತಿದ್ದುಪಡಿ) ಅಧಿನಿಯಮದ ಪ್ರಾರಂಭದಂದು ಮತ್ತು ಪ್ರಾರಂಭದಿಂದ ರಾಜಧನವನ್ನು ರದ್ದುಗೊಳಿಸಲಾಗಿದೆ ಮತ್ತು ರಾಜಧನಕ್ಕೆ ಸಂಬಂಧಿಸಿದ ಎಲ್ಲ ಹಕ್ಕುಗಳನ್ನು, ಹೊಣೆಗಳನ್ನು ಮತ್ತು ಬಾಧ್ಯತೆಗಳನ್ನು ಅಂತ್ಯಗೊಳಿಸಲಾಗಿದೆ ಮತ್ತು ಅದಕ್ಕನುಸಾರವಾಗಿ (ಎ) ಖಂಡದಲ್ಲಿ ಉಲ್ಲೇಖಿಸಿದ ರಾಜನಿಗೆ ಅಥವಾ ಸಂದರ್ಭಾನುಸಾರ ಅಂಥ ರಾಜನ ಉತ್ತರಾಧಿಕಾರಿಗೆ ಅಥವಾ ಯಾರೇ ಇತರ ವ್ಯಕ್ತಿಗೆ ರಾಜಧನವಾಗಿ ಯಾವುದೇ ಮೊತ್ತವನ್ನು ಸಂದಾಯ ಮಾಡತಕ್ಕದ್ದಲ್ಲ.]

**364. ದೊಡ್ಡ ಬಂದರುಗಳ ಮತ್ತು ವಿಮಾನ ನಿಲ್ದಾಣಗಳ ಬಗ್ಗೆ ವಿಶೇಷ ಉಪಬಂಧಗಳು:–** (1) ಈ ಸಂವಿಧಾನದಲ್ಲಿ ಏನೇ ಇದ್ದಾಗ್ಯೂ, ರಾಷ್ಟ್ರಪತಿಯು ಸಾರ್ವಜನಿಕ ಅಧಿಸೂಚನೆಯ ಮೂಲಕ, ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದ ದಿನಾಂಕದಿಂದ,–

---

1. 1971ನೆಯ ಇಸವಿಯ ಸಂವಿಧಾನ (ಇಪ್ಪತ್ತಾರನೆಯ ತಿದ್ದುಪಡಿ) ಅಧಿನಿಯಮದ 3ನೆಯ ಪ್ರಕರಣದ ಮೂಲಕ ಸೇರಿಸಲಾಗಿದೆ.

(*a*) any law made by Parliament or by the Legislature of a State shall not apply to any major port or aerodrome or shall apply thereto subject to such exceptions or modifications as may be specified in the notification, or

(*b*) any existing law shall cease to have effect in any major port or aerodrome except as respects things done or omitted to be done before the said date, or shall in its application to such port or aerodrome have effect subject to such exceptions or modifications as may be specified in the notification.

(2) In this article—

(*a*) "major port" means a port declared to be a major port by or under any law made by Parliament or any existing law and includes all areas for the time being included within the limits of such port;

(*b*) "aerodrome" means aerodrome as defined for the purposes of the enactments relating to airways, aircraft and air navigation.

**365. Effect of failure to comply with, or to give effect to, directions given by the Union:-** Where any State has failed to comply with, or to give effect to, any directions given in the exercise of the executive power of the Union under any of the provisions of this Constitution, it shall be lawful for the President to hold that a situation has arisen in which the Government of the State cannot be carried on in accordance with the provisions of this Constitution.

**366. Definitions:-** In this Constitution, unless the context otherwise requires, the following expressions have the meanings hereby respectively assigned to them, that is to say—

(1) "agricultural income" means agricultural income as defined for the purposes of the enactments relating to Indian income-tax;

(2) "an Anglo-Indian" means a person whose father or any of whose other male progenitors in the male line is or was of European descent but who is domiciled within the territory of India and is or was born within such territory of parents habitually resident therein and not established there for temporary purposes only;

(3) "article" means an article of this Constitution;

(4) "borrow" includes the raising of money by the grant of annuities, and "loan" shall be construed accordingly;

[1] * * * *

1. Cl. (4A) was ins. by the Constitution (Forty-second Amendment) Act, 1976, s. 54 (w.e.f. 1-2-1977) and omitted by the Constitution (Forty-third Amendment) Act, 1977, s. 11 (w.e.f. 13-4-1978).

(ಎ) ಸಂಸತ್ತು ಅಥವಾ ಒಂದು ರಾಜ್ಯದ ವಿಧಾನಮಂಡಲವು ರಚಿಸಿದ ಯಾವುದೇ ಕಾನೂನು ಯಾವುದೇ ದೊಡ್ಡ ಬಂದರಿಗೆ ಅಥವಾ ವಿಮಾನ ನಿಲ್ದಾಣಕ್ಕೆ ಅನ್ವಯವಾಗತಕ್ಕದ್ದಲ್ಲವೆಂದು ಅಥವಾ ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ವಿನಾಯಿತಿಗಳಿಗೆ ಅಥವಾ ಮಾರ್ಪಾಡುಗಳಿಗೆ ಒಳಪಟ್ಟು ಅನ್ವಯವಾಗತಕ್ಕದ್ದೆಂದು, ಅಥವಾ

(ಬಿ) ಅಸ್ತಿತ್ವದಲ್ಲಿರುವ ಯಾವುದೇ ಕಾನೂನು, ಸದರಿ ದಿನಾಂಕಕ್ಕೆ ಮುಂಚೆ ಮಾಡಿದ ಅಥವಾ ಮಾಡದೆ ಬಿಟ್ಟ ಕಾರ್ಯಗಳಿಗೆ ಸಂಬಂಧಿಸಿದಂತೆ ಹೊರತು, ಯಾವುದೇ ದೊಡ್ಡ ಬಂದರಿನ ಅಥವಾ ವಿಮಾನ ನಿಲ್ದಾಣದ ವಿಷಯದಲ್ಲಿ ಪರಿಣಾಮಕಾರಿಯಾಗಿರುವುದು ನಿಂತುಹೋಗತಕ್ಕದ್ದೆಂದು ಅಥವಾ ಅಂಥ ಕಾನೂನನ್ನು ಅಂಥ ಬಂದರಿಗೆ ಅಥವಾ ವಿಮಾನ ನಿಲ್ದಾಣಕ್ಕೆ ಅನ್ವಯಿಸುವಾಗ ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದ ವಿನಾಯಿತಿಗಳಿಗೆ ಅಥವಾ ಮಾರ್ಪಾಡುಗಳಿಗೆ ಒಳಪಟ್ಟು ಪರಿಣಾಮಕಾರಿಯಾಗಿರತಕ್ಕದ್ದೆಂದು

– ನಿರ್ದೇಶಿಸಬಹುದು.

(2) ಈ ಅನುಚ್ಛೇದದಲ್ಲಿ,–

(ಎ) "ದೊಡ್ಡ ಬಂದರು" ಎಂದರೆ ಸಂಸತ್ತು ರಚಿಸಿದ ಅಥವಾ ಅಸ್ತಿತ್ವದಲ್ಲಿರುವ ಯಾವುದೇ ಕಾನೂನಿನ ಮೂಲಕ ಅಥವಾ ಅದರ ಮೇರೆಗೆ ದೊಡ್ಡ ಬಂದರೆಂದು ಘೋಷಿಸಲಾಗಿರುವ ಬಂದರು ಮತ್ತು ಅಂಥ ಬಂದರಿನ ಎಲ್ಲೆಗಳೊಳಗೆ ತತ್ಕಾಲದಲ್ಲಿ ಸೇರಿರುವ ಎಲ್ಲ ಪ್ರದೇಶಗಳನ್ನು ಅದು ಒಳಗೊಳ್ಳುತ್ತದೆ;

(ಬಿ) "ವಿಮಾನ ನಿಲ್ದಾಣ" ಎಂದರೆ ವಾಯುಮಾರ್ಗಗಳು, ವಿಮಾನ ಮತ್ತು ವಿಮಾನ ಯಾನಕ್ಕೆ ಸಂಬಂಧಪಟ್ಟ ಅಧಿನಿಯಮಿತಿಗಳ ಉದ್ದೇಶಗಳಿಗಾಗಿ ವಿಮಾನ ನಿಲ್ದಾಣವೆಂದು ಪರಿಭಾಷಿಸಿರುವ ವಿಮಾನ ನಿಲ್ದಾಣ.

**365. ಒಕ್ಕೂಟವು ನೀಡಿದ ನಿರ್ದೇಶನಗಳನ್ನು ಪಾಲಿಸಲು ಅಥವಾ ಅವುಗಳನ್ನು ಕಾರ್ಯಗತಗೊಳಿಸಲು ತಪ್ಪಿದುದರ ಪರಿಣಾಮ:–** ಈ ಸಂವಿಧಾನದ ಉಪಬಂಧಗಳಲ್ಲಿ ಯಾವುದೇ ಉಪಬಂಧದ ಮೇರೆಗೆ ಒಕ್ಕೂಟದ ಕಾರ್ಯಾಂಗ ಅಧಿಕಾರವನ್ನು ಚಲಾಯಿಸಿ ನೀಡಿದ ಯಾವುವೇ ನಿರ್ದೇಶನಗಳನ್ನು ಪಾಲಿಸಲು ಅಥವಾ ಅವುಗಳನ್ನು ಕಾರ್ಯಗತಗೊಳಿಸಲು ಯಾವುದೇ ರಾಜ್ಯವು ತಪ್ಪಿದಲ್ಲಿ ಆ ರಾಜ್ಯದ ಸರ್ಕಾರವನ್ನು ಈ ಸಂವಿಧಾನದ ಉಪಬಂಧಗಳಿಗೆ ಅನುಸಾರವಾಗಿ ನಡೆಸಲು ಶಕ್ಯವಿಲ್ಲದ ಪರಿಸ್ಥಿತಿಯು ಉದ್ಭವಿಸಿದೆ ಎಂದು ರಾಷ್ಟ್ರಪತಿಯು ಭಾವಿಸುವುದು ಕಾನೂನುಬದ್ಧವಾಗಿರತಕ್ಕದ್ದು.

**366. ಪರಿಭಾಷೆಗಳು:–** ಈ ಸಂವಿಧಾನದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು ಈ ಕೆಳಗಿನ ಪದಗಳಿಗೆ ಅನುಕ್ರಮವಾಗಿ ಕೊಟ್ಟಿರುವಂಥ ಅರ್ಥಗಳೇ ಅವುಗಳಿಗೆ ಇರುತ್ತವೆ; ಎಂದರೆ:–

(1) "ಕೃಷಿ ವರಮಾನ" ಎಂದರೆ ಭಾರತೀಯ ವರಮಾನ ತೆರಿಗೆಗೆ ಸಂಬಂಧಪಟ್ಟ ಅಧಿನಿಯಮಗಳ ಉದ್ದೇಶಗಳಿಗಾಗಿ ಪರಿಭಾಷಿಸಿದ ಕೃಷಿ ವರಮಾನ;

(2) "ಆಂಗ್ಲೋ ಇಂಡಿಯನ್" ಎಂದರೆ ಯಾವ ವ್ಯಕ್ತಿಯ ತಂದೆಯಾಗಲಿ ಅಥವಾ ಪಿತೃಪರಂಪರೆಯ ಇತರ ಪೂರ್ವಜಪುರುಷರಲ್ಲಿ ಯಾರೇ ಆಗಲಿ ಯೂರೋಪೀಯ ಸಂತತಿಯವನಾಗಿರುವನೋ ಅಥವಾ ಆಗಿದ್ದನೋ ಮತ್ತು ಆ ಯಾವ ವ್ಯಕ್ತಿಯು ಭಾರತದ ರಾಜ್ಯಕ್ಷೇತ್ರದೊಳಗೆ ಅಧಿವಾಸಿಯಾಗಿರುವನೋ ಮತ್ತು ಆ ರಾಜ್ಯಕ್ಷೇತ್ರದಲ್ಲಿ ಸಾಮಾನ್ಯ ನಿವಾಸಿಯಾಗಿರುವ ಮತ್ತು ಕೇವಲ ತಾತ್ಕಾಲಿಕ ಉದ್ದೇಶಗಳಿಗಾಗಿ ಮಾತ್ರ ನೆಲೆಸಿರದ ತಂದೆತಾಯಿಗಳಿಂದ ಅಂಥ ರಾಜ್ಯಕ್ಷೇತ್ರದಲ್ಲಿ ಜನ್ಮ ಪಡೆದಿರುವನೋ ಅಥವಾ ಪಡೆದಿದ್ದನೋ ಅಂಥ ವ್ಯಕ್ತಿ;

(3) "ಅನುಚ್ಛೇದ" ಎಂದರೆ ಈ ಸಂವಿಧಾನದ ಒಂದು ಅನುಚ್ಛೇದ;

(4) "ಸಾಲ ತೆಗೆದುಕೊಳ್ಳುವುದು" ಎಂಬುದರಲ್ಲಿ ವರ್ಷಾಶನಗಳನ್ನು ನೀಡುವ ಮೂಲಕ ಹಣ ಸಾಲ ಎತ್ತುವುದು ಸೇರಿರುತ್ತದೆ ಮತ್ತು "ಸಾಲ" ಎಂಬುದನ್ನು ಅದಕ್ಕನುಸಾರವಾಗಿ ಅರ್ಥೈಸತಕ್ಕದ್ದು;

[1] * * * *

1. 1976ನೆಯ ಇಸವಿಯ ಸಂವಿಧಾನ (ನಲವತ್ತೆರಡನೆಯ ತಿದ್ದುಪಡಿ) ಅಧಿನಿಯಮದ 54ನೆಯ ಪ್ರಕರಣದ ಮೂಲಕ (1–2–1977ರಿಂದ ಜಾರಿಗೆ ಬರುವಂತೆ) (4ಎ) ಖಂಡವನ್ನು ಸೇರಿಸಲಾಗಿತ್ತು ಮತ್ತು 1977ನೆಯ ಇಸವಿಯ ಸಂವಿಧಾನ (ನಲವತ್ಮೂರನೆಯ ತಿದ್ದುಪಡಿ) ಅಧಿನಿಯಮದ 11ನೆಯ ಪ್ರಕರಣದ ಮೂಲಕ (3–4–1978ರಿಂದ ಜಾರಿಗೆ ಬರುವಂತೆ) ಬಿಟ್ಟುಬಿಡಲಾಗಿದೆ.

(5) "clause" means a clause of the article in which the expression occurs;

(6) "corporation tax" means any tax on income, so far as that tax is payable by companies and is a tax in the case of which the following conditions are fulfilled:—

(*a*) that it is not chargeable in respect of agricultural income;

(*b*) that no deduction in respect of the tax paid by companies is, by any enactments which may apply to the tax, authorised to be made from dividends payable by the companies to individuals;

(*c*) that no provision exists for taking the tax so paid into account in computing for the purposes of Indian income-tax the total income of individuals receiving such dividends, or in computing the Indian income-tax payable by, or refundable to, such individuals;

(7) "corresponding Province", "corresponding Indian State" or "corresponding State" means in cases of doubt such Province, Indian State or State as may be determined by the President to be the corresponding Province, the corresponding Indian State or the corresponding State, as the case may be, for the particular purpose in question;

(8) "debt" includes any liability in respect of any obligation to repay capital sums by way of annuities and any liability under any guarantee, and "debt charges" shall be construed accordingly;

(9) "estate duty" means a duty to be assessed on or by reference to the principal value, ascertained in accordance with such rules as may be prescribed by or under laws made by Parliament or the Legislature of a State relating to the duty, of all property passing upon death or deemed, under the provisions of the said laws, so to pass;

(10) "existing law" means any law, Ordinance, order, bye-law, rule or regulation passed or made before the commencement of this Constitution by any Legislature, authority or person having power to make such a law, Ordinance, order, bye-law, rule or regulation;

(11) "Federal Court" means the Federal Court constituted under the Government of India Act, 1935;

(12) "goods" includes all materials, commodities, and articles;

[1][(12A) "goods and services tax" means any tax on supply of goods, or services or both except taxes on the supply of the alcoholic liquor for human consumption.]

---

1. ins. by the Constitution (one hundred and first Amendment) Act, 2016, s.14 (w.e.f. 8-9-2016).

(5) “ಖಂಡ” ಎಂದರೆ ಯಾವ ಅನುಚ್ಛೇದದಲ್ಲಿ ಆ ಪದವು ಬಂದಿದೆಯೋ ಆ ಅನುಚ್ಛೇದದ ಖಂಡ;

(6) “ನಿಗಮ ತೆರಿಗೆ” ಎಂದರೆ ವರಮಾನದ ಮೇಲೆ ಕಂಪನಿಗಳು ಯಾವ ತೆರಿಗೆಯನ್ನು ಸಂದಾಯ ಮಾಡಬೇಕಾಗಿದೆಯೋ ಮತ್ತು ಯಾವ ತೆರಿಗೆ ವಿಷಯದಲ್ಲಿ ಈ ಕೆಳಕಂಡ ಷರತ್ತುಗಳನ್ನು ಪೂರೈಸಲಾಗಿದೆಯೋ ಆ ತೆರಿಗೆಯಷ್ಟರ ಮಟ್ಟಿಗೆ ವರಮಾನದ ಮೇಲಣ ಯಾವುದೇ ತೆರಿಗೆ,–

(ಎ) ಅದನ್ನು ಕೃಷಿ ವರಮಾನದ ವಿಷಯದಲ್ಲಿ ವಿಧಿಸಿರಬಾರದು;

(ಬಿ) ಕಂಪನಿಗಳು ತೆರಿಗೆಯನ್ನು ಸಂದಾಯ ಮಾಡಿದ್ದಕ್ಕೆ ಸಂಬಂಧಿಸಿದಂತೆ ಆ ತೆರಿಗೆಗೆ ಅನ್ವಯವಾಗಬಹುದಾದಂಥ ಯಾವುವೇ ಅಧಿನಿಯಮಿತಿಗಳ ಮೂಲಕ, ಕಂಪನಿಗಳಿಂದ ವ್ಯಕ್ತಿಗಳಿಗೆ ಸಂದಾಯ ಮಾಡಬೇಕಾದ ಯಾವುದೇ ಲಾಭಾಂಶಗಳಿಂದ ಕಳೆಯುವುದನ್ನು ಅಧಿಕೃತಗೊಳಿಸಿರಬಾರದು;

(ಸಿ) ಹಾಗೆ ಸಂದಾಯ ಮಾಡಿದ ತೆರಿಗೆಯನ್ನು, ಅಂಥ ಲಾಭಾಂಶಗಳನ್ನು ಪಡೆಯುವ ವ್ಯಕ್ತಿಗಳ ಒಟ್ಟು ವರಮಾನವನ್ನು ಭಾರತೀಯ ವರಮಾನ ತೆರಿಗೆ ಉದ್ದೇಶಗಳಿಗಾಗಿ ಲೆಕ್ಕ ಹಾಕುವಾಗ ಅಥವಾ ಅಂಥ ವ್ಯಕ್ತಿಗಳು ಸಂದಾಯಮಾಡಬೇಕಾದ ಅಥವಾ ಅವರಿಗೆ ಮರುಪಾವತಿಸಬೇಕಾದ ಭಾರತೀಯ ವರಮಾನ ತೆರಿಗೆಯನ್ನು ಲೆಕ್ಕ ಹಾಕುವಾಗ, ಲೆಕ್ಕಕ್ಕೆ ತೆಗೆದುಕೊಳ್ಳಬೇಕೆಂಬ ಬಗ್ಗೆ ಯಾವ ಉಪಬಂಧವೂ ಇರಬಾರದು;

(7) “ಸಂವಾದಿ ಪ್ರಾಂತ್ಯ”, “ಸಂವಾದಿ ಭಾರತೀಯ ಸಂಸ್ಥಾನ” ಅಥವಾ “ಸಂವಾದಿ ರಾಜ್ಯ” ಎಂದರೆ ಸಂದೇಹ ಬಂದ ಸಂದರ್ಭಗಳಲ್ಲಿ ಪ್ರಶ್ನಿತ ನಿರ್ದಿಷ್ಟ ಉದ್ದೇಶಕ್ಕಾಗಿ ರಾಷ್ಟ್ರಪತಿಯು, ಸಂದರ್ಭಾನುಸಾರ ಸಂವಾದಿ ಪ್ರಾಂತ್ಯ, ಸಂವಾದಿ ಭಾರತೀಯ ಸಂಸ್ಥಾನ ಅಥವಾ ಸಂವಾದಿ ರಾಜ್ಯ ಎಂದು ನಿರ್ಧರಿಸಬಹುದಾದಂಥ ಪ್ರಾಂತ್ಯ, ಭಾರತೀಯ ಸಂಸ್ಥಾನ ಅಥವಾ ರಾಜ್ಯ;

(8) “ಋಣ” ಎಂಬುದರಲ್ಲಿ ಮೂಲಧನದ ಮೊತ್ತಗಳನ್ನು, ವರ್ಷಾಶನಗಳ ರೂಪದಲ್ಲಿ ಮರು ಸಂದಾಯ ಮಾಡಬೇಕಾಗಿರುವ ಯಾವುದೇ ಬಾಧ್ಯತೆಗೆ ಸಂಬಂಧಿಸಿದಂತೆ ಯಾವುದೇ ಹೊಣೆಗಾರಿಕೆ ಹಾಗೂ ಯಾವುದೇ ಖಾತರಿಯ ಮೇರೆಗೆ ಇರತಕ್ಕ ಯಾವುದೇ ಹೊಣೆಗಾರಿಕೆಯು ಒಳಗೊಳ್ಳುತ್ತದೆ ಮತ್ತು ‘ಋಣಭಾರ’ಗಳನ್ನು ಅದಕ್ಕನುಸಾರವಾಗಿ ಅರ್ಥೈಸತಕ್ಕದ್ದು;

(9) “ಎಸ್ಟೇಟ್ ಸುಂಕ” ಎಂದರೆ ಆ ಸುಂಕಕ್ಕೆ ಸಂಬಂಧಿಸಿದಂತೆ ಸಂಸತ್ತು ಅಥವಾ ಒಂದು ರಾಜ್ಯದ ವಿಧಾನಮಂಡಲವು ರಚಿಸಿದ ಕಾನೂನುಗಳ ಮೂಲಕ ಅಥವಾ ಅವುಗಳ ಮೇರೆಗೆ ನಿಯಮಿಸಬಹುದಾದಂಥ ನಿಯಮಗಳಿಗನುಸಾರವಾಗಿ, ಮರಣಾನಂತರ ಪ್ರಾಪ್ತವಾಗುವ ಅಥವಾ ಆ ಕಾನೂನುಗಳ ಉಪಬಂಧಗಳಿಗನುಸಾರವಾಗಿ ಹಾಗೆ ಪ್ರಾಪ್ತವಾಗುವುದೆಂದು ಭಾವಿಸಲಾಗುವ ಎಲ್ಲ ಸ್ವತ್ತಿನ ವಿಷಯದಲ್ಲಿ ಖಚಿತಪಡಿಸಿಕೊಂಡ ಮೂಲ ಮೌಲ್ಯದ ಮೇಲೆ ಅಥವಾ ಅದನ್ನು ಉಲ್ಲೇಖಿಸಿ ನಿರ್ಧರಿಸಲಾಗುವ ಸುಂಕ;

(10) “ಅಸ್ತಿತ್ವದಲ್ಲಿರುವ ಕಾನೂನು” ಎಂದರೆ ಕಾನೂನು, ಅಧ್ಯಾದೇಶ, ಆದೇಶ, ಉಪವಿಧಿ, ನಿಯಮ ಅಥವಾ ವಿನಿಯಮವನ್ನು ರಚಿಸಲು ಅಧಿಕಾರವುಳ್ಳ ಯಾವುದೇ ವಿಧಾನಮಂಡಲವು, ಪ್ರಾಧಿಕಾರವು ಅಥವಾ ವ್ಯಕ್ತಿಯು ಈ ಸಂವಿಧಾನದ ಪ್ರಾರಂಭಕ್ಕೆ ಮುಂಚೆ ಮಾಡಿದಂಥ ಅಥವಾ ರಚಿಸಿದಂಥ ಕಾನೂನು, ಅಧ್ಯಾದೇಶ, ಆದೇಶ, ಉಪವಿಧಿ, ನಿಯಮ ಅಥವಾ ವಿನಿಯಮ;

(11) “ಫೆಡರಲ್ ನ್ಯಾಯಾಲಯ” ಎಂದರೆ ಭಾರತ ಸರ್ಕಾರ ಅಧಿನಿಯಮ, 1935ರ ಮೇರೆಗೆ ಸ್ಥಾಪಿಸಿದ ಫೆಡರಲ್ ನ್ಯಾಯಾಲಯ;

(12) “ಸರಕುಗಳು” ಎಂಬುದರಲ್ಲಿ ಎಲ್ಲ ಸಾಮಗ್ರಿಗಳು, ವ್ಯಾಪಾರ ಸರಕುಗಳು ಮತ್ತು ವಸ್ತುಗಳು ಒಳಗೊಳ್ಳುತ್ತವೆ;

[1][(12ಎ) **“ಸರಕುಗಳ ಮತ್ತು ಸೇವೆಗಳ ಮೇಲಣ ತೆರಿಗೆ”** ಎಂದರೆ ಮನುಷ್ಯರ ಸೇವನೆಗಾಗಿ ಇರುವ ಮದ್ಯಸಾರಯುಕ್ತ ಮದ್ಯಗಳ ಮೇಲಿನ ತೆರಿಗೆಗಳನ್ನು ಹೊರತುಪಡಿಸಿ ಸರಕುಗಳ ಅಥವಾ ಸೇವೆಗಳ ಅಥವಾ ಅವೆರಡರ ಮೇಲಣ ತೆರಿಗೆಗಳು.]

---

1. 2017ನೇ ಇಸವಿಯ ಸಂವಿಧಾನ (ನೂರ ಒಂದನೆಯ ತಿದ್ದುಪಡಿ) ಅಧಿನಿಯಮದ ಪ್ರಕರಣ 14ರ ಮೂಲಕ ದಿನಾಂಕ:8–9–2016ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(13) "guarantee" includes any obligation undertaken before the commencement of this Constitution to make payments in the event of the profits of an undertaking falling short of a specified amount;

(14) "High Court" means any Court which is deemed for the purposes of this Constitution to be a High Court for any State and includes—

(*a*) any Court in the territory of India constituted or reconstituted under this Constitution as a High Court, and

(*b*) any other Court in the territory of India which may be declared by Parliament by law to be a High Court for all or any of the purposes of this Constitution;

(15) "Indian State" means any territory which the Government of the Dominion of India recognized as such a State;

(16) "Part" means a Part of this Constitution;

(17) "pension" means a pension, whether contributory or not, of any kind whatsoever payable to or in respect of any person, and includes retired pay so payable; a gratuity so payable and any sum or sums so payable by way of the return, with or without interest thereon or any other addition thereto, of subscriptions to a provident fund;

(18) "Proclamation of Emergency" means a Proclamation issued under clause (1) of article 352;

(19) "public notification" means a notification in the Gazette of India, or, as the case may be, the Official Gazette of a State;

(20) "railway" does not include—

(*a*) a tramway wholly within a municipal area, or

(*b*) any other line of communication wholly situate in one State and declared by Parliament by law not to be a railway;

[1]* * * * * *

[2][(22) "Ruler" means the Prince, Chief or other person who, at any time before the commencement of the Constitution (Twenty-sixth Amendment) Act, 1971, was recognised by the President as the Ruler of an Indian State or any person who, at any time before such commencement, was recognised by the President as the successor of such Ruler;]

(23) "Schedule" means a Schedule to this Constitution;

---

1. Cl. (21) omitted by the Constitution (Seventh Amendment) Act, 1956, s. 29 and Sch.

2. Subs. by the Constitution (Twenty-sixth Amendment) Act, 1971, s. 4, for cl. (22).

(13) "ಖಾತರಿ" ಎಂಬುದರಲ್ಲಿ ಯಾವುದೇ ಉದ್ಯಮದ ಲಾಭಗಳು ನಿರ್ದಿಷ್ಟವಾದ ಮೊತ್ತಕ್ಕಿಂತ ಕಡಿಮೆ ಬಿದ್ದ ಸಂದರ್ಭದಲ್ಲಿ ಸಂದಾಯಗಳನ್ನು ಮಾಡಲು ಈ ಸಂವಿಧಾನದ ಪ್ರಾರಂಭಕ್ಕೆ ಮುಂಚೆ ವಹಿಸಿಕೊಂಡ ಯಾವುದೇ ಬಾಧ್ಯತೆಯನ್ನು ಒಳಗೊಳ್ಳುತ್ತದೆ;

(14) "ಉಚ್ಚ ನ್ಯಾಯಾಲಯ" ಎಂದರೆ ಈ ಸಂವಿಧಾನದ ಉದ್ದೇಶಗಳಿಗಾಗಿ ಯಾವುದೇ ರಾಜ್ಯದ ಉಚ್ಚ ನ್ಯಾಯಾಲಯವೆಂದು ಭಾವಿಸಲಾಗಿರುವ ಯಾವುದೇ ನ್ಯಾಯಾಲಯ ಮತ್ತು ಅದರಲ್ಲಿ-

(ಎ) ಈ ಸಂವಿಧಾನದ ಮೇರೆಗೆ ಭಾರತದ ರಾಜ್ಯಕ್ಷೇತ್ರದಲ್ಲಿ ಉಚ್ಚ ನ್ಯಾಯಾಲಯವಾಗಿ ಸ್ಥಾಪಿತವಾದ ಅಥವಾ ಪುನರ್ ಸ್ಥಾಪಿತವಾದ ಯಾವುದೇ ನ್ಯಾಯಾಲಯವು, ಮತ್ತು

(ಬಿ) ಈ ಸಂವಿಧಾನದ ಎಲ್ಲ ಉದ್ದೇಶಗಳಿಗಾಗಿ ಅಥವಾ ಯಾವುದೇ ಉದ್ದೇಶಕ್ಕಾಗಿ ಸಂಸತ್ತು ಕಾನೂನಿನ ಮೂಲಕ ಉಚ್ಚ ನ್ಯಾಯಾಲಯವಾಗಿರುವುದಾಗಿ ಘೋಷಿಸಬಹುದಾದ ಭಾರತದ ರಾಜ್ಯಕ್ಷೇತ್ರದಲ್ಲಿನ ಇತರ ಯಾವುದೇ ನ್ಯಾಯಾಲಯವು

- ಒಳಗೊಳ್ಳುತ್ತದೆ;

(15) "ಭಾರತೀಯ ಸಂಸ್ಥಾನ" ಎಂದರೆ ಭಾರತೀಯ ಸಂಸ್ಥಾನವೆಂದು ಡೊಮಿನಿಯನ್ ಆಫ್ ಇಂಡಿಯಾ ಸರ್ಕಾರದಿಂದ ಮನ್ನಣೆ ಪಡೆದಿದ್ದ ಯಾವುದೇ ರಾಜ್ಯಕ್ಷೇತ್ರ;

(16) "ಭಾಗ" ಎಂದರೆ ಈ ಸಂವಿಧಾನದ ಒಂದು ಭಾಗ;

(17) "ನಿವೃತ್ತಿ ವೇತನ" ಎಂದರೆ ಯಾರೇ ವ್ಯಕ್ತಿಗೆ ಅಥವಾ ಅವನಿಗೆ ಸಂಬಂಧಿಸಿದಂತೆ ಸಂದಾಯವಾಗಬೇಕಾದ ವಂತಿಕೆಯದ್ದಾಗಿರುವ ಅಥವಾ ಅಲ್ಲದಿರುವ, ಯಾವುದೇ ಬಗೆಯ ನಿವೃತ್ತಿವೇತನ ಮತ್ತು ಅದರಲ್ಲಿ ಸಂದಾಯವಾಗಬೇಕಾದ ಸೇವಾನಿವೃತ್ತಿವೇತನ, ಉಪದಾನ ಮತ್ತು ಭವಿಷ್ಯ ನಿಧಿಗೆ ಕೊಟ್ಟ ವಂತಿಗೆಗಳ ಮೇಲೆ ಬಡ್ಡಿ ಸಹಿತ ಅಥವಾ ಬಡ್ಡಿ ರಹಿತ ಅಥವಾ ಅದಕ್ಕೆ ಇತರ ಯಾವುದೇ ಸೇರ್ಪಡೆಯೊಂದಿಗೆ ವಾಪಸಾತಿಯ ರೂಪದಲ್ಲಿ ಸಂದಾಯ ಮಾಡಬೇಕಾದ ಯಾವುದೇ ಮೊತ್ತ ಅಥವಾ ಮೊತ್ತಗಳು ಒಳಗೊಳ್ಳುತ್ತವೆ;

(18) "ತುರ್ತುಪರಿಸ್ಥಿತಿಯ ಉದ್ಘೋಷಣೆ" ಎಂದರೆ 352ನೆಯ ಅನುಚ್ಛೇದದ (1)ನೆಯ ಖಂಡದ ಮೇರೆಗೆ ಹೊರಡಿಸಿದ ಉದ್ಘೋಷಣೆ;

(19) "ಸಾರ್ವಜನಿಕ ಅಧಿಸೂಚನೆ" ಎಂದರೆ ಭಾರತದ ರಾಜಪತ್ರದಲ್ಲಿ ಅಥವಾ ಸಂದರ್ಭಾನುಸಾರ ಒಂದು ರಾಜ್ಯದ ರಾಜಪತ್ರದಲ್ಲಿ ಹೊರಡಿಸಿದ ಅಧಿಸೂಚನೆ;

(20) "ರೈಲ್ವೆ" ಎಂಬುದರಲ್ಲಿ,-

(ಎ) ಪೂರ್ತಿಯಾಗಿ ಪೌರಸಭಾ ಕ್ಷೇತ್ರದೊಳಗೆ ಇರುವ ಟ್ರಾಮ್‌ವೇ, ಅಥವಾ

(ಬಿ) ಪೂರ್ತಿಯಾಗಿ ಒಂದು ರಾಜ್ಯದೊಳಗೆ ಇರುವ, ರೈಲ್ವೆ ಅಲ್ಲವೆಂದು ಸಂಸತ್ತು ಕಾನೂನಿನ ಮೂಲಕ ಘೋಷಿಸಿದ ಇತರ ಯಾವುದೇ ಸಂಚಾರ ಮಾರ್ಗವು

- ಒಳಗೊಳ್ಳುವುದಿಲ್ಲ;

[1] * * * * *

[2][(22) "ರಾಜ" ಎಂದರೆ ಸಂವಿಧಾನ (ಇಪ್ಪತ್ತಾರನೆಯ ತಿದ್ದುಪಡಿ) ಅಧಿನಿಯಮ, 1971ರ ಪ್ರಾರಂಭಕ್ಕೆ ಮುಂಚೆ ಯಾವುದೇ ಕಾಲದಲ್ಲಿ ರಾಷ್ಟ್ರಪತಿಯಿಂದ ಒಂದು ಭಾರತೀಯ ಸಂಸ್ಥಾನದ ರಾಜನೆಂದು ಮನ್ನಣೆಪಡೆದ ರಾಜಕುಮಾರ, ಅಧಿಪತಿ ಅಥವಾ ಇತರ ವ್ಯಕ್ತಿ ಅಥವಾ ಅಂಥ ಪ್ರಾರಂಭಕ್ಕೆ ಮುಂಚೆ ರಾಷ್ಟ್ರಪತಿಯಿಂದ ಅಂಥ ರಾಜನ ಉತ್ತರಾಧಿಕಾರಿ ಎಂದು ಮನ್ನಣೆ ಪಡೆದ ಯಾರೇ ವ್ಯಕ್ತಿ;]

(23) "ಅನುಸೂಚಿ" ಎಂದರೆ ಈ ಸಂವಿಧಾನದ ಒಂದು ಅನುಸೂಚಿ;

---

1. 1956ನೆಯ ಇಸವಿಯ ಸಂವಿಧಾನ (ಏಳನೆಯ ತಿದ್ದುಪಡಿ) ಅಧಿನಿಯಮದ 29ನೆಯ ಪ್ರಕರಣದ ಮತ್ತು ಅನುಸೂಚಿಯ ಮೂಲಕ (21)ನೆಯ ಖಂಡವನ್ನು ಬಿಟ್ಟುಬಿಡಲಾಗಿದೆ.
2. 1971ನೆಯ ಇಸವಿಯ ಸಂವಿಧಾನ (ಇಪ್ಪತ್ತಾರನೆಯ ತಿದ್ದುಪಡಿ) ಅಧಿನಿಯಮದ 4ನೆಯ ಪ್ರಕರಣದ ಮೂಲಕ ಮೂಲ (22)ನೆಯ ಖಂಡಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.

(24) "Scheduled Castes" means such castes, races or tribes or parts of or groups within such castes, races or tribes as are deemed under article 341 to be Scheduled Castes for the purposes of this Constitution;

(25) "Scheduled Tribes" means such tribes or tribal communities or parts of or groups within such tribes or tribal communities as are deemed under article 342 to be Scheduled Tribes for the purposes of this Constitution;

(26) "securities" includes stock;

[1]* * * * * *

[2][(26A) "Services" means anything other than goods;

(26B) "State" with reference to articles 246A, 268, 269, 269A and article 279A includes a Union territory with Legislature.]

[3][(26C) "socially and educationally backward classes" means such backward classes as are so deemed under article 342A for the purposes of this constitution.]

(27) "sub-clause" means a sub-clause of the clause in which the expression occurs;

(28) "taxation" includes the imposition of any tax or impost, whether general or local or special, and "tax" shall be construed accordingly;

(29) "tax on income" includes a tax in the nature of an excess profits tax;

[4][(29A) "tax on the sale or purchase of goods" includes—

(*a*) a tax on the transfer, otherwise than in pursuance of a contract, of property in any goods for cash, deferred payment or other valuable consideration;

(*b*) a tax on the transfer of property in goods (whether as goods or in some other form) involved in the execution of a works contract;

(*c*) a tax on the delivery of goods on hirepurchase or any system of payment by instalments;

(*d*) a tax on the transfer of the right to use any goods for any purpose (whether or not for a specified period) for cash, deferred payment or other valuable consideration;

(*e*) a tax on the supply of goods by any unincorporated association or body of persons to a member thereof for cash, deferred payment or other valuable consideration;

---

1. Cl. (26A) was ins. by the Constitution (Forty-second Amendment) Act, 1976, s. 54 (w.e.f. 1-2-1977) and omitted by the Constitution (Forty-third Amendment) Act, 1977, s. 11 (w.e.f. 13-4-1978).
2. Ins. by the Constitution (one hundred and first Amendment) Act, 2016, s.14 (w.e.f. 8-9-2016).
3. Ins. by the Constitution (one hundred and second Amendment) Act, 2018, s.5 (w.e.f.11-08-2018).
4. Ins. by the Constitution (Forty-sixth Amendment) Act, 1982, s. 4.

(24) "ಅನುಸೂಚಿತ ಜಾತಿಗಳು" ಎಂದರೆ 341ನೆಯ ಅನುಚ್ಛೇದದ ಮೇರೆಗೆ ಈ ಸಂವಿಧಾನದ ಉದ್ದೇಶಗಳಿಗಾಗಿ ಅನುಸೂಚಿತ ಜಾತಿಗಳೆಂದು ಭಾವಿಸಲಾಗಿರುವಂಥ ಜಾತಿಗಳು, ಮೂಲವಂಶಗಳು ಅಥವಾ ಬುಡಕಟ್ಟುಗಳು ಅಥವಾ ಅಂಥ ಜಾತಿ, ಮೂಲವಂಶ ಅಥವಾ ಬುಡಕಟ್ಟುಗಳಲ್ಲಿನ ಭಾಗಗಳು ಅಥವಾ ಗುಂಪುಗಳು;

(25) "ಅನುಸೂಚಿತ ಬುಡಕಟ್ಟುಗಳು" ಎಂದರೆ 342ನೆಯ ಅನುಚ್ಛೇದದ ಮೇರೆಗೆ ಈ ಸಂವಿಧಾನದ ಉದ್ದೇಶಗಳಿಗಾಗಿ ಅನುಸೂಚಿತ ಬುಡಕಟ್ಟುಗಳೆಂದು ಭಾವಿಸಲಾಗಿರುವಂಥ ಬುಡಕಟ್ಟುಗಳು ಅಥವಾ ಬುಡಕಟ್ಟು ಸಮುದಾಯಗಳು ಅಥವಾ ಅಂಥ ಬುಡಕಟ್ಟುಗಳ ಅಥವಾ ಅದರ ಸಮುದಾಯಗಳಲ್ಲಿನ ಭಾಗಗಳು ಅಥವಾ ಗುಂಪುಗಳು;

(26) "ಭದ್ರತೆಗಳು" ಎಂಬುದರಲ್ಲಿ ಸ್ಟಾಕ್ ಒಳಗೊಳ್ಳುತ್ತದೆ;

[1] * * * * *

[2][(26ಎ) **"ಸೇವೆಗಳು"** ಎಂದರೆ ಸರಕುಗಳನ್ನು ಹೊರತುಪಡಿಸಿ ಯಾವುವಾದರೂ ಸೇವೆ;

(26ಬಿ) 246ಎ, 268, 269, 269ಎ ಅನುಚ್ಛೇದಗಳಿಗೆ ಮತ್ತು 279ಎ ಅನುಚ್ಛೇದಕ್ಕೆ ಸಂಬಂಧಪಟ್ಟಂತೆ **"ರಾಜ್ಯ"** ಪದದಲ್ಲಿ ವಿಧಾನಮಂಡಲ ಇರುವ ಒಕ್ಕೂಟ ರಾಜ್ಯಕ್ಷೇತ್ರ ಒಳಗೊಳ್ಳುತ್ತದೆ;]

[3][(26ಸಿ) **"ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳು"** ಎಂದರೆ, ಈ ಸಂವಿಧಾನದ ಉದ್ದೇಶಗಳಿಗಾಗಿ ಅನುಚ್ಛೇದ 342ಎ ಮೇರೆಗೆ ಪರಿಭಾವಿಸಿದಂಥ ಹಿಂದುಳಿದ ವರ್ಗಗಳು].

(27) "ಉಪಖಂಡ" ಎಂದರೆ ಆ ಪದವು ಯಾವ ಖಂಡದಲ್ಲಿ ಬರುತ್ತದೆಯೋ ಆ ಖಂಡದ ಉಪಖಂಡ;

(28) "ತೆರಿಗೆ ವಿಧಿಸುವುದು" ಎಂಬುದರಲ್ಲಿ ಸಾಧಾರಣವೋ, ಸ್ಥಳೀಯವೋ, ವಿಶೇಷವೋ ಆದ ಯಾವುದೇ ತೆರಿಗೆ ಅಥವಾ ಸುಂಕ ವಿಧಿಸುವುದೂ ಒಳಗೊಳ್ಳುತ್ತದೆ ಮತ್ತು ತೆರಿಗೆಯನ್ನು ಅದಕ್ಕನುಸಾರವಾಗಿ ಅರ್ಥೈಸತಕ್ಕದ್ದು;

(29) "ವರಮಾನದ ಮೇಲಿನ ತೆರಿಗೆ" ಯಲ್ಲಿ ಅಧಿಕಲಾಭ ತೆರಿಗೆಯ ಸ್ವರೂಪದ ತೆರಿಗೆಯೂ ಒಳಗೊಳ್ಳುತ್ತದೆ;

[4][(29ಎ) "ಸರಕುಗಳ ಮಾರಾಟ ಅಥವಾ ಖರೀದಿ ಮೇಲಿನ ತೆರಿಗೆ" ಎಂಬುದರಲ್ಲಿ ಈ ಕೆಳಕಂಡ ತೆರಿಗೆಗಳು ಸೇರುತ್ತವೆ-

(ಎ) ನಗದು ಹಣಕ್ಕಾಗಿ, ಮುಂದೂಡಿದ ಸಂದಾಯಕ್ಕಾಗಿ ಅಥವಾ ಮೌಲ್ಯವುಳ್ಳ ಇತರ ಪ್ರತಿಫಲಕ್ಕಾಗಿ ಯಾವುವೇ ಸರಕುಗಳಲ್ಲಿನ ಸ್ವಾಮ್ಯದ ವರ್ಗಾವಣೆಯ ಮೇಲೆ ಕರಾರಿಗನುಸಾರವಾಗಿಯಲ್ಲದೆ ಅನ್ಯಥಾ ವಿಧಿಸಲಾಗುವ ತೆರಿಗೆ;

(ಬಿ) ಕಾಮಗಾರಿ ಕರಾರಿನ ನಿರ್ವಹಣೆಯ ಸಂಬಂಧದಲ್ಲಿ (ಸರಕುಗಳ ರೂಪದಲ್ಲಾಗಲಿ ಅಥವಾ ಇತರ ಯಾವುದೇ ರೂಪದಲ್ಲಾಗಲಿ) ಸರಕುಗಳಲ್ಲಿನ ಸ್ವಾಮ್ಯದ ವರ್ಗಾವಣೆಯ ಮೇಲೆ ವಿಧಿಸಲಾಗುವ ತೆರಿಗೆ;

(ಸಿ) ಕಂತು ಖರೀದಿಯ ಮೇಲೆ ಅಥವಾ ಕಂತುಗಳ ಸಂದಾಯದ ಇತರ ಯಾವುದೇ ಪದ್ಧತಿಯ ಮೇಲೆ ಮಾಡಲಾಗುವ ಸರಕುಗಳ ವಶಾವಣೆಯ ಮೇಲೆ ವಿಧಿಸಲಾಗುವ ತೆರಿಗೆ;

(ಡಿ) ಯಾವುದೇ ಉದ್ದೇಶಕ್ಕಾಗಿ ಯಾವುವೇ ಸರಕುಗಳ ಬಳಕೆಯ ಅಧಿಕಾರವನ್ನು (ಯಾವುದೇ ನಿರ್ದಿಷ್ಟ ಅವಧಿಗಾಗಿ ಇರಲಿ ಅಥವಾ ಇಲ್ಲದಿರಲಿ) ನಗದು ಹಣಕ್ಕಾಗಿ, ಮುಂದೂಡಿದ ಸಂದಾಯಕ್ಕಾಗಿ ಅಥವಾ ಮೌಲ್ಯವುಳ್ಳ ಇತರ ಪ್ರತಿಫಲಕ್ಕಾಗಿ ವರ್ಗಾವಣೆ ಮಾಡುವುದರ ಮೇಲೆ ವಿಧಿಸಲಾಗುವ ತೆರಿಗೆ;

(ಇ) ನಿಗಮಿತವಲ್ಲದ ಯಾವುದೇ ಸಂಸ್ಥೆಯು ಅಥವಾ ವ್ಯಕ್ತಿಗಳ ನಿಕಾಯವು ತನ್ನ ಯಾರೇ ಸದಸ್ಯನಿಗೆ ನಗದು ಹಣಕ್ಕಾಗಿ, ಮುಂದೂಡಿದ ಸಂದಾಯಕ್ಕಾಗಿ ಅಥವಾ ಮೌಲ್ಯವುಳ್ಳ ಇತರ ಪ್ರತಿಫಲಕ್ಕಾಗಿ ಮಾಡಿದ ಸರಕುಗಳ ಸರಬರಾಜಿನ ಮೇಲೆ ವಿಧಿಸಲಾಗುವ ತೆರಿಗೆ;

---

1. 1976ನೇ ಇಸವಿಯ ಸಂವಿಧಾನ (ನಲವತ್ತೆರಡನೆಯ ತಿದ್ದುಪಡಿ) ಅಧಿನಿಯಮದ 54ನೆಯ ಪ್ರಕರಣದ ಮೂಲಕ (1-2-1977ರಿಂದ ಜಾರಿಗೆ ಬರುವಂತೆ) (26ಎ) ಖಂಡವನ್ನು ಸೇರಿಸಲಾಗಿತ್ತು ಮತ್ತು ಅದನ್ನು 1977ನೆಯ ಇಸವಿಯ ಸಂವಿಧಾನ (ನಲವತ್ತೂರನೆಯ ತಿದ್ದುಪಡಿ) ಅಧಿನಿಯಮದ 11ನೆಯ ಪ್ರಕರಣದ ಮೂಲಕ (13-4-78ರಿಂದ ಜಾರಿಗೆ ಬರುವಂತೆ) ಬಿಟ್ಟುಬಿಡಲಾಗಿದೆ.
2. 2017ನೇ ಇಸವಿಯ ಸಂವಿಧಾನ (ನೂರ ಒಂದನೆಯ ತಿದ್ದುಪಡಿ) ಅಧಿನಿಯಮದ ಪ್ರಕರಣ 14ರ ಮೂಲಕ ದಿನಾಂಕ:8-9-2016ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 2018ನೆಯ ಇಸವಿಯ ಸಂವಿಧಾನ (ನೂರ ಎರಡನೆಯ ತಿದ್ದುಪಡಿ) ಅಧಿನಿಯಮದ 5ನೆಯ ಪ್ರಕರಣದ ಮೂಲಕ (ದಿನಾಂಕ: 11.08.2018 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.
4. 1982ನೆಯ ಇಸವಿಯ ಸಂವಿಧಾನ (ನಲವತ್ತಾರನೆಯ ತಿದ್ದುಪಡಿ) ಅಧಿನಿಯಮದ 4ನೆಯ ಪ್ರಕರಣದ ಮೂಲಕ ಸೇರಿಸಲಾಗಿದೆ.

(*f*) a tax on the supply, by way of or as part of any service or in any other manner whatsoever, of goods, being food or any other article for human consumption or any drink (whether or not intoxicating), where such supply or service, is for cash, deferred payment or other valuable consideration,

and such transfer, delivery or supply of any goods shall be deemed to be a sale of those goods by the person making the transfer, delivery or supply and a purchase of those goods by the person to whom such transfer, delivery or supply is made;]

[1][(30) "Union territory" means any Union territory specified in the First Schedule and includes any other territory comprised within the territory of India but not specified in that Schedule.]

**367. Interpretation:-** (1) Unless the context otherwise requires, the General Clauses Act, 1897, shall, subject to any adaptations and modifications that may be made therein under article 372, apply for the interpretation of this Constitution as it applies for the interpretation of an Act of the Legislature of the Dominion of India.

(2) Any reference in this Constitution to Acts or laws of, or made by, Parliament, or to Acts or laws of, or made by, the Legislature of a State [2]***, shall be construed as including a reference to an Ordinance made by the President or, to an Ordinance made by a Governor [3]***, as the case may be.

(3) For the purposes of this Constitution "foreign State" means any State other than India:

Provided that, subject to the provisions of any law made by Parliament, the President may by order[4] declare any State not to be a foreign State for such purposes as may be specified in the order.

---

1. Subs. by the Constitution (Seventh Amendment) Act, 1956, s. 29 and Sch., for cl. (30).
2. The words and letters "specified in Part A or Part B of the First Schedule" omitted by s. 29 and Sch., *ibid.*
3. The words "or Rajpramukh " omitted by s. 29 and Sch., *ibid.*
4. *See* the Constitution (Declaration as to Foreign States) Order, 1950 (C.O. 2).

(ಎಫ್) ಮಾನವನ ಆಹಾರವಾಗಿರುವ ಅಥವಾ ಅವನು ಬಳಸುವ ಯಾವುದೇ ವಸ್ತುವಾಗಿರುವ ಅಥವಾ (ಮತ್ತುಬರಿಸುವ ಅಥವಾ ಬರಿಸದಿರುವ) ಯಾವುದೇ ಪಾನೀಯವಾಗಿರುವ ಸರಕುಗಳನ್ನು ಯಾವುದೇ ಸೇವೆಯ ರೂಪದಲ್ಲಾಗಲಿ, ಸೇವೆಯ ಭಾಗವಾಗಿಯಾಗಲಿ ಅಥವಾ ಇನ್ನಾವುದೇ ಬಗೆಯಲ್ಲಾಗಲಿ ಸರಬರಾಜು ಮಾಡುವುದರ ಮೇಲೆ ವಿಧಿಸಲಾಗುವ ತೆರಿಗೆ; ಆದರೆ ಅಂಥ ಸರಬರಾಜು ಅಥವಾ ಸೇವೆಯು ನಗದು ಹಣಕ್ಕಾಗಿ, ಮುಂದೂಡಿದ ಸಂದಾಯಕ್ಕಾಗಿ ಅಥವಾ ಮೌಲ್ಯವುಳ್ಳ ಇತರ ಪ್ರತಿಫಲಕ್ಕಾಗಿ ಮಾಡಿದ ಸರಬರಾಜು ಅಥವಾ ಸೇವೆಯಾಗಿರಬೇಕು;

– ಮತ್ತು ಯಾವುವೇ ಸರಕುಗಳ ಅಂಥ ವರ್ಗಾವಣೆ, ವಶಾವಣೆ ಅಥವಾ ಸರಬರಾಜನ್ನು ಆ ವರ್ಗಾವಣೆ, ವಶಾವಣೆ ಅಥವಾ ಸರಬರಾಜು ಮಾಡುವ ವ್ಯಕ್ತಿಯು ಆ ಸರಕುಗಳ ವರ್ಗಾವಣೆ, ವಶಾವಣೆ ಅಥವಾ ಸರಬರಾಜು ಪಡೆದಿರುವ ವ್ಯಕ್ತಿಗೆ ಮಾರಾಟ ಮಾಡಿರುವುದಾಗಿ ಭಾವಿಸತಕ್ಕದ್ದು;]

[1][(30) "ಒಕ್ಕೂಟ ರಾಜ್ಯಕ್ಷೇತ್ರ" ಎಂದರೆ ಮೊದಲನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಒಕ್ಕೂಟ ರಾಜ್ಯಕ್ಷೇತ್ರ ಮತ್ತು ಭಾರತದ ರಾಜ್ಯಕ್ಷೇತ್ರದಲ್ಲಿ ಒಳಗೊಂಡಿರುವ ಆದರೆ ಆ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರದ ಇತರ ಯಾವುದೇ ರಾಜ್ಯಕ್ಷೇತ್ರವನ್ನು ಒಳಗೊಳ್ಳುತ್ತದೆ.]

**367. ಅರ್ಥವಿವರಣೆ:–** (1) ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು, ಸಾಮಾನ್ಯ ಖಂಡಗಳ ಅಧಿನಿಯಮ, 1897, 372ನೆಯ ಅನುಚ್ಛೇದದ ಮೇರೆಗೆ ಅದರಲ್ಲಿ ಮಾಡಬಹುದಾದ ಯಾವುವೇ ಅಳವಡಿಕೆಗಳಿಗೆ ಮತ್ತು ಮಾರ್ಪಾಟುಗಳಿಗೆ ಒಳಪಟ್ಟು ಡೊಮಿನಿಯನ್ ಆಫ್ ಇಂಡಿಯಾದ ವಿಧಾನಮಂಡಲದ ಒಂದು ಅಧಿನಿಯಮದ ಅರ್ಥವಿವರಣೆ ಮಾಡುವುದಕ್ಕೆ ಅದು ಹೇಗೆ ಅನ್ವಯವಾಗುತ್ತದೆಯೋ ಹಾಗೆಯೇ ಈ ಸಂವಿಧಾನದ ಅರ್ಥವಿವರಣೆಗೆ ಅನ್ವಯವಾಗತಕ್ಕದ್ದು.

(2) ಸಂಸತ್ತಿನ ಅಥವಾ ಅದು ರಚಿಸಿದ ಅಧಿನಿಯಮಗಳಿಗೆ ಅಥವಾ ಕಾನೂನುಗಳಿಗೆ ಅಥವಾ [2]*** ಒಂದು ರಾಜ್ಯದ ವಿಧಾನಮಂಡಲವು ಅಥವಾ ಅದು ರಚಿಸಿದ ಅಧಿನಿಯಮಗಳಿಗೆ ಅಥವಾ ಕಾನೂನುಗಳಿಗೆ ಈ ಸಂವಿಧಾನದಲ್ಲಿರುವ ಯಾವುದೇ ಉಲ್ಲೇಖವು ರಾಷ್ಟ್ರಪತಿಯು ಅಥವಾ ಸಂದರ್ಭಾನುಸಾರ ರಾಜ್ಯಪಾಲನು [3]* * * ಹೊರಡಿಸಿದ ಅಧ್ಯಾದೇಶದ ಉಲ್ಲೇಖವನ್ನು ಒಳಗೊಂಡಿರುವುದಾಗಿ ಅರ್ಥೈಸತಕ್ಕದ್ದು.

(3) ಈ ಸಂವಿಧಾನದ ಉದ್ದೇಶಗಳಿಗಾಗಿ "ವಿದೇಶಿ ರಾಜ್ಯ" ಎಂದರೆ ಭಾರತವಲ್ಲದ ಇತರ ಯಾವುದೇ ರಾಜ್ಯ:

ಪರಂತು, ಸಂಸತ್ತು ರಚಿಸಿದ ಯಾವುದೇ ಕಾನೂನಿನ ಉಪಬಂಧಗಳಿಗೆ ಒಳಪಟ್ಟು, ರಾಷ್ಟ್ರಪತಿಯು ಆದೇಶದ [4]ಮೂಲಕ, ಆ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಉದ್ದೇಶಗಳಿಗಾಗಿ ಯಾವುದೇ ರಾಜ್ಯವನ್ನು ವಿದೇಶಿ ರಾಜ್ಯವಲ್ಲವೆಂದು ಘೋಷಿಸಬಹುದು.

---

1. 1956ನೆಯ ಇಸವಿಯ ಸಂವಿಧಾನ (ಏಳನೆಯ ತಿದ್ದುಪಡಿ) ಅಧಿನಿಯಮದ 29ನೆಯ ಪ್ರಕರಣದ ಹಾಗೂ ಅನುಸೂಚಿಯ ಮೂಲಕ ಮೂಲ (30)ನೆಯ ಖಂಡಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.

2. ಅದೇ ಅಧಿನಿಯಮದ 29ನೆಯ ಪ್ರಕರಣದ ಹಾಗೂ ಅನುಸೂಚಿಯ ಮೂಲಕ "ಮೊದಲನೆಯ ಅನುಸೂಚಿಯ (ಎ) ಭಾಗ ಅಥವಾ (ಬಿ) ಭಾಗದಲ್ಲಿ ನಿರ್ದಿಷ್ಟಪಡಿಸಿರುವ" ಎಂಬ ಪದಗಳನ್ನು ಮತ್ತು ಅಕ್ಷರಗಳನ್ನು ಬಿಟ್ಟುಬಿಡಲಾಗಿದೆ.

3. ಅದೇ ಅಧಿನಿಯಮದ 29ನೆಯ ಪ್ರಕರಣದ ಹಾಗೂ ಅನುಸೂಚಿಯ ಮೂಲಕ "ಅಥವಾ ರಾಜಪ್ರಮುಖನು" ಎಂಬ ಪದಗಳನ್ನು ಬಿಟ್ಟುಬಿಡಲಾಗಿದೆ.

4. ಸಂವಿಧಾನ (ವಿದೇಶೀ ರಾಜ್ಯಗಳಿಗೆ ಸಂಬಂಧಿಸಿದ ಘೋಷಣೆ) ಆದೇಶ, 1950 (ಸಿ.ಒ. 2)

# PART XX

## AMENDMENT OF THE CONSTITUTION

**368. [1][Power of Parliament to amend the Constitution and procedure therefore]:-** [2][(1) Notwithstanding anything in this Constitution, Parliament may in exercise of its constituent power amend by way of addition, variation or repeal any provision of this Constitution in accordance with the procedure laid down in this article.]

[3][(2)] An amendment of this Constitution may be initiated only by the introduction of a Bill for the purpose in either House of Parliament, and when the Bill is passed in each House by a majority of the total membership of that House and by a majority of not less than two-thirds of the members of that House present and voting, [4][it shall be presented to the President who shall give his assent to the Bill and thereupon] the Constitution shall stand amended in accordance with the terms of the Bill:

Provided that if such amendment seeks to make any change in—

(*a*) article 54, article 55, article 73, [5][article 162, article 241 or article 279A] , or

(*b*) Chapter IV of Part V, Chapter V of Part VI, or Chapter I of Part XI, or

(*c*) any of the Lists in the Seventh Schedule, or

(*d*) the representation of States in Parliament, or

(*e*) the provisions of this article,

the amendment shall also require to be ratified by the Legislatures of not less than one-half of the States [6]*** by resolutions to that effect passed by those Legislatures before the Bill making provision for such amendment is presented to the President for assent.

---

1. Subs. by the Constitution (Twenty-fourth Amendment) Act, 1971, s. 3, for "Procedure for the amendment of the Constitution".
2. Ins. by s. 3, *ibid.*
3. Art. 368 renumbered as cl. (2) thereof by s. 3, *ibid.*
4. Subs. by s. 3, *ibid.*, for "it shall be presented to the President for his assent and upon such assent being given to the Bill,".
5. sub. by the Constitution (one hundred and first Amendment) Act, 2016, s.15 (w.e.f. 8-9-2016).
6. The words and letters "specified in Parts A and B of the First Schedule" omitted by the Constitution (Seventh Amendment) Act, 1956, s. 29 and Sch.

# ಭಾಗ - XX

## ಸಂವಿಧಾನದ ತಿದ್ದುಪಡಿ

**368.** [1][**ಸಂವಿಧಾನವನ್ನು ತಿದ್ದುಪಡಿ ಮಾಡಲು ಸಂಸತ್ತಿನ ಅಧಿಕಾರ ಮತ್ತು ಅದಕ್ಕಾಗಿ ಪ್ರಕ್ರಿಯೆ**]:- [2][(1) ಈ ಸಂವಿಧಾನದಲ್ಲಿ ಏನೇ ಇದ್ದಾಗ್ಯೂ, ಸಂಸತ್ತು ತನ್ನ ಸಂವಿಧಾನಾಧಿಕಾರವನ್ನು ಚಲಾಯಿಸಿ, ಈ ಅನುಚ್ಛೇದದಲ್ಲಿ ವಿಧಿಸಿದ ಪ್ರಕ್ರಿಯೆಗನುಸಾರವಾಗಿ ಈ ಸಂವಿಧಾನದ ಯಾವುದೇ ಉಪಬಂಧವನ್ನು, ಅದಕ್ಕೆ ಇನ್ನಷ್ಟು ಸೇರಿಸುವ ಮೂಲಕ ಅಥವಾ ಅದನ್ನು ವ್ಯತ್ಯಸ್ತಗೊಳಿಸುವ ಮೂಲಕ ಅಥವಾ ನಿರಸನಗೊಳಿಸುವ ಮೂಲಕ ತಿದ್ದುಪಡಿ ಮಾಡಬಹುದು.]

[3][(2)] ಈ ಸಂವಿಧಾನದ ಒಂದು ತಿದ್ದುಪಡಿಯನ್ನು, ಆ ಉದ್ದೇಶಕ್ಕಾಗಿ ಒಂದು ವಿಧೇಯಕವನ್ನು ಸಂಸತ್ತಿನ ಯಾವುದಾದರೊಂದು ಸದನದಲ್ಲಿ ಮಂಡಿಸುವ ಮೂಲಕ ಮಾತ್ರ ಪ್ರಾರಂಭಿಸಬಹುದು ಮತ್ತು ಪ್ರತಿಯೊಂದು ಸದನದಲ್ಲಿ ಆ ಸದನದ ಒಟ್ಟು ಸದಸ್ಯರ ಬಹುಮತದಿಂದ ಮತ್ತು ಆ ಸದನದ ಸದಸ್ಯರ ಪೈಕಿ ಹಾಜರಿದ್ದು ಮತಕೊಡುವ ಸದಸ್ಯರಲ್ಲಿ ಮೂರನೆಯ ಎರಡು ಭಾಗಕ್ಕೆ ಕಡಿಮೆಯಿಲ್ಲದಷ್ಟು ಸದಸ್ಯರ ಬಹುಮತದಿಂದ ಆ ವಿಧೇಯಕವು ಅಂಗೀಕೃತವಾದ ಬಳಿಕ [4][ಅದನ್ನು ರಾಷ್ಟ್ರಪತಿಗೆ ಒಪ್ಪಿಸತಕ್ಕದ್ದು; ಅದಕ್ಕೆ ಅವನು ತನ್ನ ಅನುಮತಿಯನ್ನು ನೀಡತಕ್ಕದ್ದು ಮತ್ತು ಆ ತರುವಾಯ] ಸಂವಿಧಾನವು ಆ ವಿಧೇಯಕದ ನಿಬಂಧನೆಗಳಿಗನುಸಾರ ತಿದ್ದುಪಡಿಯಾಗಿದೆ ಎಂದು ಭಾವಿಸತಕ್ಕದ್ದು:

ಪರಂತು, ಅಂಥ ತಿದ್ದುಪಡಿಯು-

(ಎ) 54ನೆಯ ಅನುಚ್ಛೇದ, 55ನೆಯ ಅನುಚ್ಛೇದ, 73ನೆಯ ಅನುಚ್ಛೇದ, [5][162ನೆಯ ಅನುಚ್ಛೇದ, 241ನೆಯ ಅನುಚ್ಛೇದ ಅಥವಾ 279ಎ ಅನುಚ್ಛೇದಗಳಲ್ಲಿ] ಅಥವಾ

(ಬಿ) Vನೆಯ ಭಾಗದ ನೆಯ ಅಧ್ಯಾಯ, IV ನೆಯ ಭಾಗದ Vನೆಯ ಅಧ್ಯಾಯ ಅಥವಾ XI ನೆಯ ಭಾಗದ I ನೆಯ ಅಧ್ಯಾಯಗಳಲ್ಲಿ, ಅಥವಾ

(ಸಿ) ಏಳನೆಯ ಅನುಸೂಚಿಯಲ್ಲಿನ ಪಟ್ಟಿಗಳ ಪೈಕಿ ಯಾವುದೇ ಒಂದು ಪಟ್ಟಿಯಲ್ಲಿ, ಅಥವಾ

(ಡಿ) ಸಂಸತ್ತಿನಲ್ಲಿ ರಾಜ್ಯಗಳಿಗಿರುವ ಪ್ರಾತಿನಿಧ್ಯದಲ್ಲಿ, ಅಥವಾ

(ಇ) ಈ ಅನುಚ್ಛೇದದ ಉಪಬಂಧಗಳಲ್ಲಿ

- ಯಾವುದೇ ಬದಲಾವಣೆ ಮಾಡಲು ಉದ್ದೇಶಿಸಿದರೆ, ಅಂಥ ತಿದ್ದುಪಡಿಯ ಉಪಬಂಧವನ್ನು ಒಳಗೊಂಡಿರುವ ವಿಧೇಯಕವನ್ನು ಅನುಮತಿಗಾಗಿ ರಾಷ್ಟ್ರಪತಿಗೆ ಒಪ್ಪಿಸುವುದಕ್ಕೆ ಮುಂಚೆ [6] *** ರಾಜ್ಯಗಳ ಪೈಕಿ ಅರ್ಧಕ್ಕೆ ಕಡಿಮೆಯಿಲ್ಲದಷ್ಟು ರಾಜ್ಯಗಳ ವಿಧಾನಮಂಡಲಗಳು ಆ ಬಗ್ಗೆ ಅವು ಅಂಗೀಕರಿಸಿದ ನಿರ್ಣಯಗಳ ಮೂಲಕ, ಆ ತಿದ್ದುಪಡಿಯನ್ನು ಅನುಸಮರ್ಥಿಸುವುದು ಅಗತ್ಯವಾಗಿರತಕ್ಕದ್ದು.

---

1. 1971ನೆಯ ಇಸವಿಯ ಸಂವಿಧಾನ (ಇಪ್ಪತ್ತನಾಲ್ಕನೆಯ ತಿದ್ದುಪಡಿ) ಅಧಿನಿಯಮದ ಮೂರನೆಯ ಪ್ರಕರಣದ ಮೂಲಕ "ಸಂವಿಧಾನದ ತಿದ್ದುಪಡಿಗಾಗಿ ಪ್ರಕ್ರಿಯೆ" ಎಂಬುದರ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
2. ಅದೇ ಅಧಿನಿಯಮದ 3ನೆಯ ಪ್ರಕರಣದ ಮೂಲಕ ಸೇರಿಸಲಾಗಿದೆ.
3. ಅದೇ ಅಧಿನಿಯಮದ 3ನೆಯ ಪ್ರಕರಣದ ಮೂಲಕ 368ನೆಯ ಅನುಚ್ಛೇದವನ್ನು ಅದರ (2)ನೆಯ ಖಂಡ ಎಂಬುದಾಗಿ ಪುನರ್‌ಸಂಖ್ಯೆ ನೀಡಲಾಗಿದೆ.
4. ಅದೇ ಅಧಿನಿಯಮದ 3ನೆಯ ಪ್ರಕರಣದ ಮೂಲಕ, "ಅದನ್ನು ರಾಷ್ಟ್ರಪತಿಗೆ ಅವನ ಅನುಮತಿಗಾಗಿ ಒಪ್ಪಿಸತಕ್ಕದ್ದು ಮತ್ತು ಅಂಥ ಅನುಮತಿಯನ್ನು ಆ ವಿಧೇಯಕಕ್ಕೆ ಕೊಟ್ಟ ಬಳಿಕ" ಎಂಬ ಪದಗಳಿಗೆ ಬದಲಾಗಿ ಈ ಪದಗಳನ್ನು ಪ್ರತ್ಯಾಯೋಜಿಸಲಾಗಿದೆ.
5. 2017ನೇ ಇಸವಿಯ ಸಂವಿಧಾನ (ನೂರ ಒಂದನೆಯ ತಿದ್ದುಪಡಿ) ಅಧಿನಿಯಮದ ಪ್ರಕರಣ 15ರ ಮೂಲಕ ದಿನಾಂಕ:8-9-2016ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.
6. 1956ನೆಯ ಇಸವಿಯ ಸಂವಿಧಾನ (ಏಳನೆಯ ತಿದ್ದುಪಡಿ) ಅಧಿನಿಯಮದ 29ನೆಯ ಪ್ರಕರಣದ ಹಾಗೂ ಅನುಸೂಚಿಯ ಮೂಲಕ "ಮೊದಲನೆಯ ಅನುಸೂಚಿಯ (ಎ) ಮತ್ತು (ಬಿ) ಭಾಗದಲ್ಲಿ ಉಲ್ಲೇಖಿತವಾಗಿರುವ" ಎಂಬ ಪದಗಳನ್ನು, ಅಕ್ಷರಗಳನ್ನು ಬಿಟ್ಟುಬಿಡಲಾಗಿದೆ.

[1][(3) Nothing in article 13 shall apply to any amendment made under this article.]

[2][(4) No amendment of this Constitution (including the provisions of Part III) made or purporting to have been made under this article [whether before or after the commencement of section 55 of the Constitution (Forty-second Amendment) Act, 1976] shall be called in question in any court on any ground.

(5) For the removal of doubts, it is hereby declared that there shall be no limitation whatever on the constituent power of Parliament to amend by way of addition, variation or repeal the provisions of this Constitution under this article.]

---

1. Ins. by the Constitution (Twenty-fourth Amendment) Act, 1971, s. 3.
2. Cls. (4) and (5) were ins. in article 368 by s. 55 of the Constitution (Forty-second Amendment) Act, 1976. This section has been declared invalid by the Supreme Court in *Minerva Mills Ltd. and Others Vs. Union of India and Others* (1980) 2 S.C.C. 591.

[1][(3) 13ನೆಯ ಅನುಚ್ಛೇದದಲ್ಲಿ ಇರುವುದು ಯಾವುದೂ, ಈ ಅನುಚ್ಛೇದದ ಮೇರೆಗೆ ಮಾಡಿದ ಯಾವುದೇ ತಿದ್ದುಪಡಿಗೆ ಅನ್ವಯವಾಗತಕ್ಕದ್ದಲ್ಲ.]

[2][(4) [1976ನೆಯ ಇಸವಿಯ ಸಂವಿಧಾನ (ನಲವತ್ತೆರಡನೆಯ ತಿದ್ದುಪಡಿ) ಅಧಿನಿಯಮದ 55ನೆಯ ಪ್ರಕರಣದ ಪ್ರಾರಂಭಕ್ಕೆ ಮುಂಚೆಯಾಗಲಿ ಅಥವಾ ತರುವಾಯವಾಗಲಿ] ಈ ಅನುಚ್ಛೇದದ ಮೇರೆಗೆ ಮಾಡಿದ ಅಥವಾ ಮಾಡಲಾಗಿದೆ ಎಂದು ತಾತ್ಪರ್ಯವಾಗುವ ಈ ಸಂವಿಧಾನದ ಯಾವುದೇ ತಿದ್ದುಪಡಿಯನ್ನು (IIIನೆಯ ಭಾಗದ ಉಪಬಂಧಗಳೂ ಒಳಗೊಂಡಂತೆ) ಯಾವುದೇ ನ್ಯಾಯಾಲಯದಲ್ಲಿ ಯಾವುದೇ ಕಾರಣದ ಮೇಲೆ ಪ್ರಶ್ನಿಸತಕ್ಕದ್ದಲ್ಲ.

(5) ಸಂದೇಹಗಳ ನಿವಾರಣೆಗಾಗಿ ಈ ಅನುಚ್ಛೇದದ ಮೇರೆಗೆ, ಸೇರಿಸುವ, ವ್ಯತ್ಯಸ್ತಗೊಳಿಸುವ ಅಥವಾ ನಿರಸನಗೊಳಿಸುವ ಮೂಲಕ ಈ ಸಂವಿಧಾನದ ಉಪಬಂಧಗಳನ್ನು ತಿದ್ದುಪಡಿ ಮಾಡಲು ಸಂಸತ್ತಿಗೆ ಇರುವ ಸಂವಿಧಾನಾಧಿಕಾರವು ಯಾವುದೇ ಪರಿಮಿತಿಗೆ ಒಳಪಟ್ಟಿರತಕ್ಕದ್ದಲ್ಲ ಎಂದು ಈ ಮೂಲಕ ಘೋಷಿಸಲಾಗಿದೆ.]

---

1. 1971ನೇ ಇಸವಿಯ ಸಂವಿಧಾನ (ಇಪ್ಪತ್ತನಾಲ್ಕನೆಯ ತಿದ್ದುಪಡಿ) ಅಧಿನಿಯಮದ 3ನೇ ಪ್ರಕರಣದ ಮೂಲಕ ಸೇರಿಸಲಾಗಿದೆ.

2. 1976ನೆಯ ಇಸವಿಯ ಸಂವಿಧಾನ (ನಲವತ್ತೆರಡನೆಯ ತಿದ್ದುಪಡಿ) ಅಧಿನಿಯಮದ 55ನೆಯ ಪ್ರಕರಣದ ಮೂಲಕ (3.1.1977 ರಿಂದ ಜಾರಿಗೆ ಬರುವಂತೆ) 368ನೇ ಅನುಚ್ಛೇದದಲ್ಲಿ (4) ಮತ್ತು (5)ನೇ ಖಂಡಗಳನ್ನು ಸೇರಿಸಲಾಗಿತ್ತು. ಈ ಪ್ರಕರಣವನ್ನು ಅಸಿಂಧುವೆಂದು ಸರ್ವೋಚ್ಚ ನ್ಯಾಯಾಲಯವು ಮಿನರ್ವ ಮಿಲ್ಸ್ ಲಿ. ಮತ್ತು ಇತರರು ವಿರುದ್ಧ ಯೂನಿಯನ್ ಆಫ್ ಇಂಡಿಯಾ ಮತ್ತು ಇತರರು (1980) 2 ಎಸ್‌ಸಿಸಿ 591 ರಲ್ಲಿ ಘೋಷಿಸಿದೆ.

# PART XXI

## [1][TEMPORARY, TRANSITIONAL AND SPECIAL PROVISIONS]

**369. Temporary power to Parliament to make laws with respect to certain matters in the State List as if they were matters in the Concurrent List:-** Notwithstanding anything in this Constitution, Parliament shall, during a period of five years from the commencement of this Constitution, have power to make laws with respect to the following matters as if they were enumerated in the Concurrent List, namely:—

(*a*) trade and commerce within a State in, and the production, supply and distribution of, cotton and woollen textiles, raw cotton (including ginned cotton and unginned cotton or *kapas*), cotton seed, paper (including newsprint), food-stuffs (including edible oilseeds and oil), cattle fodder (including oil-cakes and other concentrates), coal (including coke and derivatives of coal), iron, steel and mica;

(*b*) offences against laws with respect to any of the matters mentioned in clause (*a*), jurisdiction and powers of all courts except the Supreme Court with respect to any of those matters, and fees in respect of any of those matters but not including fees taken in any court;

but any law made by Parliament, which Parliament would not but for the provisions of this article have been competent to make, shall, to the extent of the incompetency, cease to have effect on the expiration of the said period, except as respects things done or omitted to be done before the expiration thereof.

[2][**370. Temporary provisions with respect to the State of Jammu and Kashmir:-**

(1) Notwithstanding anything in this Constitution,—

(*a*) the provisions of article 238 shall not apply in relation to the State of Jammu and Kashmir;

---

1. Subs. by the Constitution (Thirteenth Amendment) Act, 1962, s. 2, for "TEMPORARY AND TRANSITIONAL PROVISIONS" (w.e.f. 1-12-1963).

2. In exercise of the powers conferred by this article the President, on the recommendation of the Constituent Assembly of the State of Jammu and Kashmir, declared that, as from the 17th day of November, 1952, the said art. 370 shall be operative with the modification that for the *Explanation* in cl. (1) thereof, the following *Explanation* is substituted, namely:—

"*Explanation*.—For the purposes of this article, the Government of the State means the person for the time being recognised by the President on the recommendation of the Legislative Assembly of the State as the *Sadar-I-Riyasat of Jammu and Kashmir, acting on the advice of the Council of Ministers of the State for the time being in office.".
(Ministry of Law Order No. C.O. 44, dated the 15th November, 1952).

* Now "Governor"

# ಭಾಗ - XXI

## [1][ತಾತ್ಕಾಲಿಕ, ಮಧ್ಯಕಾಲೀನ ಮತ್ತು ವಿಶೇಷ ಉಪಬಂಧಗಳು]

**369. ರಾಜ್ಯಪಟ್ಟಿಯಲ್ಲಿನ ಕೆಲವು ವಿಷಯಗಳ ಬಗ್ಗೆ, ಅವು ಸಮವರ್ತಿಪಟ್ಟಿಯಲ್ಲಿನ ವಿಷಯಗಳಾಗಿದ್ದರೆ ಹೇಗೋ ಹಾಗೆ ಕಾನೂನುಗಳನ್ನು ರಚಿಸಲು ಸಂಸತ್ತಿಗೆ ತಾತ್ಕಾಲಿಕ ಅಧಿಕಾರ:-** ಈ ಸಂವಿಧಾನದಲ್ಲಿ ಏನೇ ಇದ್ದಾಗ್ಯೂ, ಈ ಸಂವಿಧಾನದ ಪ್ರಾರಂಭದಿಂದ ಐದು ವರ್ಷಗಳ ಅವಧಿಯಲ್ಲಿ ಈ ಕೆಳಕಂಡ ವಿಷಯಗಳ ಬಗ್ಗೆ, ಅವು ಸಮವರ್ತಿ ಪಟ್ಟಿಯಲ್ಲಿ ನಮೂದಾಗಿದ್ದರೆ ಹೇಗೋ ಹಾಗೆ ಕಾನೂನುಗಳನ್ನು ರಚಿಸಲು ಸಂಸತ್ತಿಗೆ ಅಧಿಕಾರವಿರತಕ್ಕದ್ದು, ಎಂದರೆ:-

(ಎ) ಒಂದು ರಾಜ್ಯದೊಳಗೆ, ಹತ್ತಿಯ ಮತ್ತು ಉಣ್ಣೆಯ ಬಟ್ಟೆಗಳು, ಕಚ್ಚಾ ಹತ್ತಿ, (ಬೀಜ ತೆಗೆದ ಹತ್ತಿ ಮತ್ತು ಬೀಜ ತೆಗೆಯದಿರುವ ಹತ್ತಿ ಅಥವಾ ಕಪಾಸನ್ನು ಒಳಗೊಂಡು) ಹತ್ತಿಯ ಬೀಜ, ಕಾಗದ (ವೃತ್ತಪತ್ರಿಕೆಯ ಮುದ್ರಣ ಕಾಗದವನ್ನೂ ಒಳಗೊಂಡು), ಆಹಾರ ಪದಾರ್ಥಗಳು (ಖಾದ್ಯ ಎಣ್ಣೆ ಬೀಜಗಳನ್ನೂ ಮತ್ತು ಎಣ್ಣೆಯನ್ನೂ ಒಳಗೊಂಡು), ದನಗಳ ಮೇವು (ಎಣ್ಣೆಯ ಹಿಂಡಿಗಳು, ಇತರ ಸಾರೀಕೃತ ಪದಾರ್ಥಗಳನ್ನೂ ಒಳಗೊಂಡು), ಕಲ್ಲಿದ್ದಲು (ಕೋಕ್ ಮತ್ತು ಕಲ್ಲಿದ್ದಲಿನ ಜನ್ಯ ಪದಾರ್ಥಗಳನ್ನು ಒಳಗೊಂಡು), ಕಬ್ಬಿಣ, ಉಕ್ಕು ಮತ್ತು ಅಭ್ರಕಗಳ ವ್ಯಾಪಾರ ಮತ್ತು ವಾಣಿಜ್ಯ, ಉತ್ಪಾದನೆ, ಸರಬರಾಜು ಮತ್ತು ವಿತರಣೆ;

(ಬಿ) (ಎ) ಖಂಡದಲ್ಲಿ ನಮೂದಿಸಿರುವ ವಿಷಯಗಳಲ್ಲಿ ಯಾವುದಕ್ಕಾದರೂ ಸಂಬಂಧಿಸಿದ ಕಾನೂನುಗಳಿಗೆ ವಿರುದ್ಧವಾದ ಅಪರಾಧಗಳು, ಆ ವಿಷಯಗಳಲ್ಲಿ ಯಾವುದಕ್ಕಾದರೂ ಸಂಬಂಧಿಸಿದಂತೆ ಸರ್ವೋಚ್ಚ ನ್ಯಾಯಾಲಯದ ಹೊರತು ಎಲ್ಲಾ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿ ಮತ್ತು ಅಧಿಕಾರಗಳು ಮತ್ತು ಆ ವಿಷಯಗಳಲ್ಲಿ ಯಾವುದಕ್ಕಾದರೂ ಸಂಬಂಧಿಸಿದಂತೆ ಯಾವುದೇ ನ್ಯಾಯಾಲಯದಲ್ಲಿ ತೆಗೆದುಕೊಂಡ ಫೀಜುಗಳನ್ನು ಹೊರತುಪಡಿಸಿ ಇತರ ಫೀಜುಗಳು;

ಆದರೆ, ಸಂಸತ್ತು ಯಾವ ಕಾನೂನನ್ನು ರಚಿಸಲು ಈ ಅನುಚ್ಛೇದದ ಉಪಬಂಧಗಳು ಇಲ್ಲದಿದ್ದಲ್ಲಿ ಸಕ್ಷಮವಾಗುತ್ತಿರಲಿಲ್ಲವೋ ಆ ಕಾನೂನನ್ನು ಸಂಸತ್ತು ಮಾಡಿದ್ದರೆ, ಸದರಿ ಅವಧಿಯು ಮುಗಿದ ಬಳಿಕ, ಹಾಗೆ ಮುಗಿಯುವುದಕ್ಕೆ ಮುಂಚೆ ಮಾಡಿದ ಅಥವಾ ಮಾಡದೆ ಬಿಟ್ಟ ಕಾರ್ಯಗಳಿಗೆ ಸಂಬಂಧಿಸಿದಂತೆ ಹೊರತು ಹಾಗೆ ಸಕ್ಷಮವಾಗಿಲ್ಲದಿರುವಷ್ಟರ ಮಟ್ಟಿಗೆ, ಅದು ಪರಿಣಾಮಕಾರಿಯಾಗಿರುವುದು ನಿಂತುಹೋಗತಕ್ಕದ್ದು.

[2][**370. ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಸಂಬಂಧಪಟ್ಟಂತೆ ತಾತ್ಕಾಲಿಕ ಉಪಬಂಧಗಳು:-** (1) ಈ ಸಂವಿಧಾನದಲ್ಲಿ ಏನೇ ಇದ್ದಾಗ್ಯೂ,-

(ಎ) 238ನೆಯ ಅನುಚ್ಛೇದದ ಉಪಬಂಧಗಳು ಜಮ್ಮು ಮತ್ತು ಕಾಶ್ಮೀರ ರಾಜ್ಯದ ಸಂಬಂಧದಲ್ಲಿ ಅನ್ವಯವಾಗತಕ್ಕದ್ದಲ್ಲ;

---

1. 1962ನೆಯ ಇಸವಿಯ ಸಂವಿಧಾನ (ಹದಿಮೂರನೆಯ ತಿದ್ದುಪಡಿ) ಅಧಿನಿಯಮದ 2ನೆಯ ಪ್ರಕರಣದ ಮೂಲಕ "ತಾತ್ಕಾಲಿಕ ಮತ್ತು ಮಧ್ಯಕಾಲೀನ ಉಪಬಂಧಗಳು" ಎಂಬುದಕ್ಕೆ ಬದಲಾಗಿ (1-12-1963ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.

2. ಈ 370ನೇ ಅನುಚ್ಛೇದದ ಮೇರೆಗೆ ಕೊಡಲಾಗಿರುವ ಅಧಿಕಾರಗಳನ್ನು ಚಲಾಯಿಸಿ ರಾಷ್ಟ್ರಪತಿಯು ಜಮ್ಮು ಮತ್ತು ಕಾಶ್ಮೀರ ರಾಜ್ಯದ ಸಂವಿಧಾನ ಸಭೆಯ ಶಿಫಾರಸ್ಸಿನ ಮೇರೆಗೆ ಈ ಅನುಚ್ಛೇದವು ಈ ಕೆಳಕಂಡ ಮಾರ್ಪಾಟಿನೊಂದಿಗೆ, ಎಂದರೆ ಅದರ (1) ನೆಯ ಖಂಡದಲ್ಲಿ ಈಗಿರುವ ವಿವರಣೆಗೆ ಬದಲಾಗಿ, ಈ ಕೆಳಕಂಡ ವಿವರಣೆಯ ಸಹಿತ 1952ನೆಯ ಇಸವಿಯ ನವೆಂಬರ್ ತಿಂಗಳ ಹದಿನೇಳನೆಯ ದಿನಾಂಕದಿಂದ ಜಾರಿಗೆ ಬರತಕ್ಕದ್ದೆಂದು ಘೋಷಿಸಿದ್ದಾನೆ:-

   "**ವಿವರಣೆ:-** ಈ ಅನುಚ್ಛೇದದ ಉದ್ದೇಶಗಳಿಗಾಗಿ ಆ ರಾಜ್ಯದ ಸರ್ಕಾರವೆಂದರೆ, ಆ ರಾಜ್ಯದ ವಿಧಾನಸಭೆಯ ಶಿಫಾರಸ್ಸಿನ ಮೇರೆಗೆ ಜಮ್ಮು ಮತ್ತು ಕಾಶ್ಮೀರ ರಾಜ್ಯದ *ಸದರ್-ಏ-ರಿಯಾಸತ್ ಎಂದು ತತ್ಕಾಲದಲ್ಲಿ ರಾಷ್ಟ್ರಪತಿಯಿಂದ ಮನ್ನಣೆ ಪಡೆದು ತತ್ಕಾಲದಲ್ಲಿ ಪದದಲ್ಲಿರುವ ರಾಜ್ಯದ ಮಂತ್ರಿಮಂಡಲದ ಸಲಹೆಯ ಮೇಲೆ ಕೆಲಸ ಮಾಡುತ್ತಿರುವ ವ್ಯಕ್ತಿ ಎಂದು ಅರ್ಥ".

   (ವಿಧಿಮಂತ್ರಾಲಯ ಆದೇಶ ಸಂಖ್ಯೆ ಸಿ.ಓ.44 ದಿನಾಂಕ 15ನೇ ನವೆಂಬರ್ 1952).

   * ಈಗ "ರಾಜ್ಯಪಾಲ".

(ಸಿ) ರಾಷ್ಟ್ರಪತಿಯು ಸಂಸತ್ತಿನ ಯಾವುದೇ ಅಧಿನಿಯಮಕ್ಕೆ ಸಂಬಂಧಿಸಿದಂತೆ, ಅಧಿಸೂಚನೆಯ ಮೂಲಕ ಆ ಅಧಿನಿಯಮವು ತ್ರಿಪುರರಾಜ್ಯದಲ್ಲಿನ ಸ್ವಾಯತ್ತ ಜಿಲ್ಲೆಗೆ ಅಥವಾ ಸ್ವಾಯತ್ತ ಕ್ಷೇತ್ರಕ್ಕೆ ಅನ್ವಯವಾಗತಕ್ಕದ್ದಲ್ಲವೆಂದು, ಅಥವಾ ತಾನು ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ವಿನಾಯಿತಿಗಳು ಅಥವಾ ಮಾರ್ಪಾಡುಗಳಿಗೆ ಒಳಪಟ್ಟು, ಅಂಥ ಜಿಲ್ಲೆಗೆ ಅಥವಾ ಕ್ಷೇತ್ರಕ್ಕೆ ಅಥವಾ ಅದರ ಯಾವುದೇ ಭಾಗಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸಬಹುದು ಮತ್ತು ಅಂಥ ಯಾವುದೇ ನಿರ್ದೇಶನವನ್ನು ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ನೀಡಬಹುದು.

**12ಬಿ. ಮಿಜೋರಾಂ ರಾಜ್ಯದಲ್ಲಿನ ಸ್ವಾಯತ್ತ ಜಿಲ್ಲೆಗಳಿಗೆ ಮತ್ತು ಸ್ವಾಯತ್ತ ಕ್ಷೇತ್ರಗಳಿಗೆ ಸಂಸತ್ತಿನ ಅಧಿನಿಯಮಗಳ ಮತ್ತು ಮಿಜೋರಾಂ ರಾಜ್ಯ ವಿಧಾನಮಂಡಲದ ಅಧಿನಿಯಮಗಳ ಅನ್ವಯ:–** ಈ ಸಂವಿಧಾನದಲ್ಲಿ ಏನೇ ಇದ್ದರೂ,–

(ಎ) ಈ ಅನುಸೂಚಿಯ 3ನೇ ಪ್ಯಾರಾದಲ್ಲಿ ನಿರ್ದಿಷ್ಟಪಡಿಸಿರುವ ವಿಷಯಗಳ ಪೈಕಿ ಯಾವ ವಿಷಯಕ್ಕೆ ಸಂಬಂಧಪಟ್ಟಂತೆ ಒಂದು ಜಿಲ್ಲಾ ಪರಿಷತ್ತಿನ ಅಥವಾ ಪ್ರಾದೇಶಿಕ ಪರಿಷತ್ತಿನ ವಿಷಯಗಳೆಂಬುದಾಗಿ ಕಾನೂನುಗಳನ್ನು ಅವು ರಚಿಸಬಹುದೋ ಆ ವಿಷಯಕ್ಕೆ ಸಂಬಂಧಪಟ್ಟಂತೆ ಮಿಜೋರಾಂ ರಾಜ್ಯ ವಿಧಾನಮಂಡಲದ ಯಾವುದೇ ಅಧಿನಿಯಮವು ಮತ್ತು ಭಟ್ಟಿ ಇಳಿಸದಿರುವ ಯಾವುದೇ ಮದ್ಯಸಾರಯುಕ್ತ ಪಾನೀಯದ ಸೇವನೆಯನ್ನು ನಿಷೇಧಿಸುವ ಅಥವಾ ನಿರ್ಬಂಧಿಸುವ ಮಿಜೋರಾಂ ರಾಜ್ಯ ವಿಧಾನಮಂಡಲದ ಯಾವುದೇ ಅಧಿನಿಯಮವು, ಆ ರಾಜ್ಯದಲ್ಲಿನ ಯಾವುದೇ ಸ್ವಾಯತ್ತ ಜಿಲ್ಲೆಗೆ ಅಥವಾ ಸ್ವಾಯತ್ತ ಕ್ಷೇತ್ರಕ್ಕೆ– ಈ ಎರಡರಲ್ಲಿ ಯಾವುದಾದರೂ ಒಂದಕ್ಕೆ ಸಂಬಂಧಪಟ್ಟಂತೆ ಅನ್ವಯವಾಗತಕ್ಕದ್ದೆಂದು, ಅಂಥ ಜಿಲ್ಲೆಯ ಅಥವಾ ಅಂಥ ಕ್ಷೇತ್ರದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಜಿಲ್ಲಾ ಪರಿಷತ್ತು ಸಾರ್ವಜನಿಕ ಅಧಿಸೂಚನೆಯ ಮೂಲಕ, ನಿರ್ದೇಶಿಸಿದ ಹೊರತು ಅನ್ವಯವಾಗತಕ್ಕದ್ದಲ್ಲ ಮತ್ತು ಜಿಲ್ಲಾ ಪರಿಷತ್ತು ಯಾವುದೇ ಅಧಿನಿಯಮದ ಬಗ್ಗೆ ಅಂಥ ನಿರ್ದೇಶನವನ್ನು ನೀಡುವಾಗ, ಅಂಥ ಜಿಲ್ಲೆಗೆ ಅಥವಾ ಅಂಥ ಕ್ಷೇತ್ರಕ್ಕೆ ಅಥವಾ ಅದರ ಯಾವುದೇ ಭಾಗಕ್ಕೆ ಆ ಅಧಿನಿಯಮವನ್ನು ಅನ್ವಯಿಸುವಲ್ಲಿ, ಜಿಲ್ಲಾ ಪರಿಷತ್ತು ಸೂಕ್ತವೆಂದು ಯೋಚಿಸುವಂಥ ವಿನಾಯಿತಿಗಳಿಗೆ ಅಥವಾ ಮಾರ್ಪಾಡುಗಳಿಗೆ ಒಳಪಟ್ಟು ಆ ಅಧಿನಿಯಮವು ಪರಿಣಾಮಕಾರಿಯಾಗತಕ್ಕದ್ದೆಂದು ನಿರ್ದೇಶಿಸಬಹುದು;

(ಬಿ) ರಾಜ್ಯಪಾಲನು, ಸಾರ್ವಜನಿಕ ಅಧಿಸೂಚನೆಯ ಮೂಲಕ ಸಂಸತ್ತಿನ ಅಥವಾ ಮಿಜೋರಾಂ ರಾಜ್ಯ ವಿಧಾನಮಂಡಲದ ಯಾವ ಅಧಿನಿಯಮಕ್ಕೆ, ಈ ಉಪಪ್ಯಾರಾದ ಉಪಬಂಧಗಳು ಅನ್ವಯವಾಗುವುದಿಲ್ಲವೋ ಅಂಥ ಯಾವುದೇ ಅಧಿನಿಯಮವು ಆ ರಾಜ್ಯದಲ್ಲಿನ ಒಂದು ಸ್ವಾಯತ್ತ ಜಿಲ್ಲೆಗೆ ಅಥವಾ ಒಂದು ಸ್ವಾಯತ್ತ ಕ್ಷೇತ್ರಕ್ಕೆ ಅನ್ವಯವಾಗತಕ್ಕದ್ದಲ್ಲವೆಂದು, ಅಥವಾ ಅಂಥ ಜಿಲ್ಲೆಗೆ ಅಥವಾ ಕ್ಷೇತ್ರಕ್ಕೆ ಅಥವಾ ಅದರ ಯಾವುದೇ ಭಾಗಕ್ಕೆ ತಾನು ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ವಿನಾಯಿತಿಗಳು ಅಥವಾ ಮಾರ್ಪಾಟುಗಳಿಗೆ ಒಳಪಟ್ಟು ಅನ್ವಯವಾಗತಕ್ಕದ್ದೆಂದು ನಿರ್ದೇಶಿಸಬಹುದು;

(ಸಿ) ರಾಷ್ಟ್ರಪತಿಯು, ಸಂಸತ್ತಿನ ಯಾವುದೇ ಅಧಿನಿಯಮಕ್ಕೆ ಸಂಬಂಧಿಸಿದಂತೆ, ಅಧಿಸೂಚನೆಯ ಮೂಲಕ ಆ ಅಧಿನಿಯಮವು ಮಿಜೋರಾಂ ರಾಜ್ಯದಲ್ಲಿನ ಸ್ವಾಯತ್ತ ಜಿಲ್ಲೆಗೆ ಅಥವಾ ಸ್ವಾಯತ್ತ ಕ್ಷೇತ್ರಕ್ಕೆ ಅನ್ವಯವಾಗತಕ್ಕದ್ದಲ್ಲವೆಂದು, ಅಥವಾ ತಾನು ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ವಿನಾಯಿತಿಗಳು ಅಥವಾ ಮಾರ್ಪಾಟುಗಳಿಗೆ ಒಳಪಟ್ಟು, ಅಂಥ ಜಿಲ್ಲೆಗೆ ಅಥವಾ ಕ್ಷೇತ್ರಕ್ಕೆ ಅಥವಾ ಅದರ ಯಾವುದೇ ಭಾಗಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸಬಹುದು ಮತ್ತು ಅಂಥ ಯಾವುದೇ ನಿರ್ದೇಶನವನ್ನು ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ನೀಡಬಹುದು.]

**13. ಸ್ವಾಯತ್ತ ಜಿಲ್ಲೆಗಳಿಗೆ ಸಂಬಂಧಿಸಿದ ಅಂದಾಜು ಜಮೆಗಳನ್ನು ಮತ್ತು ವೆಚ್ಚಗಳನ್ನು ವಾರ್ಷಿಕ ಹಣಕಾಸು ವಿವರ ಪತ್ರದಲ್ಲಿ ಪ್ರತ್ಯೇಕವಾಗಿ ತೋರಿಸುವುದು:–** ಒಂದು ಸ್ವಾಯತ್ತ ಜಿಲ್ಲೆಗೆ ಸಂಬಂಧಿಸಿದ ಯಾವ ಅಂದಾಜು ಜಮೆಗಳನ್ನು [1]***ರಾಜ್ಯದ ಸಂಚಿತ ನಿಧಿಗೆ ಜಮೆ ಮಾಡಬೇಕಾಗಿದೆಯೋ ಆ ಜಮೆಗಳನ್ನು ಅಥವಾ ಯಾವ ವೆಚ್ಚಗಳನ್ನು ಆ ನಿಧಿಯಿಂದ ಭರಿಸಬೇಕಾಗಿದೆಯೋ ಆ ವೆಚ್ಚಗಳನ್ನು ಚರ್ಚೆಗಾಗಿ ಮೊದಲು ಜಿಲ್ಲಾ ಪರಿಷತ್ತಿನ ಮುಂದೆ ಇಡತಕ್ಕದ್ದು ಮತ್ತು ಆ ಚರ್ಚೆಯ ಅನಂತರ 202ನೆಯ ಅನುಚ್ಛೇದದ ಮೇರೆಗೆ ರಾಜ್ಯದ ವಿಧಾನಮಂಡಲದ ಮುಂದೆ ಇಡಬೇಕಾದ ರಾಜ್ಯದ ವಾರ್ಷಿಕ ಹಣಕಾಸು ವಿವರ ಪತ್ರದಲ್ಲಿ ಅವುಗಳನ್ನು ಪ್ರತ್ಯೇಕವಾಗಿ ತೋರಿಸತಕ್ಕದ್ದು.

---

1. 1971ನೆಯ ಇಸವಿಯ ಈಶಾನ್ಯ ಪ್ರದೇಶಗಳ (ಪುನರ್ ರಚನೆ) ಅಧಿನಿಯಮದ (1971ರ 81) 71(i)ನೇ ಪ್ರಕರಣದ ಮತ್ತು ಎಂಟನೇ ಅನುಸೂಚಿಯ ಮೂಲಕ (21.1.1972 ರಿಂದ ಜಾರಿಗೆ ಬರುವಂತೆ) "ಅಸ್ಸಾಂ" ಎಂಬ ಪದವನ್ನು ಬಿಟ್ಟುಬಿಡಲಾಗಿದೆ.

[1][**14. Appointment of Commission to inquire into and report on the administration of autonomous districts and autonomous regions.—** (1) The Governor may at any time appoint a Commission to examine and report on any matter specified by him relating to the administration of the autonomous districts and autonomous regions in the State, including matters specified in clauses (*c*), (*d*), (*e*) and (*f*) of sub-paragraph (3) of paragraph 1 of this Schedule, or may appoint a Commission to inquire into and report from time to time on the administration of autonomous districts and autonomous regions in the State generally and in particular on—

(*a*) the provision of educational and medical facilities and communications in such districts and regions;

(*b*) the need for any new or special legislation in respect of such districts and regions; and

(*c*) the administration of the laws, rules and regulations made by the District and Regional Councils;

and define the procedure to be followed by such Commission.

(2) The report of every such Commission with the recommendations of the Governor with respect thereto shall be laid before the Legislature of the State by the Minister concerned together with an explanatory memorandum regarding the action proposed to be taken thereon by [2][the Government of the State].

(3) In allocating the business of the Government of the State among his Ministers the Governor may place one of his Ministers specially in charge of the welfare of the autonomous districts and autonomous regions in the State.

[3][**15. Annulment or suspension of acts and resolutions of District and Regional Councils.—**(1) If at any time the Governor is satisfied that an act or resolution of a District or a Regional Council is likely to endanger the safety of India [4][or is likely to be prejudicial to public order], he may annul or suspend such act or resolution and take such steps as he may consider necessary (including the suspension of the Council and the assumption to himself of all or any of the powers vested in or exercisable by the Council) to prevent the commission or continuance of such act, or the giving of effect to such resolution.

---

1. Paragraph 14 has been amended in its application to the State of Assam by the Sixth Schedule to the Constitution (Amendment) Act, 1995 (42 of 1995), s. 2, as under:—

   'in paragraph 14, in sub-paragraph (2), the words "with the recommendations of the Governor with respect thereto" shall be omitted.'.

2. Subs. by the North-Eastern Areas (Reorganisation) Act, 1971 (81 of 1971), s. 71 (i) and Eighth Sch., for "the Government of Assam" (w.e.f. 21-1-1972).

3. Paragraph 15 has been amended in its application to the States of Tripura and Mizoram by the Sixth Schedule to the Constitution (Amendment) Act, 1988 (67 of 1988), s. 2, as under,—

   (*a*) in the opening paragraph, for the words "by the Legislature of the State", the words "by him" shall be substituted;

   (*b*) the proviso shall be omitted.

4. Ins. by the Assam Reorganisation (Meghalaya) Act, 1969 (55 of 1969), s. 74 and Fourth Sch. (w.e.f. 2-4-1970).

[1][**14. ಸ್ವಾಯತ್ತ ಜಿಲ್ಲೆಗಳ ಮತ್ತು ಸ್ವಾಯತ್ತ ಕ್ಷೇತ್ರಗಳ ಆಡಳಿತದ ಬಗ್ಗೆ ವಿಚಾರಣೆ ಮಾಡಲು ಮತ್ತು ವರದಿ ಮಾಡಲು ಆಯೋಗದ ನೇಮಕ:–** (1) ರಾಜ್ಯಪಾಲನು, ರಾಜ್ಯದಲ್ಲಿನ ಸ್ವಾಯತ್ತ ಜಿಲ್ಲೆಗಳ ಮತ್ತು ಸ್ವಾಯತ್ತ ಕ್ಷೇತ್ರಗಳ ಆಡಳಿತಕ್ಕೆ ಸಂಬಂಧಪಟ್ಟಂತೆ ಈ ಅನುಸೂಚಿಯ 1ನೆಯ ಪ್ಯಾರಾದ (3) ನೆಯ ಉಪಪ್ಯಾರಾದ (ಸಿ), (ಡಿ), (ಇ) ಮತ್ತು (ಎಫ್) ಖಂಡಗಳಲ್ಲಿ ನಿರ್ದಿಷ್ಟಪಡಿಸಿರುವ ವಿಷಯಗಳನ್ನೊಳಗೊಂಡು ತಾನು ನಿರ್ದಿಷ್ಟಪಡಿಸುವಂಥ ಯಾವುದೇ ವಿಷಯದ ಬಗ್ಗೆ ವಿಚಾರಣೆ ನಡೆಸಿ ವರದಿ ಮಾಡಲು ಯಾವುದೇ ಕಾಲದಲ್ಲಿ ಒಂದು ಆಯೋಗವನ್ನು ನೇಮಕ ಮಾಡಬಹುದು ಅಥವಾ ಸಾಮಾನ್ಯವಾಗಿ ರಾಜ್ಯದಲ್ಲಿನ ಸ್ವಾಯತ್ತ ಜಿಲ್ಲೆಗಳ ಮತ್ತು ಸ್ವಾಯತ್ತ ಕ್ಷೇತ್ರಗಳ ಆಡಳಿತದ ವಿಷಯದ ಬಗ್ಗೆ ಮತ್ತು ವಿಶೇಷವಾಗಿ–

(ಎ) ಅಂಥ ಜಿಲ್ಲೆಗಳಲ್ಲಿ ಮತ್ತು ಕ್ಷೇತ್ರಗಳಲ್ಲಿ ಶೈಕ್ಷಣಿಕ ಮತ್ತು ವೈದ್ಯಕೀಯ ಸೌಲಭ್ಯಗಳನ್ನು ಮತ್ತು ಸಂಪರ್ಕಗಳನ್ನು ಒದಗಿಸುವ ಬಗ್ಗೆ;

(ಬಿ) ಅಂಥ ಜಿಲ್ಲೆಗಳ ಮತ್ತು ಕ್ಷೇತ್ರಗಳ ಬಗ್ಗೆ ಯಾವುದೇ ಹೊಸ ಶಾಸನದ ಅಥವಾ ವಿಶೇಷ ಶಾಸನದ ರಚನೆಯ ಅವಶ್ಯಕತೆಯ ಬಗ್ಗೆ; ಮತ್ತು

(ಸಿ) ಜಿಲ್ಲಾ ಮತ್ತು ಪ್ರಾದೇಶಿಕ ಪರಿಷತ್ತುಗಳು ರಚಿಸಿದ ಕಾನೂನುಗಳ, ನಿಯಮಗಳ ಮತ್ತು ವಿನಿಯಮಗಳ ಜಾರಿಯ ಬಗ್ಗೆ

– ಕಾಲಕಾಲಕ್ಕೆ ವಿಚಾರಣೆ ನಡೆಸಿ ವರದಿಮಾಡಲು ಒಂದು ಆಯೋಗವನ್ನು ನೇಮಕ ಮಾಡಬಹುದು ಮತ್ತು ಅಂಥ ಆಯೋಗವು ಅನುಸರಿಸಬೇಕಾದ ಪ್ರಕ್ರಿಯೆಯನ್ನು ನಿರ್ಧರಿಸಬಹುದು.

(2) ಸಂಬಂಧಪಟ್ಟ ಮಂತ್ರಿಯು ಅಂಥ ಪ್ರತಿಯೊಂದು ಆಯೋಗದ ವರದಿಯನ್ನು, ಆ ಬಗ್ಗೆ ರಾಜ್ಯಪಾಲನು ಮಾಡುವ ಶಿಫಾರಸ್ಸುಗಳೊಡನೆ ಮತ್ತು ಅದರ ಮೇಲೆ [2][ಆ ರಾಜ್ಯಸರ್ಕಾರವು] ಕೈಗೊಳ್ಳಲು ಉದ್ದೇಶಿಸಿರುವ ಕ್ರಮದ ಬಗ್ಗೆ ವಿವರಣಾತ್ಮಕ ಜ್ಞಾಪನ ಪತ್ರದೊಡನೆ ರಾಜ್ಯದ ವಿಧಾನಮಂಡಲದ ಮುಂದೆ ಇಡತಕ್ಕದ್ದು.

(3) ರಾಜ್ಯ ಸರ್ಕಾರದ ಆಡಳಿತ ವ್ಯವಹಾರವನ್ನು ತನ್ನ ಮಂತ್ರಿಗಳಿಗೆ ಹಂಚಿಕೊಡುವಾಗ ರಾಜ್ಯಪಾಲನು ತನ್ನ ಮಂತ್ರಿಗಳಲ್ಲಿ ಒಬ್ಬನನ್ನು ವಿಶೇಷವಾಗಿ ರಾಜ್ಯದ ಸ್ವಾಯತ್ತ ಜಿಲ್ಲೆಗಳ ಮತ್ತು ಸ್ವಾಯತ್ತ ಕ್ಷೇತ್ರಗಳ ಕಲ್ಯಾಣವನ್ನು ನೋಡಿಕೊಳ್ಳಲು ಗೊತ್ತುಮಾಡಬಹುದು.

[3][**15. ಜಿಲ್ಲಾ ಮತ್ತು ಪ್ರಾದೇಶಿಕ ಪರಿಷತ್ತುಗಳ ಕಾರ್ಯಗಳ ಮತ್ತು ನಿರ್ಣಯಗಳ ರದ್ದಿಯಾತಿ ಅಥವಾ ಅಮಾನತು:–** (1) ಒಂದು ಜಿಲ್ಲೆ ಅಥವಾ ಪ್ರಾದೇಶಿಕ ಪರಿಷತ್ತು ಕೈಗೊಂಡ ಕಾರ್ಯದಿಂದ ಅಥವಾ ನಿರ್ಣಯದಿಂದ ಭಾರತದ ಸುರಕ್ಷತೆಗೆ ಅಪಾಯ ಉಂಟಾಗುವ ಸಂಭವವಿದೆಯೆಂದು [4][ಅಥವಾ ಸಾರ್ವಜನಿಕ ಸುವ್ಯವಸ್ಥೆಯ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗುವ ಸಂಭವವಿದೆಯೆಂದು] ಯಾವುದೇ ಕಾಲದಲ್ಲಿ ರಾಜ್ಯಪಾಲನಿಗೆ ಮನದಟ್ಟಾದರೆ, ಅಂಥ ಕಾರ್ಯವನ್ನು ಅಥವಾ ನಿರ್ಣಯವನ್ನು ರದ್ದುಗೊಳಿಸಬಹುದು ಅಥವಾ ಅಮಾನತುಗೊಳಿಸಬಹುದು ಮತ್ತು ಅಂಥ ಕಾರ್ಯ ಅಥವಾ ಅದರ ಮುಂದುವರಿಕೆಯನ್ನು ಅಥವಾ ಅಂಥ ನಿರ್ಣಯದ ಜಾರಿಯನ್ನು ತಡೆಗಟ್ಟುವುದಕ್ಕಾಗಿ ಅವಶ್ಯವೆಂದು ತಾನು ಪರಿಗಣಿಸಬಹುದಾದಂಥ ಕ್ರಮಗಳನ್ನು (ಆ ಪರಿಷತ್ತಿನ ಅಮಾನತ್ತನ್ನು ಮತ್ತು ಆ ಪರಿಷತ್ತಿನಲ್ಲಿ ನಿಹಿತವಾಗಿರುವ ಅಥವಾ ಅದು ಚಲಾಯಿಸಬಹುದಾದ ಎಲ್ಲ ಅಧಿಕಾರಗಳನ್ನು ಅಥವಾ ಯಾವುದೇ ಅಧಿಕಾರವನ್ನು ತಾನೇ ವಹಿಸಿಕೊಳ್ಳುವುದನ್ನೊಳಗೊಂಡು) ಕೈಗೊಳ್ಳಬಹುದು.

---

1. ಅಸ್ಸಾಂ ರಾಜ್ಯಕ್ಕೆ ಅನ್ವಯಿಸುವುದಕ್ಕಾಗಿ 14ನೇ ಪ್ಯಾರಾವನ್ನು 1995ನೇ ಇಸವಿಯ ಸಂವಿಧಾನ ಆರನೇ ಅನುಸೂಚಿ (ತಿದ್ದುಪಡಿ) ಅಧಿನಿಯಮದ (1995ರ 42) 2ನೇ ಪ್ರಕರಣದ ಮೂಲಕ ಈ ಮುಂದಿನಂತೆ ತಿದ್ದುಪಡಿ ಮಾಡಲಾಗಿದೆ:–
   14ನೇ ಪ್ಯಾರಾದಲ್ಲಿ (2)ನೇ ಉಪ ಪ್ಯಾರಾದಲ್ಲಿ "ಆ ಬಗ್ಗೆ ರಾಜ್ಯಪಾಲನು ಮಾಡುವ ಶಿಫಾರಸ್ಸುಗಳೊಡನೆ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು."
2. 1971ನೇ ಇಸವಿಯ ಈಶಾನ್ಯ ಪ್ರದೇಶಗಳ (ಪುನರ್ ರಚನೆ) ಅಧಿನಿಯಮದ (1971ರ 81) 71(i)ನೇ ಪ್ರಕರಣದ ಮತ್ತು ಎಂಟನೇ ಅನುಸೂಚಿಯ ಮೂಲಕ "ಅಸ್ಸಾಂ ಸರ್ಕಾರವು" ಎಂಬುದಕ್ಕೆ ಬದಲಾಗಿ (21.1.1972 ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.
3. ತ್ರಿಪುರ ಮತ್ತು ಮಿಜೋರಾಂ ರಾಜ್ಯಗಳಿಗೆ ಅನ್ವಯಿಸುವುದಕ್ಕಾಗಿ 15ನೇ ಪ್ಯಾರಾವನ್ನು 1988ನೇ ಇಸವಿಯ ಸಂವಿಧಾನ ಆರನೇ ಅನುಸೂಚಿ (ತಿದ್ದುಪಡಿ) ಅಧಿನಿಯಮದ (1988ರ 67) 2ನೇ ಪ್ರಕರಣದ ಮೂಲಕ ಈ ಮುಂದಿನಂತೆ ತಿದ್ದುಪಡಿ ಮಾಡಲಾಗಿದೆ:–
   (ಎ) ಪ್ರಾರಂಭದ ಪ್ಯಾರಾದಲ್ಲಿ "ರಾಜ್ಯ ವಿಧಾನಮಂಡಲವು" ಎಂಬ ಪದಗಳಿಗೆ ಬದಲಾಗಿ "ಅವನು" ಎಂಬ ಪದವನ್ನು ಪ್ರತ್ಯಾಯೋಜಿಸತಕ್ಕದ್ದು;
   (ಬಿ) ಪರಂತುಕವನ್ನು ಬಿಟ್ಟುಬಿಡತಕ್ಕದ್ದು."
4. 1969ನೇ ಇಸವಿಯ ಅಸ್ಸಾಂ ಪುನರ್ ರಚನೆ (ಮೇಘಾಲಯ) ಅಧಿನಿಯಮದ (1969ರ 55) 74ನೇ ಪ್ರಕರಣದ ಮತ್ತು ನಾಲ್ಕನೇ ಅನುಸೂಚಿಯ ಮೂಲಕ (2-4-1970 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.

(2) Any order made by the Governor under sub-paragraph (1) of this paragraph together with the reasons therefor shall be laid before the Legislature of the State as soon as possible and the order shall, unless revoked by the Legislature of the State, continue in force for a period of twelve months from the date on which it was so made:

Provided that if and so often as a resolution approving the continuance in force of such order is passed by the Legislature of the State, the order shall unless cancelled by the Governor continue in force for a further period of twelve months from the date on which under this paragraph it would otherwise have ceased to operate.

[1]**16. Dissolution of a District or a Regional Council.**— [2][(1)] The Governor may on the recommendation of a Commission appointed under paragraph 14 of this Schedule by public notification order the dissolution of a District or a Regional Council, and—

(*a*) direct that a fresh general election shall be held immediately for the reconstitution of the Council, or

(*b*) subject to the previous approval of the Legislature of the State assume the administration of the area under the authority of such Council himself or place the administration of such area under the Commission appointed under the said paragraph or any other body considered suitable by him for a period not exceeding twelve months:

Provided that when an order under clause (*a*) of this paragraph has been made, the Governor may take the action referred to in clause (*b*) of this paragraph with regard to the administration of the area in question pending the reconstitution of the Council on fresh general election:

Provided further that no action shall be taken under clause (*b*) of this paragraph without giving the District or the Regional Council, as the case may be, an opportunity of placing its views before the Legislature of the State.

[3][(2) If at any time the Governor is satisfied that a situation has arisen in which the administration of an autonomous district or region cannot be carried on in accordance with the provisions of this Schedule, he may, by public notification, assume to himself all or any of the functions or powers vested in or exercisable by the District Council or, as the case may be, the Regional Council and declare that such functions or powers shall be exercisable by such person or authority as he may specify in this behalf, for a period not exceeding six months:

---

1. Paragraph 16 has been amended in its application to the States of Tripura and Mizoram by the Sixth Sechedule to the Constitution (Amendment) Act, 1988 (67 of 1988), s. 2, as under,—

   '(*a*) in sub-paragraph (1), the words "subject to the previous approval of the Legislature of the State" occurring in clause (b), and the second proviso shall be omitted;

   (*b*) for sub-paragraph (3), the following sub-paragraph shall be substituted, namely:—

   "(3) Every order made under sub-paragraph (1) or sub-paragraph (2) of this paragraph, along with the reasons therefor shall be laid before the Legislature of the State." '.

2. Paragraph 16 renumbered as sub-paragraph (1) thereof by the Assam Reorganisation (Meghalaya) Act, 1969 (55 of 1969), s. 74 and Fourth Sch. (w.e.f. 2-4-1970).

3. Ins. by the Assam Reorganisation (Meghalaya) Act, 1969 (55 of 1969), s. 74 and Fourth Sch. (w.e.f. 2-4-1970).

(2) ಈ ಪ್ಯಾರಾದ (1)ನೆಯ ಉಪ-ಪ್ಯಾರಾದ ಮೇರೆಗೆ ರಾಜ್ಯಪಾಲನು ಮಾಡಿದ ಯಾವುದೇ ಆದೇಶವನ್ನು, ಅದರ ಕಾರಣಗಳೊಂದಿಗೆ ರಾಜ್ಯದ ವಿಧಾನಮಂಡಲದ ಮುಂದೆ ಸಾಧ್ಯವಾದಷ್ಟು ಬೇಗನೆ ಇಡತಕ್ಕದ್ದು ಮತ್ತು ರಾಜ್ಯದ ವಿಧಾನಮಂಡಲವು ಆ ಆದೇಶವನ್ನು ರದ್ದುಗೊಳಿಸಿದ ಹೊರತು ಅದನ್ನು ಹಾಗೆ ಮಾಡಿದ ದಿನಾಂಕದಿಂದ ಹನ್ನೆರಡು ತಿಂಗಳುಗಳ ಅವಧಿಯವರೆಗೆ ಅದು ಜಾರಿಯಲ್ಲಿರತಕ್ಕದ್ದು:

ಪರಂತು, ಅಂಥ ಆದೇಶದ ಜಾರಿಯ ಮುಂದುವರಿಕೆಯನ್ನು ಅನುಮೋದಿಸುವ ನಿರ್ಣಯವನ್ನು ಆ ರಾಜ್ಯದ ವಿಧಾನಮಂಡಲವು ಅಂಗೀಕರಿಸಿದರೆ ಮತ್ತು ಹಾಗೆ ಅಂಗೀಕರಿಸಿದಾಗಲೆಲ್ಲ ಆ ಆದೇಶವನ್ನು ರಾಜ್ಯಪಾಲನು ರದ್ದುಪಡಿಸಿದ ಹೊರತು, ಅದು ಈ ಪ್ಯಾರಾದ ಮೇರೆಗೆ ಯಾವ ದಿನಾಂಕದಿಂದ ಜಾರಿಯಲ್ಲಿರುವುದು ಅನ್ಯಥಾ ನಿಂತುಹೋಗಬಹುದಾಗಿತ್ತೋ ಆ ದಿನಾಂಕದಿಂದ ಮತ್ತೆ ಹನ್ನೆರಡು ತಿಂಗಳುಗಳ ಅವಧಿಯವರೆಗೆ ಜಾರಿಯಲ್ಲಿರುವುದು ಮುಂದುವರೆಯತಕ್ಕದ್ದು.

[1]**16. ಜಿಲ್ಲಾ ಅಥವಾ ಪ್ರಾದೇಶಿಕ ಪರಿಷತ್ತಿನ ವಿಸರ್ಜನೆ:-** [2][(1)] ಈ ಅನುಸೂಚಿಯ 14ನೆಯ ಪ್ಯಾರಾದ ಮೇರೆಗೆ ನೇಮಿಸಲಾದ ಆಯೋಗದ ಶಿಫಾರಸಿನ ಮೇಲೆ ರಾಜ್ಯಪಾಲನು ಸಾರ್ವಜನಿಕ ಅಧಿಸೂಚನೆಯ ಮೂಲಕ ಒಂದು ಜಿಲ್ಲಾ ಅಥವಾ ಪ್ರಾದೇಶಿಕ ಪರಿಷತ್ತನ್ನು ವಿಸರ್ಜಿಸುವ ಆದೇಶವನ್ನು ಮಾಡಬಹುದು, ಮತ್ತು ಅವನು-

(ಎ) ಆ ಪರಿಷತ್ತಿನ ಪುನರ್ ರಚನೆಗಾಗಿ ಕೂಡಲೇ ಹೊಸದಾಗಿ ಸಾರ್ವತ್ರಿಕ ಚುನಾವಣೆ ನಡೆಯತಕ್ಕದ್ದೆಂದು ನಿರ್ದೇಶಿಸಬಹುದು, ಅಥವಾ

(ಬಿ) ರಾಜ್ಯದ ವಿಧಾನಮಂಡಲದ ಪೂರ್ವ ಅನುಮೋದನೆಗೆ ಒಳಪಟ್ಟು, ಅಂಥ ಪರಿಷತ್ತಿನ ಪ್ರಾಧಿಕಾರಕ್ಕೆ ಅಧೀನದಲ್ಲಿರುವ ಪ್ರದೇಶದ ಆಡಳಿತವನ್ನು ತಾನೇ ವಹಿಸಿಕೊಳ್ಳಬಹುದು ಅಥವಾ ಅಂತಹ ಪ್ರದೇಶದ ಆಡಳಿತವನ್ನು ಸದರಿ ಪ್ಯಾರಾದ ಮೇರೆಗೆ ನೇಮಿಸಲಾದ ಆಯೋಗಕ್ಕೆ ಅಥವಾ ತಾನು ಸೂಕ್ತವೆಂದು ಪರಿಗಣಿಸುವ ಇತರ ಯಾವುದೇ ನಿಕಾಯಕ್ಕೆ ಹನ್ನೆರಡು ತಿಂಗಳಿಗೆ ಮೀರದ ಅವಧಿಯವರೆಗೆ ವಹಿಸಿಕೊಡಬಹುದು:

ಪರಂತು, ಈ ಪ್ಯಾರಾದ (ಎ) ಖಂಡದ ಮೇರೆಗೆ ಒಂದು ಆದೇಶವನ್ನು ಮಾಡಿರುವಾಗ, ಹೊಸದಾಗಿ ಸಾರ್ವತ್ರಿಕ ಚುನಾವಣೆ ನಡೆದು ಪರಿಷತ್ತಿನ ಪುನರ್ ರಚನೆಯಾಗುವವರೆಗೆ ರಾಜ್ಯಪಾಲನು ಸಂಬಂಧಪಟ್ಟ ಪ್ರದೇಶದ ಆಡಳಿತಕ್ಕೆ ಸಂಬಂಧಿಸಿದಂತೆ ಈ ಪ್ಯಾರಾದ (ಬಿ) ಖಂಡದಲ್ಲಿ ಉಲ್ಲೇಖಿಸಿರುವ ಕ್ರಮವನ್ನು ಕೈಗೊಳ್ಳಬಹುದು:

ಮತ್ತೂ ಪರಂತು, ಜಿಲ್ಲಾ ಅಥವಾ ಸಂದರ್ಭಾನುಸಾರ ಪ್ರಾದೇಶಿಕ ಪರಿಷತ್ತಿನ ಅಭಿಪ್ರಾಯಗಳನ್ನು ರಾಜ್ಯ ವಿಧಾನಮಂಡಲದ ಮುಂದೆ ಇಡಲು ಅದಕ್ಕೆ ಅವಕಾಶ ಕೊಟ್ಟ ಹೊರತು, ಈ ಪ್ಯಾರಾದ (ಬಿ) ಖಂಡದ ಮೇರೆಗೆ ಯಾವುದೇ ಕ್ರಮವನ್ನು ಕೈಗೊಳ್ಳತಕ್ಕದ್ದಲ್ಲ.

[3][(2) ಒಂದು ಸ್ವಾಯತ್ತ ಜಿಲ್ಲೆಯ ಅಥವಾ ಕ್ಷೇತ್ರದ ಆಡಳಿತವನ್ನು ಈ ಅನುಸೂಚಿಯ ಉಪಬಂಧಗಳಿಗೆ ಅನುಸಾರವಾಗಿ ನಡೆಸಲು ಸಾಧ್ಯವಿಲ್ಲದಂಥ ಸನ್ನಿವೇಶವು ಉದ್ಭವಿಸಿದೆ ಎಂದು ರಾಜ್ಯಪಾಲನಿಗೆ ಯಾವುದೇ ಕಾಲದಲ್ಲಿ ಮನದಟ್ಟಾದರೆ, ಅವನು ಸಾರ್ವಜನಿಕ ಅಧಿಸೂಚನೆಯ ಮೂಲಕ, ಜಿಲ್ಲಾ ಪರಿಷತ್ತಿನಲ್ಲಿ ಅಥವಾ ಸಂದರ್ಭಾನುಸಾರ ಪ್ರಾದೇಶಿಕ ಪರಿಷತ್ತಿನಲ್ಲಿ ನಿಹಿತವಾಗಿರುವ ಅಥವಾ ಅದು ಚಲಾಯಿಸಬಹುದಾದ ಎಲ್ಲ ಪ್ರಕಾರ್ಯಗಳನ್ನು ಅಥವಾ ಯಾವುವೇ ಪ್ರಕಾರ್ಯವನ್ನು ಅಥವಾ ಅಧಿಕಾರಗಳನ್ನು ತಾನೇ ವಹಿಸಿಕೊಳ್ಳಬಹುದು ಮತ್ತು ಅವನು ಈ ಬಗ್ಗೆ ನಿರ್ದಿಷ್ಟಪಡಿಸಬಹುದಾದಂಥ ವ್ಯಕ್ತಿಯು ಅಥವಾ ಪ್ರಾಧಿಕಾರವು ಅಂಥ ಪ್ರಕಾರ್ಯಗಳನ್ನು ಅಥವಾ ಅಧಿಕಾರಗಳನ್ನು ಆರು ತಿಂಗಳುಗಳಿಗೆ ಮೀರದ ಅವಧಿಯವರೆಗೆ ಚಲಾಯಿಸತಕ್ಕದ್ದೆಂದು ಘೋಷಿಸಬಹುದು:

---

1. ತ್ರಿಪುರ ಮತ್ತು ಮಿಜೋರಾಂ ರಾಜ್ಯಗಳಿಗೆ ಅನ್ವಯಿಸುವುದಕ್ಕಾಗಿ 16ನೇ ಪ್ಯಾರಾವನ್ನು 1988ನೇ ಇಸವಿಯ ಸಂವಿಧಾನ ಆರನೇ ಅನುಸೂಚಿ (ತಿದ್ದುಪಡಿ) ಅಧಿನಿಯಮದ (1988ರ 67)2ನೇ ಪ್ರಕರಣದ ಮೂಲಕ ಈ ಮುಂದಿನಂತೆ ತಿದ್ದುಪಡಿ ಮಾಡಲಾಗಿದೆ,-

   '(ಎ) (1)ನೇ ಉಪ ಪ್ಯಾರಾದಲ್ಲಿ (ಬಿ) ಖಂಡದಲ್ಲಿ ಇರುವ "ರಾಜ್ಯದ ವಿಧಾನಮಂಡಲದ ಪೂರ್ವ ಅನುಮೋದನೆಗೆ ಒಳಪಟ್ಟು" ಎಂಬ ಪದಗಳನ್ನು ಮತ್ತು ಎರಡನೇ ಪರಂತುಕವನ್ನು ಬಿಟ್ಟುಬಿಡತಕ್ಕದ್ದು;

   (ಬಿ) (3)ನೇ ಉಪ ಪ್ಯಾರಾದ ಬದಲಾಗಿ ಈ ಮುಂದಿನ ಉಪ ಪ್ಯಾರಾವನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

   "(3) ಈ ಪ್ಯಾರಾದ (1)ನೇ ಉಪ ಪ್ಯಾರಾದ ಮೇರೆಗೆ ಅಥವಾ (2)ನೇ ಉಪ ಪ್ಯಾರಾದ ಮೇರೆಗೆ ಮಾಡಿದ ಪ್ರತಿಯೊಂದು ಆದೇಶವನ್ನು, ಅದರ ಕಾರಣಗಳೊಂದಿಗೆ ರಾಜ್ಯದ ವಿಧಾನಮಂಡಲದ ಮುಂದೆ ಇಡತಕ್ಕದ್ದು".'

2. 1969ನೇ ಇಸವಿಯ ಅಸ್ಸಾಂ ಪುನರ್ ರಚನೆ (ಮೇಘಾಲಯ) ಅಧಿನಿಯಮದ (1969ರ 55) 74ನೇ ಪ್ರಕರಣದ ಮತ್ತು ನಾಲ್ಕನೇ ಅನುಸೂಚಿಯ ಮೂಲಕ (2-4-1970 ರಿಂದ ಜಾರಿಗೆ ಬರುವಂತೆ) 16ನೇ ಪ್ಯಾರಾ ಅದರ (1)ನೇ ಉಪ ಪ್ಯಾರಾವೆಂದು ಪುನರ್ ಸಂಖ್ಯೆ ನೀಡಲಾಗಿದೆ.

3. 1969ನೇ ಇಸವಿಯ ಅಸ್ಸಾಂ ಪುನರ್ ರಚನೆ (ಮೇಘಾಲಯ) ಅಧಿನಿಯಮದ (1969ರ 55) 74ನೇ ಪ್ರಕರಣದ ಮತ್ತು ನಾಲ್ಕನೇ ಅನುಸೂಚಿಯ ಮೂಲಕ (2-4-1970 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.

Provided that the Governor may by a further order or orders extend the operation of the initial order by a period not exceeding six months on each occasion.

(3) Every order made under sub-paragraph (2) of this paragraph with the reasons therefor shall be laid before the Legislature of the State and shall cease to operate at the expiration of thirty days from the date on which the State Legislature first sits after the issue of the order, unless, before the expiry of that period it has been approved by the State Legislature.]

[1][**17. Exclusion of areas from autonomous districts in forming constituencies in such districts.**— For the purposes of elections to [2][the Legislative Assembly of Assam or Meghalaya] [3][or Tripura] [4][or Mizoram], the Governor may by order declare that any area within an autonomous district [5][in the State of Assam or Meghalaya [3][or Tripura] [4][or Mizoram], as the case may be,] shall not form part of any constituency to fill a seat or seats in the Assembly reserved for any such district but shall form part of a constituency to fill a seat or seats in the Assembly not so reserved to be specified in the order.

[6]* * * * *

[7][**19. Transitional provisions.**— (1) As soon as possible after the commencement of this Constitution the Governor shall take steps for the constitution of a District Council for each autonomous district in the State under this Schedule and, until a District Council is so constituted for an autonomous district, the administration of such district shall be vested in the Governor and the following provisions shall apply to the administration of the areas within such district instead of the foregoing provisions of this Schedule, namely:—

---

1. Paragraph 17 has been amended in its application to the State of Assam by the Sixth Schedule to the Constitution (Amendment) Act, 2003 (44 of 2003), s. 2, so as to insert the following proviso, namely:—

   "Provided that nothing in this paragraph shall apply to the Bodoland Territorial Areas District.".

2. Subs. by the North-Eastern Areas (Reorganisation) Act, 1971 (81 of 1971), s. 71 (i) and Eighth Sch., for "the Legislative Assembly of the Assam" (w.e.f. 21-1-1972).
3. Ins. by the Constitution (Forty-ninth Amendment) Act, 1984, s. 4 (w.e.f. 1-4-1985).
4. Ins. by the State of Mizoram Act, 1986 (34 of 1986), s. 39 (w.e.f. 20-2-1987).
5. Ins. by the North-Eastern Areas (Reorganisation) Act, 1971 (81 of 1971), s. 71 (i) and Eighth Sch. (w.e.f. 21-1-1972).
6. Paragraph 18 omitted by s. 71(*i*) and Eighth Sch., *ibid.* (w.e.f. 21-1-1972).
7. Paragraph 19 has been amended in its application to the State of Assam by the Sixth Schedule to the Constitution (Amendment) Act, 2003 (44 of 2003) s. 2, so as to insert the following sub-paragraph after sub-paragraph (3), namely :—

   "(4) As soon as possible after the commencement of this Act, and Interim Executive Council for Bodoland Territorial Areas District in Assam shall be formed by the Governor from amongst leaders of the Bodo movement, including the signatories to the Memorandum of Settlement, and shall provide adequate representation to the non-tribal communities in that area:

   Provided that Interim Council shall be for a period of six months during which endeavour to hold the election to the Council shall be made.

   ***Explanation.***— For the purposes of this sub-paragraph, the expression "Memorandum of Settlement" means the Memorandum signed on the 10th day of February, 2003 between Government of India, Government of Assam and Bodo Liberation Tigers.".

ಪರಂತು, ಈ ಮೊದಲಿನ ಆದೇಶವು ಜಾರಿಯಲ್ಲಿರುವುದನ್ನು ರಾಜ್ಯಪಾಲನು ಮತ್ತೊಂದು ಆದೇಶದ ಅಥವಾ ಆದೇಶಗಳ ಮೂಲಕ ಪ್ರತಿಸಲ ಆರು ತಿಂಗಳಿಗೆ ಮೀರದ ಅವಧಿಯವರೆಗೆ ವಿಸ್ತರಿಸಬಹುದು.

(3) ಈ ಪ್ಯಾರಾದ (2) ನೆಯ ಉಪಪ್ಯಾರಾದ ಮೇರೆಗೆ ಮಾಡಿದ ಪ್ರತಿಯೊಂದು ಆದೇಶವನ್ನು ಅದರ ಕಾರಣಗಳೊಂದಿಗೆ ರಾಜ್ಯದ ವಿಧಾನಮಂಡಲದ ಮುಂದೆ ಇಡತಕ್ಕದ್ದು ಮತ್ತು ಆ ಆದೇಶವನ್ನು ಹೊರಡಿಸಿದ ಬಳಿಕ ರಾಜ್ಯದ ವಿಧಾನಮಂಡಲವು ಮೊದಲು ಸಭೆ ಸೇರಿದ ದಿನಾಂಕದಿಂದ ಮೂವತ್ತು ದಿನಗಳ ಅವಧಿ ಮುಗಿಯುವುದಕ್ಕೆ ಮುಂಚೆ ಆ ರಾಜ್ಯ ವಿಧಾನಮಂಡಲವು ಆ ಆದೇಶವನ್ನು ಅನುಮೋದಿಸಿದ ಹೊರತು, ಸದರಿ ಮೂವತ್ತು ದಿನಗಳ ಅವಧಿ ಮುಗಿಯುತ್ತಲೇ ಅದು ಜಾರಿಯಲ್ಲಿರುವುದು ನಿಂತುಹೋಗತಕ್ಕದ್ದು.]

[1][**17. ಸ್ವಾಯತ್ತ ಜಿಲ್ಲೆಗಳಲ್ಲಿ ಚುನಾವಣಾ ಕ್ಷೇತ್ರಗಳನ್ನು ರಚಿಸುವಾಗ ಅಂಥ ಜಿಲ್ಲೆಗಳಿಂದ ಪ್ರದೇಶಗಳನ್ನು ಹೊರತುಪಡಿಸುವುದು:–** [2][ಅಸ್ಸಾಂ ಅಥವಾ ಮೇಘಾಲಯ] [3][ಅಥವಾ ತ್ರಿಪುರ] [4][ಅಥವಾ ಮಿಜೋರಾಂ] ವಿಧಾನಸಭೆಗೆ ಚುನಾವಣೆಗಳನ್ನು ನಡೆಸುವ ಉದ್ದೇಶಗಳಿಗಾಗಿ ರಾಜ್ಯಪಾಲನು ಆದೇಶದ ಮೂಲಕ [5][ಸಂದರ್ಭಾನುಸಾರ ಅಸ್ಸಾಮ್ ಅಥವಾ ಮೇಘಾಲಯ [3][ಅಥವಾ ತ್ರಿಪುರ] [4][ಅಥವಾ ಮಿಜೋರಾಂ] ರಾಜ್ಯದ ಒಂದು ಸ್ವಾಯತ್ತ ಜಿಲ್ಲೆಯೊಳಗಿನ ಯಾವುದೇ ಪ್ರದೇಶವು ಅಂಥ ಯಾವುದೇ ಜಿಲ್ಲೆಗಾಗಿ ಮೀಸಲಿರಿಸಿದ ಆ ಸಭೆಯಲ್ಲಿನ ಸ್ಥಾನವನ್ನು ಅಥವಾ ಸ್ಥಾನಗಳನ್ನು ಭರ್ತಿ ಮಾಡುವುದಕ್ಕಾಗಿ ಯಾವುದೇ ಚುನಾವಣಾ ಕ್ಷೇತ್ರದ ಭಾಗವಾಗಿರತಕ್ಕದ್ದಲ್ಲವೆಂದು, ಆದರೆ ಹಾಗೆ ಮೀಸಲಿರಿಸಿದ ಆ ಸಭೆಯಲ್ಲಿನ ಸ್ಥಾನವನ್ನು ಅಥವಾ ಸ್ಥಾನಗಳನ್ನು ಭರ್ತಿ ಮಾಡಲು ಆ ಆದೇಶದಲ್ಲಿ ನಿರ್ದಿಷ್ಟಪಡಿಸುವಂಥ ಚುನಾವಣಾ ಕ್ಷೇತ್ರದ ಭಾಗವಾಗಿರತಕ್ಕದ್ದೆಂದು ಘೋಷಿಸಬಹುದು.

[6]* * * * *

[7][**19. ಮಧ್ಯಕಾಲೀನ ಉಪಬಂಧಗಳು:–** (1) ಈ ಸಂವಿಧಾನದ ಪ್ರಾರಂಭದ ತರುವಾಯ ಸಾಧ್ಯವಾದಷ್ಟು ಬೇಗನೆ ರಾಜ್ಯಪಾಲನು ಈ ಅನುಸೂಚಿಯ ಮೇರೆಗೆ ರಾಜ್ಯದಲ್ಲಿನ ಪ್ರತಿಯೊಂದು ಸ್ವಾಯತ್ತ ಜಿಲ್ಲೆಗಾಗಿ ಒಂದು ಜಿಲ್ಲಾ ಪರಿಷತ್ತನ್ನು ರಚಿಸಲು ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು ಒಂದು ಸ್ವಾಯತ್ತ ಜಿಲ್ಲೆಗಾಗಿ ಜಿಲ್ಲಾ ಪರಿಷತ್ತನ್ನು ಹಾಗೆ ರಚಿಸುವವರೆಗೆ ಅಂಥ ಜಿಲ್ಲೆಯ ಆಡಳಿತವು ರಾಜ್ಯಪಾಲನಲ್ಲಿ ನಿಹಿತವಾಗಿರತಕ್ಕದ್ದು ಮತ್ತು ಅಂಥ ಜಿಲ್ಲೆಯೊಳಗಿನ ಕ್ಷೇತ್ರಗಳ ಆಡಳಿತಕ್ಕೆ ಈ ಅನುಸೂಚಿಯ ಹಿಂದೆ ಹೇಳಿದ ಉಪಬಂಧಗಳಿಗೆ ಬದಲಾಗಿ ಈ ಕೆಳಗಿನ ಉಪಬಂಧಗಳು ಅನ್ವಯವಾಗತಕ್ಕದ್ದು, ಎಂದರೆ:–

---

1. ಅಸ್ಸಾಂ ರಾಜ್ಯಕ್ಕೆ ಅನ್ವಯವಾಗುವುದಕ್ಕಾಗಿ 17ನೇ ಪ್ಯಾರಾವನ್ನು 2003ನೇ ಇಸವಿಯ ಸಂವಿಧಾನ ಆರನೇ ಅನುಸೂಚಿ (ತಿದ್ದುಪಡಿ) ಅಧಿನಿಯಮದ (2003ರ 44) 2ನೇ ಪ್ರಕರಣದ ಮೂಲಕ ಈ ಮುಂದಿನ ಪರಂತುಕವನ್ನು ಸೇರಿಸಲು ತಿದ್ದುಪಡಿ ಮಾಡಲಾಗಿದೆ, ಎಂದರೆ:–
"ಪರಂತು, ಈ ಪ್ಯಾರಾದಲ್ಲಿ ಇರುವುದು ಯಾವುದೂ, ಬೋಡೋಲ್ಯಾಂಡ್ ಪ್ರಾದೇಶಿಕ ಕ್ಷೇತ್ರಗಳ ಜಿಲ್ಲೆಗೆ ಅನ್ವಯವಾಗತಕ್ಕದ್ದಲ್ಲ."
2. 1971ನೆಯ ಇಸವಿಯ ಈಶಾನ್ಯ ಪ್ರದೇಶಗಳ (ಪುನರ್ ರಚನೆ) ಅಧಿನಿಯಮದ (1971 ರ 81) 71(i)ನೇ ಪ್ರಕರಣದ ಹಾಗೂ ಎಂಟನೇ ಅನುಸೂಚಿಯ ಮೂಲಕ "ಅಸ್ಸಾಂ ವಿಧಾನಸಭೆ" ಎಂಬುದಕ್ಕೆ ಬದಲಾಗಿ (21-1-1972ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.
3. 1984ನೇ ಇಸವಿಯ ಸಂವಿಧಾನ (ನಲವತ್ತೊಂಬತ್ತನೇ ತಿದ್ದುಪಡಿ) ಅಧಿನಿಯಮದ 4ನೇ ಪ್ರಕರಣದ ಮೂಲಕ (1.4.1985 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.
4. 1986ನೇ ಇಸವಿಯ ಮಿಜೋರಾಂ ರಾಜ್ಯ ಅಧಿನಿಯಮದ (1986ರ 34) 39ನೇ ಪ್ರಕರಣದ ಮೂಲಕ (20.2.1987 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.
5. 1971ನೇ ಇಸವಿಯ ಈಶಾನ್ಯ ಪ್ರದೇಶಗಳ (ಪುನರ್ ರಚನೆ) ಅಧಿನಿಯಮದ (1971ರ 81) 71(i)ನೇ ಪ್ರಕರಣದ ಹಾಗೂ ಎಂಟನೇ ಅನುಸೂಚಿಯ ಮೂಲಕ (21-1-1972 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.
6. ಅದೇ ಅಧಿನಿಯಮದ 71 (i)ನೇ ಪ್ರಕರಣದ ಹಾಗೂ ಎಂಟನೇ ಅನುಸೂಚಿಯ ಮೂಲಕ (21.1.1972 ರಿಂದ ಜಾರಿಗೆ ಬರುವಂತೆ) 18ನೇ ಪ್ಯಾರಾವನ್ನು ಬಿಟ್ಟುಬಿಡಲಾಗಿದೆ.
7. ಅಸ್ಸಾಂ ರಾಜ್ಯಕ್ಕೆ ಅನ್ವಯವಾಗುವುದಕ್ಕಾಗಿ 19ನೇ ಪ್ಯಾರಾವನ್ನು 2003ನೇ ಇಸವಿಯ ಸಂವಿಧಾನ ಆರನೇ ಅನುಸೂಚಿ (ತಿದ್ದುಪಡಿ) ಅಧಿನಿಯಮದ (2003ರ 44) 2ನೇ ಪ್ರಕರಣದ ಮೂಲಕ (3)ನೇ ಉಪ ಪ್ಯಾರಾದ ತರುವಾಯ ಈ ಮುಂದಿನ ಉಪ ಪ್ಯಾರಾವನ್ನು ಸೇರಿಸಲು ತಿದ್ದುಪಡಿ ಮಾಡಲಾಗಿದೆ, ಎಂದರೆ:–

"(4) ಈ ಅಧಿನಿಯಮದ ಪ್ರಾರಂಭದ ತರುವಾಯ ಸಾಧ್ಯವಾದಷ್ಟು ಬೇಗನೆ ರಾಜ್ಯಪಾಲನು, ಅಸ್ಸಾಂನಲ್ಲಿರುವ ಬೋಡೋಲ್ಯಾಂಡ್ ಪ್ರಾದೇಶಿಕ ಕ್ಷೇತ್ರಗಳ ಜಿಲ್ಲೆಗಾಗಿ ಮಧ್ಯಕಾಲೀನ ಕಾರ್ಯನಿರ್ವಾಹಕ ಪರಿಷತ್ತನ್ನು ಒಡಂಬಡಿಕೆ ಪತ್ರಕ್ಕೆ ಸಹಿ ಮಾಡಿದವರೂ ಸೇರಿದಂತೆ, ಬೋಡೋ ಚಳುವಳಿಯ ನಾಯಕರ ಪೈಕಿಯಿಂದ ರಚಿಸತಕ್ಕದ್ದು ಮತ್ತು ಆ ಪ್ರದೇಶದ ಬುಡಕಟ್ಟೇತರ ಸಮುದಾಯಗಳಿಗೆ ಸಾಕಷ್ಟು ಪ್ರಾತಿನಿಧ್ಯವನ್ನು ಕಲ್ಪಿಸತಕ್ಕದ್ದು:

ಪರಂತು, ಮಧ್ಯಕಾಲೀನ ಪರಿಷತ್ತು ಆರು ತಿಂಗಳ ಅವಧಿಗಾಗಿ ಇರತಕ್ಕದ್ದು. ಆ ಅವಧಿಯಲ್ಲಿ ಪರಿಷತ್ತಿಗೆ ಚುನಾವಣೆ ನಡೆಸಲು ಪ್ರಯತ್ನಿಸತಕ್ಕದ್ದು.

**ವಿವರಣೆ:–** ಈ ಉಪ ಪ್ಯಾರಾದ ಉದ್ದೇಶಗಳಿಗಾಗಿ "ಒಡಂಬಡಿಕೆ ಪತ್ರ" ಎಂದರೆ 2003ರ ಫೆಬ್ರವರಿ 10ರಂದು ಭಾರತ ಸರ್ಕಾರ, ಅಸ್ಸಾಂ ಸರ್ಕಾರ ಮತ್ತು ಬೋಡೋ ಲಿಬರೇಷನ್ ಟೈಗರ್ಸ್ ನಡುವೆ ಸಹಿಯಾದ ಒಡಂಬಡಿಕೆ ಪತ್ರ."

(*a*) no Act of Parliament or of the Legislature of the State shall apply to any such area unless the Governor by public notification so directs; and the Governor in giving such a direction with respect to any Act may direct that the Act shall, in its application to the area or to any specified part thereof, have effect subject to such exceptions or modifications as he thinks fit;

(*b*) the Governor may make regulations for the peace and good government of any such area and any regulations so made may repeal or amend any Act of Parliament or of the Legislature of the State or any existing law which is for the time being applicable to such area.

(2) Any direction given by the Governor under clause (*a*) of sub-paragraph (1) of this paragraph may be given so as to have retrospective effect.

(3) All regulations made under clause (*b*) of sub-paragraph (1) of this paragraph shall be submitted forthwith to the President and, until assented to by him, shall have no effect.

[1]**[20. Tribal areas.—** (1) The areas specified in Parts I, II [2][, IIA] and III of the table below shall respectively be the tribal areas within the State of Assam, the State of Meghalaya [2][, the State of Tripura] and the [3][State] of Mizoram.

(2) [4][Any reference in Part I, Part II or Part III of the table below] to any district shall be construed as a reference to the territories comprised within the autonomous district of that name existing immediately before the day appointed under clause (*b*) of section 2 of the North-Eastern Areas (Reorganisation) Act, 1971:

Provided that for the purposes of clauses (*e*) and (*f*) of sub-paragraph (1) of paragraph 3, paragraph 4, paragraph 5, paragraph 6, sub-paragraph (2), clauses (*a*), (*b*) and (*d*) of sub-paragraph (3) and sub-paragraph (4) of paragraph 8 and clause (*d*) of sub-paragraph (2) of paragraph 10 of this Schedule, no part of the area comprised within the municipality of Shillong shall be deemed to be within the [5][Khasi Hills District].

[2][(3) The reference in Part IIA in the table below to the "Tripura Tribal Areas District" shall be construed as a reference to the territory comprising the tribal areas specified in the First Schedule to the Tripura Tribal Areas Autonomous District Council Act, 1979.]

---

1. Subs. by the North-Eastern Areas (Reorganisation) Act, 1971 (81 of 1971), s. 71 (i) and Eighth Sch., for paragraphs 20 and 20A (w.e.f. 21-1-1972).
2. Ins. by the Constitution (Forty-ninth Amendment) Act, 1984, s. 4 (w.e.f. 1-4-1985).
3. Subs. by the State of Mizoram Act, 1986 (34 of 1986), s. 39, for "Union territory" (w.e.f. 20-2-1987).
4. Subs. by the Constitution (Forty-ninth Amendment) Act, 1984, s. 4, for "Any reference in the Table below" (w.e.f. 1-4-1985).
5. Subs. by the Government of Meghalaya Notification No. DCA 31/72/11 dated the 14th June, 1973, Gazette of Meghalaya, Pt. VA, dated 23-6-1973, p. 200.

(ಎ) ಸಂಸತ್ತಿನ ಅಥವಾ ರಾಜ್ಯದ ವಿಧಾನಮಂಡಲದ ಯಾವುದೇ ಅಧಿನಿಯಮವು ಯಾವುದೇ ಅಂಥ ಪ್ರದೇಶಕ್ಕೆ ಅನ್ವಯವಾಗತಕ್ಕದ್ದೆಂದು ರಾಜ್ಯಪಾಲನು ಸಾರ್ವಜನಿಕ ಅಧಿಸೂಚನೆಯ ಮೂಲಕ ನಿರ್ದೇಶಿಸಿದ ಹೊರತು ಅದು ಹಾಗೆ ಅನ್ವಯವಾಗತಕ್ಕದ್ದಲ್ಲ ಮತ್ತು ರಾಜ್ಯಪಾಲನು ಯಾವುದೇ ಅಧಿನಿಯಮದ ಬಗ್ಗೆ ಅಂಥ ನಿರ್ದೇಶನವನ್ನು ನೀಡುವಾಗ, ಆ ಅಧಿನಿಯಮವು ಆ ಪ್ರದೇಶಕ್ಕೆ ಅಥವಾ ಅದರ ಯಾವುದೇ ನಿರ್ದಿಷ್ಟ ಭಾಗಕ್ಕೆ ಅನ್ವಯವಾಗುವಲ್ಲಿ ತಾನು ಸೂಕ್ತವೆಂದು ಯೋಚಿಸುವಂಥ ವಿನಾಯಿತಿಗಳಿಗೆ ಅಥವಾ ಮಾರ್ಪಾಟುಗಳಿಗೆ ಒಳಪಟ್ಟು ಪರಿಣಾಮವುಳ್ಳದ್ದಾಗಿರತಕ್ಕದ್ದೆಂದು ನಿರ್ದೇಶಿಸಬಹುದು;

(ಬಿ) ರಾಜ್ಯಪಾಲನು ಅಂಥ ಯಾವುದೇ ಪ್ರದೇಶದ ಶಾಂತಿಯುತ ಮತ್ತು ಸುವ್ಯವಸ್ಥಿತ ಆಡಳಿತಕ್ಕಾಗಿ ವಿನಿಯಮಗಳನ್ನು ರಚಿಸಬಹುದು ಮತ್ತು ಹಾಗೆ ರಚಿಸಿದ ಯಾವುವೇ ವಿನಿಯಮಗಳು ಅಂಥ ಕ್ಷೇತ್ರಕ್ಕೆ ತತ್ಕಾಲದಲ್ಲಿ ಅನ್ವಯವಾಗುವ ಸಂಸತ್ತಿನ ಅಥವಾ ರಾಜ್ಯ ವಿಧಾನಮಂಡಲದ ಕಾನೂನನ್ನು ಅಥವಾ ಅಸ್ತಿತ್ವದಲ್ಲಿರುವ ಯಾವುದೇ ಕಾನೂನನ್ನು ನಿರಸನಗೊಳಿಸಬಹುದು ಅಥವಾ ತಿದ್ದುಪಡಿ ಮಾಡಬಹುದು.

(2) ಈ ಪ್ಯಾರಾದ (1)ನೆಯ ಉಪ-ಪ್ಯಾರಾದ (ಎ) ಖಂಡದ ಮೇರೆಗೆ ರಾಜ್ಯಪಾಲನು ನೀಡುವ ಯಾವುದೇ ನಿರ್ದೇಶನವನ್ನು ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ನೀಡಬಹುದು.

(3) ಈ ಪ್ಯಾರಾದ (1)ನೆಯ ಉಪ-ಪ್ಯಾರಾದ (ಬಿ) ಖಂಡದ ಮೇರೆಗೆ ರಚಿಸಲಾಗುವ ಎಲ್ಲ ವಿನಿಯಮಗಳನ್ನು ಕೂಡಲೇ ರಾಷ್ಟ್ರಪತಿಗೆ ಒಪ್ಪಿಸತಕ್ಕದ್ದು ಮತ್ತು ಅವನು ಅವುಗಳಿಗೆ ಅನುಮತಿ ನೀಡುವವರೆಗೆ ಅವು ಪರಿಣಾಮವುಳ್ಳವಾಗಿರತಕ್ಕದ್ದಲ್ಲ.

[1][**20. ಬುಡಕಟ್ಟು ಪ್ರದೇಶಗಳು:-** (1) ಕೆಳಗಿನ ಕೋಷ್ಟಕದ I, II [2][IIಎ] ಮತ್ತು IIIನೆಯ ಭಾಗಗಳಲ್ಲಿ ನಿರ್ದಿಷ್ಟಪಡಿಸಿರುವ ಪ್ರದೇಶಗಳು ಅನುಕ್ರಮವಾಗಿ ಅಸ್ಸಾಂ ರಾಜ್ಯದೊಳಗಿನ, ಮೇಘಾಲಯ ರಾಜ್ಯದೊಳಗಿನ, [2][ತ್ರಿಪುರ ರಾಜ್ಯದೊಳಗಿನ] ಮತ್ತು ಮಿಜೋರಾಂ [3][ರಾಜ್ಯ]ದೊಳಗಿನ ಬುಡಕಟ್ಟು ಪ್ರದೇಶಗಳಾಗಿರತಕ್ಕದ್ದು.

(2) [4][ಕೆಳಗಿನ ಕೋಷ್ಟಕದ I, II ಅಥವಾ IIIನೇ ಭಾಗಗಳಲ್ಲಿನ ಯಾವುದೇ ಜಿಲ್ಲೆಗೆ ಮಾಡಿದ ಯಾವುದೇ ಉಲ್ಲೇಖವು] 1971ನೆಯ ಇಸವಿಯ ಈಶಾನ್ಯ ಪ್ರದೇಶಗಳ (ಪುನರ್ ರಚನೆ) ಅಧಿನಿಯಮದ 2ನೆಯ ಪ್ರಕರಣದ (ಬಿ) ಖಂಡದ ಮೇರೆಗೆ ಗೊತ್ತುಪಡಿಸಿದ ದಿನಾಂಕಕ್ಕೆ ನಿಕಟಪೂರ್ವದಲ್ಲಿದ್ದ ಅದೇ ಹೆಸರಿನ ಸ್ವಾಯತ್ತ ಜಿಲ್ಲೆಯೊಳಗೆ ಸೇರಿರುವ ಕ್ಷೇತ್ರಗಳಿಗೆ ಮಾಡಿದ ಉಲ್ಲೇಖವೆಂದು ಅರ್ಥೈಸತಕ್ಕದ್ದು:

ಪರಂತು, ಈ ಅನುಸೂಚಿಯ 3ನೆಯ ಪ್ಯಾರಾದ (1)ನೆಯ ಉಪ-ಪ್ಯಾರಾದ (ಇ) ಮತ್ತು (ಎಫ್) ಖಂಡಗಳ, 4ನೆಯ ಪ್ಯಾರಾದ, 5ನೆಯ ಪ್ಯಾರಾದ, 6ನೆಯ ಪ್ಯಾರಾದ, 8ನೆಯ ಪ್ಯಾರಾದ (2)ನೆಯ ಉಪ-ಪ್ಯಾರಾದ, (3)ನೆಯ ಉಪ-ಪ್ಯಾರಾದ (ಎ), (ಬಿ) ಮತ್ತು (ಡಿ) ಖಂಡಗಳ ಮತ್ತು (4)ನೆಯ ಉಪ-ಪ್ಯಾರಾದ ಹಾಗೂ 10ನೆಯ ಪ್ಯಾರಾದ (2)ನೆಯ ಉಪ-ಪ್ಯಾರಾದ (ಡಿ) ಖಂಡದ ಉದ್ದೇಶಗಳಿಗಾಗಿ ಷಿಲಾಂಗಿನ ಮುನಿಸಿಪಾಲಿಟಿಯಲ್ಲಿ ಸೇರಿರುವ ಪ್ರದೇಶದ ಯಾವುದೇ ಭಾಗವು [5][ಖಾಸೀ ಗುಡ್ಡಗಾಡು ಜಿಲ್ಲೆ]ಯ ಒಳಗಿರುವುದಾಗಿ ಭಾವಿಸತಕ್ಕದ್ದಲ್ಲ.]

[2][(3) ಈ ಕೆಳಗಿನ ಕೋಷ್ಟಕದಲ್ಲಿನ IIಎ ಭಾಗದಲ್ಲಿ "ತ್ರಿಪುರ ಬುಡಕಟ್ಟು ಪ್ರದೇಶಗಳ ಜಿಲ್ಲೆ"ಗೆ ಮಾಡಿದ ಉಲ್ಲೇಖವನ್ನು, ತ್ರಿಪುರ ಬುಡಕಟ್ಟು ಪ್ರದೇಶಗಳ ಸ್ವಾಯತ್ತ ಜಿಲ್ಲಾ ಪರಿಷತ್ತು ಅಧಿನಿಯಮ, 1979ರ ಮೊದಲನೇ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಬುಡಕಟ್ಟು ಪ್ರದೇಶಗಳನ್ನು ಒಳಗೊಂಡ ಕ್ಷೇತ್ರಕ್ಕೆ ಮಾಡಿದ ಉಲ್ಲೇಖವೆಂದು ಅರ್ಥೈಸತಕ್ಕದ್ದು.

---

1. 1971ನೆಯ ಇಸವಿಯ ಈಶಾನ್ಯ ಪ್ರದೇಶಗಳ (ಪುನರ್ ರಚನೆ) ಅಧಿನಿಯಮದ (1971ರ 81) 71(i) ನೆಯ ಪ್ರಕರಣದ ಹಾಗೂ ಎಂಟನೆಯ ಅನುಸೂಚಿಯ ಮೂಲಕ (21-1-1972ರಿಂದ ಜಾರಿಗೆ ಬರುವಂತೆ) 20ನೆಯ ಮತ್ತು 20ಎ ಪ್ಯಾರಾಗಳಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
2. 1984ನೆಯ ಇಸವಿಯ ಸಂವಿಧಾನ (ನಲವತ್ತೊಂಬತ್ತನೇ ತಿದ್ದುಪಡಿ) ಅಧಿನಿಯಮದ 4ನೇ ಪ್ರಕರಣದ ಮೂಲಕ (1.4.1985 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.
3. 1986ರ ಮಿಜೋರಾಂ ರಾಜ್ಯ ಅಧಿನಿಯಮದ (1986ರ 34) 39ನೇ ಪ್ರಕರಣದ ಮೂಲಕ "ಒಕ್ಕೂಟರಾಜ್ಯ ಕ್ಷೇತ್ರ" ಎಂಬುದಕ್ಕೆ ಬದಲಾಗಿ (20.2.1987 ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.
4. 1984ನೇ ಇಸವಿಯ ಸಂವಿಧಾನ (ನಲವತ್ತೊಂಬತ್ತನೆಯ ತಿದ್ದುಪಡಿ) ಅಧಿನಿಯಮದ 4ನೇ ಪ್ರಕರಣದ ಮೂಲಕ "ಕೆಳಗಿನ ಕೋಷ್ಟಕದಲ್ಲಿನ ಯಾವುದೇ ಉಲ್ಲೇಖ" ಎಂಬುದಕ್ಕೆ ಬದಲಾಗಿ (1.4.1985 ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.
5. ಮೇಘಾಲಯ ಸರ್ಕಾರದ ಅಧಿಸೂಚನೆ ಸಂಖ್ಯೆ. ಡಿ.ಸಿ.ಎ. 31/72/11 ದಿನಾಂಕ 14ನೇ ಜೂನ್ 1973ರ ಮೂಲಕ ಪ್ರತ್ಯಾಯೋಜಿಸಲಾಗಿದೆ. (ಮೇಘಾಲಯ ರಾಜಪತ್ರ ಭಾಗ Vಎ ದಿನಾಂಕ: 23-6-1973, ಪುಟ 200).

**TABLE**

**PART I**

1. The North Cachar Hills District.

2. [1][The Karbi Anglong District.]

3. [2][The Bodoland Territorial Areas District.]

**PART II**

[3][1. Khasi Hills District.

2. Jaintia Hills District.]

3. The Garo Hills District.

**[4][PART IIA**

Tripura Tribal Areas District.]

**PART III**

[5] * * * *

[6][1. The Chakma District.

[7][2. The Mara District.

3. The Lai District.]]

**[8][20A. Dissolution of the Mizo District Council.—** (1) Notwithstanding anything in this Schedule, the District Council of the Mizo District existing immediately before the prescribed date (hereinafter referred to as the Mizo District Council) shall stand dissolved and cease to exist.

---

1. Subs. by the Government of Assam Notification No. TAD/R/115/74/47, dated 14-10-1976 for "The Mikir Hills District".
2. Ins. by the State of Assam by the Sixth Schedule to the Constitution (Amendment) Act, 2003 (44 of 2003), s. 2.
3. Subs. by the Government of Meghalaya Notification No. DCA 31/72/11 dated the 14th June, 1973, Gazette of Meghalaya, Pt. VA, dated 23-6-1973, p. 200.
4. Ins. by the Constitution (Forty-ninth Amendment) Act, 1984, s. 4 (w.e.f. 1-4-1985).
5. The words "The Mizo District." omitted by the Government of Union Territories (Amendment) Act, 1971 (83 of 1971), s. 13 (w.e.f. 29-4-1972).
6. Ins. by the Mizoram District Councils (Miscellaneous Provisions) Order, 1972, published in the Mizoram Gazette, 1972, dated the 5th May, 1972, Vol. I, Pt. II, p. 17 (w.e.f 29-4-1972).
7. Subs. by the Sixth Schedule to the Constitution (Amendment) Act, 1988 (67 of 1988), s. 2, for serial numbers 2 and 3 and the entries relating thereto.
8. Subs. by the Government of Union Territories (Amendment) Act, 1971 (83 of 1971), s. 13, for paragraph 20A (w.e.f. 29-4-1972).

**ಕೋಷ್ಟಕ**

**ಭಾಗ I**

1. ಉತ್ತರ ಕಚಾರ್ ಗುಡ್ಡಗಾಡು ಜಿಲ್ಲೆ.

2. [1][ಕಾರ್ಬಿ ಆಂಗ್ಲಾಂಗ್ ಜಿಲ್ಲೆ.]

3. [2][ಬೋಡೋಲ್ಯಾಂಡ್ ಪ್ರಾದೇಶಿಕ ಕ್ಷೇತ್ರಗಳ ಜಿಲ್ಲೆ]

**ಭಾಗ II**

[3][1. ಖಾಸೀ ಗುಡ್ಡಗಾಡು ಜಿಲ್ಲೆ.

2. ಜಯಂತಿಯಾ ಗುಡ್ಡಗಾಡು ಜಿಲ್ಲೆ.]

3. ಗಾರೋ ಗುಡ್ಡಗಾಡು ಜಿಲ್ಲೆ.

[4][**ಭಾಗ IIಎ**

ತ್ರಿಪುರ ಬುಡಕಟ್ಟು ಪ್ರದೇಶಗಳ ಜಿಲ್ಲೆ.]

**ಭಾಗ III**

[5] * * * *

[6][1. ಚಕ್ಮ ಜಿಲ್ಲೆ

[7][2. ಮಾರಾ ಜಿಲ್ಲೆ

3. ಲಯೀ ಜಿಲ್ಲೆ.]

[8][**20ಎ. ಮಿಜೋ ಜಿಲ್ಲಾ ಪರಿಷತ್ತಿನ ವಿಸರ್ಜನೆ:-** (1) ಈ ಅನುಸೂಚಿಯಲ್ಲಿ ಏನೇ ಇದ್ದಾಗ್ಯೂ, ಗೊತ್ತುಪಡಿಸಿದ ದಿನಾಂಕಕ್ಕೆ ನಿಕಟಪೂರ್ವದಲ್ಲಿ ಅಸ್ತಿತ್ವದಲ್ಲಿದ್ದ ಮಿಜೋ ಜಿಲ್ಲೆಯ ಜಿಲ್ಲಾ ಪರಿಷತ್ತು (ಇಲ್ಲಿ ಇನ್ನು ಮುಂದೆ ಇದನ್ನು ಮಿಜೋ ಜಿಲ್ಲಾ ಪರಿಷತ್ತು ಎಂದು ಉಲ್ಲೇಖಿಸಲಾಗಿದೆ) ವಿಸರ್ಜನೆಯಾಗತಕ್ಕದ್ದು ಮತ್ತು ಅದು ಅಸ್ತಿತ್ವದಲ್ಲಿರುವುದು ನಿಂತುಹೋಗತಕ್ಕದ್ದು.

---

1. ಅಸ್ಸಾಂ ಸರ್ಕಾರದ ಅಧಿಸೂಚನೆ ಸಂಖ್ಯೆ. ಟಿಎಡಿಆರ್. 115/74/47, ದಿನಾಂಕ 14-10-76ರ ಮೂಲಕ "ಮಿಕೀರ್ ಗುಡ್ಡಗಾಡು ಜಿಲ್ಲೆ" ಎಂಬುದಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
2. 2003ನೇ ಇಸವಿಯ ಸಂವಿಧಾನ ಆರನೇ ಅನುಸೂಚಿ (ತಿದ್ದುಪಡಿ) ಅಧಿನಿಯಮದ (2003ರ 44) 2ನೇ ಪ್ರಕರಣದ ಮೂಲಕ ಸೇರಿಸಲಾಗಿದೆ.
3. ಮೇಘಾಲಯ ಸರ್ಕಾರದ ಅಧಿಸೂಚನೆ ಸಂಖ್ಯೆ. ಡಿ.ಸಿ.ಎ. 31:72:11 ದಿನಾಂಕ 14ನೇ ಜೂನ್ 1973ರ ಮೂಲಕ ಪ್ರತ್ಯಾಯೋಜಿಸಲಾಗಿದೆ. (ಮೇಘಾಲಯ ರಾಜಪತ್ರ ಭಾಗ Vಎ, ದಿನಾಂಕ 23-6-1973 ಪುಟ 200)
4. 1984ನೇ ಇಸವಿಯ ಸಂವಿಧಾನ (ನಲವತ್ತೊಂಬತ್ತನೇ ತಿದ್ದುಪಡಿ) ಅಧಿನಿಯಮದ 4ನೇ ಪ್ರಕರಣದ ಮೂಲಕ (1.4.1985 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.
5. 1971ನೆಯ ಇಸವಿಯ ಒಕ್ಕೂಟ ರಾಜ್ಯಕ್ಷೇತ್ರಗಳ ಸರ್ಕಾರ (ತಿದ್ದುಪಡಿ) ಅಧಿನಿಯಮದ (1971ರ 83) 13ನೆಯ ಪ್ರಕರಣದ ಮೂಲಕ (29-4-1972ರಿಂದ ಜಾರಿಗೆ ಬರುವಂತೆ) "ಮಿಜೋ ಜಿಲ್ಲೆ" ಎಂಬ ಪದಗಳನ್ನು ಬಿಟ್ಟುಬಿಡಲಾಗಿದೆ.
6. 1972ನೇ ಇಸವಿಯ ಮೇ ತಿಂಗಳ 5ನೇ ದಿನಾಂಕದ ಮಿಜೋರಾಂ ರಾಜಪತ್ರದಲ್ಲಿ ಸಂಪುಟ I, ಭಾಗ II ಪುಟ 17ರಲ್ಲಿ ಪ್ರಕಟಿಸಿದ ಮಿಜೋರಾಂ ಜಿಲ್ಲಾ ಪರಿಷತ್ತುಗಳು (ಸಂಕೀರ್ಣ ಉಪಬಂಧಗಳ) ಆದೇಶ 1972ರ ಮೂಲಕ (29-4-1972ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.
7. 1988ನೇ ಇಸವಿಯ ಸಂವಿಧಾನ (ತಿದ್ದುಪಡಿ) ಅಧಿನಿಯಮದ (1988ರ 67) 2ನೇ ಪ್ರಕರಣದ ಮೂಲಕ ಕ್ರಮಸಂಖ್ಯೆ 2 ಮತ್ತು 3 ಹಾಗೂ ಅವುಗಳಿಗೆ ಸಂಬಂಧಿಸಿದ ನಮೂದುಗಳಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
8. 1971ನೆಯ ಇಸವಿಯ ಒಕ್ಕೂಟ ರಾಜ್ಯಕ್ಷೇತ್ರಗಳ ಸರ್ಕಾರ (ತಿದ್ದುಪಡಿ) ಅಧಿನಿಯಮದ (1971ರ 83) 13ನೆಯ ಪ್ರಕರಣದ ಮೂಲಕ 20ಎ ಪ್ಯಾರಾಗೆ ಬದಲಾಗಿ (29-4-1972ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.

(2) The Administrator of the Union territory of Mizoram may, by one or more orders, provide for all or any of the following matters, namely:—

(*a*) the transfer, in whole or in part, of the assets, rights and liabilities of the Mizo District Council (including the rights and liabilities under any contract made by it) to the Union or to any other authority;

(*b*) the substitution of the Union or any other authority for the Mizo District Council, or the addition of the Union or any other authority, as a party to any legal proceedings to which the Mizo District Council is a party;

(*c*) the transfer or re-employment of any employees of the Mizo District Council to or by the Union or any other authority, the terms and conditions of service applicable to such employees after such transfer or re-employment;

(*d*) the continuance of any laws, made by the Mizo District Council and in force immediately before its dissolution, subject to such adaptations and modifications, whether by way of repeal or amendment, as the Administrator may make in this behalf, until such laws are altered, repealed or amended by a competent Legislature or other competent authority;

(*e*) such incidental, consequential and supplementary matters as the Administrator considers necessary.

***Explanation.—*** In this paragraph and in paragraph 20B of this Schedule, the expression "prescribed date" means the date on which the Legislative Assembly of the Union territory of Mizoram is duly constituted under and in accordance with the provisions of the Government of Union Territories Act, 1963.

[1][**20B. Autonomous regions in the Union territory of Mizoram to be autonomous districts and transitory provisions consequent thereto**.— (1) Notwithstanding anything in this Schedule,—

---

1. After paragraph 20B, the following paragraph has been inserted in its application to the State of Assam by the Sixth Schedule to the Constitution (Amendment) Act, 1995 (42 of 1995), s. 2, namely:—

**"20BA. Exercise of discretionary powers by the Governor in the discharge of his functions.—** The Governor in the discharge of his functions under sub-paragraphs (2) and (3) of paragraph 1, subparagraphs (1), (6), sub-paragraph (6A) excluding the first proviso and sub-paragraph (7) of paragraph 2, sub-paragraph (3) of paragraph 3, sub-paragraph (4) of paragraph 4, paragraph 5, sub-paragraph (1) of paragraph 6, sub-paragraph (2) of paragraph 7, sub-paragraph (4) of paragraph 8, sub-paragraph (3) of paragraph 9, sub-paragraph (3) of paragraph 10, sub-paragraph (1) of paragraph 14, subparagraph (1) of paragraph 15 and sub-paragraphs (1) and (2) of paragraph 16 of this Schedule, shall, after consulting the Council of Ministers and the North Cachar Hills Autonomous Council or the Karbi Anglong Autonomous Council, as the case may be, take such action as he considers necessary in his discretion."

After paragraph 20B, the following paragraph has been inserted in its application to the States of Tripura and Mizoram, by the Sixth Schedule to the Constitution (Amendment) Act, 1988 (67 of 1988), s. 2, namely:—

**"20BB. Exercise of discretionary powers by the Governor in the discharge of his functions.—** The Governor, in the discharge of his functions under sub-paragraphs (2) and (3) of paragraph 1, subparagraphs (1) and (7) of paragraph 2, sub-paragraph (3) of paragraph 3, sub-paragraph (4) of paragraph 4, paragraph 5, sub-paragraph (1) of paragraph 6, sub-paragraph (2) of paragraph 7, subparagraph (3) of paragraph 9, sub-paragraph (1) of paragraph 14, sub-paragraph (1) of paragraph 15 and sub-paragraphs (1) and (2) of paragraph 16 of this Schedule, shall, after consulting the Council of Ministers, and if he thinks it necessary, the District Council or the Regional Council concerned, take such action as he considers necessary in his discretion." .

(2) ಮಿಜೋರಾಂ ಒಕ್ಕೂಟ ರಾಜ್ಯಕ್ಷೇತ್ರದ ಆಡಳಿತಗಾರನು ಈ ಕೆಳಕಂಡ ಎಲ್ಲ ವಿಷಯಗಳ ಅಥವಾ ಯಾವುದೇ ವಿಷಯದ ಬಗ್ಗೆ ಒಂದು ಆದೇಶದ ಮೂಲಕ ಅಥವಾ ಹೆಚ್ಚು ಆದೇಶಗಳ ಮೂಲಕ ಉಪಬಂಧಿಸಬಹುದು, ಎಂದರೆ:-

(ಎ) ಮಿಜೋ ಜಿಲ್ಲಾ ಪರಿಷತ್ತಿನ (ಅದು ಮಾಡಿಕೊಂಡ ಯಾವುದೇ ಕರಾರಿನ ಮೇರೆಗಿನ ಹಕ್ಕುಗಳು ಮತ್ತು ಹೊಣೆಗಾರಿಕೆಗಳು ಸೇರಿದಂತೆ) ಆಸ್ತಿಗಳು, ಹಕ್ಕುಗಳು ಮತ್ತು ಹೊಣೆಗಾರಿಕೆಗಳನ್ನು ಸಂಪೂರ್ಣವಾಗಿ ಅಥವಾ ಭಾಗಶಃ ಒಕ್ಕೂಟಕ್ಕೆ ಅಥವಾ ಯಾವುದೇ ಇತರ ಪ್ರಾಧಿಕಾರಕ್ಕೆ ವರ್ಗಾಯಿಸುವುದು;

(ಬಿ) ಮಿಜೋ ಜಿಲ್ಲಾ ಪರಿಷತ್ತು ಒಂದು ಪಕ್ಷವಾಗಿರುವ ಯಾವುದೇ ಕಾನೂನು ವ್ಯವಹರಣೆಗಳಲ್ಲಿ ಮಿಜೋ ಜಿಲ್ಲಾ ಪರಿಷತ್ತಿಗೆ ಬದಲಾಗಿ ಒಂದು ಪಕ್ಷವಾಗಿ ಒಕ್ಕೂಟವನ್ನು ಅಥವಾ ಇತರ ಯಾವುದೇ ಪ್ರಾಧಿಕಾರವನ್ನು ಸೇರಿಸುವುದು ಅಥವಾ ಒಕ್ಕೂಟವನ್ನು ಅಥವಾ ಇತರ ಯಾವುದೇ ಪ್ರಾಧಿಕಾರವನ್ನು ಅದಕ್ಕೆ ಸೇರಿಸುವುದು;

(ಸಿ) ಮಿಜೋ ಜಿಲ್ಲಾ ಪರಿಷತ್ತಿನ ಯಾರೇ ನೌಕರರನ್ನು ಒಕ್ಕೂಟಕ್ಕೆ ಅಥವಾ ಇತರ ಯಾವುದೇ ಪ್ರಾಧಿಕಾರಕ್ಕೆ ವರ್ಗಾಯಿಸುವುದು ಅಥವಾ ಒಕ್ಕೂಟವು ಅಥವಾ ಇತರ ಯಾವುದೇ ಪ್ರಾಧಿಕಾರವು ಅವರನ್ನು ಪುನರ್ ನೇಮಕ ಮಾಡುವುದು ಮತ್ತು ಅಂಥ ವರ್ಗಾವಣೆಯ ಅಥವಾ ಪುನರ್ ನೇಮಕದ ತರುವಾಯ ಅಂಥ ನೌಕರರಿಗೆ ಅನ್ವಯವಾಗತಕ್ಕ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು;

(ಡಿ) ಮಿಜೋ ಜಿಲ್ಲಾ ಪರಿಷತ್ತು ರಚಿಸಿದ ಮತ್ತು ಅದರ ವಿಸರ್ಜನೆಗೆ ನಿಕಟಪೂರ್ವದಲ್ಲಿ ಜಾರಿಯಲ್ಲಿದ್ದ ಯಾವುದೇ ಕಾನೂನುಗಳನ್ನು ಆಡಳಿತಗಾರನು ಈ ಬಗ್ಗೆ ನಿರಸನದ ರೂಪದಲ್ಲಾಗಲಿ ಅಥವಾ ತಿದ್ದುಪಡಿಯ ರೂಪದಲ್ಲಾಗಲಿ ಮಾಡಬಹುದಾದಂಥ ಅಳವಡಿಕೆಗಳಿಗೆ ಮತ್ತು ಮಾರ್ಪಾಟುಗಳಿಗೆ ಒಳಪಟ್ಟು, ಸಕ್ಷಮ ವಿಧಾನಮಂಡಲವು ಅಥವಾ ಇತರ ಸಕ್ಷಮ ಪ್ರಾಧಿಕಾರವು ಬದಲಾಯಿಸುವವರೆಗೆ, ನಿರಸನಗೊಳಿಸುವವರೆಗೆ ಅಥವಾ ತಿದ್ದುಪಡಿಮಾಡುವವರೆಗೆ ಅಂಥ ಕಾನೂನುಗಳನ್ನು ಮುಂದುವರೆಸುವುದು;

(ಇ) ಆಡಳಿತಗಾರನು ಅವಶ್ಯವೆಂದು ಪರಿಗಣಿಸುವಂಥ ಪ್ರಾಸಂಗಿಕ, ಆನುಷಂಗಿಕ ಮತ್ತು ಪೂರಕ ವಿಷಯಗಳು.

**ವಿವರಣೆ:-** ಈ ಪ್ಯಾರಾದಲ್ಲಿ ಮತ್ತು ಈ ಅನುಸೂಚಿಯ 20ಬಿ ಪ್ಯಾರಾದಲ್ಲಿ "ಗೊತ್ತುಪಡಿಸಿದ ದಿನಾಂಕ" ಎಂದರೆ, 1963ನೆಯ ಇಸವಿಯ ಒಕ್ಕೂಟ ರಾಜ್ಯಕ್ಷೇತ್ರಗಳ ಸರ್ಕಾರದ ಅಧಿನಿಯಮದ ಉಪಬಂಧಗಳ ಮೇರೆಗೆ ಮತ್ತು ಅವುಗಳಿಗನುಸಾರವಾಗಿ ಮಿಜೋರಾಂ ಒಕ್ಕೂಟ ರಾಜ್ಯಕ್ಷೇತ್ರದ ವಿಧಾನಸಭೆಯು ಯಾವ ದಿನಾಂಕದಂದು ಕ್ರಮಬದ್ಧವಾಗಿ ರಚಿತವಾಯಿತೋ ಆ ದಿನಾಂಕ.

[1][**20ಬಿ. ಮಿಜೋರಾಂ ಒಕ್ಕೂಟ ರಾಜ್ಯಕ್ಷೇತ್ರದಲ್ಲಿನ ಸ್ವಾಯತ್ತ ಕ್ಷೇತ್ರಗಳು ಸ್ವಾಯತ್ತ ಜಿಲ್ಲೆಗಳಾಗಿರುವುದು ಮತ್ತು ತತ್ಪರಿಣಾಮವಾದ ಮಧ್ಯಕಾಲೀನ ಉಪಬಂಧಗಳು:-** (1) ಈ ಅನುಸೂಚಿಯಲ್ಲಿ ಏನೇ ಇದ್ದಾಗ್ಯೂ,-

---

1. ಅಸ್ಸಾಂ ರಾಜ್ಯಕ್ಕೆ ಅನ್ವಯವಾಗುವುದಕ್ಕಾಗಿ 1995ನೇ ಇಸವಿಯ ಸಂವಿಧಾನ ಆರನೇ ಅನುಸೂಚಿ (ತಿದ್ದುಪಡಿ) ಅಧಿನಿಯಮದ (1995ರ 42) 2ನೇ ಪ್ರಕರಣದ ಮೂಲಕ 20ಬಿ ಪ್ಯಾರಾದ ತರುವಾಯ ಈ ಮುಂದಿನ ಪ್ಯಾರಾವನ್ನು ಸೇರಿಸಲಾಗಿದೆ, ಎಂದರೆ:-

"**20ಬಿಎ. ರಾಜ್ಯಪಾಲನು ತನ್ನ ಪ್ರಕಾರ್ಯಗಳ ನಿರ್ವಹಣೆಯಲ್ಲಿ ವಿವೇಚನಾಧಿಕಾರಗಳನ್ನು ಚಲಾಯಿಸುವುದು:-** ರಾಜ್ಯಪಾಲನು ಈ ಅನುಸೂಚಿಯ 1ನೇ ಪ್ಯಾರಾದ (2) ನೇ ಉಪ-ಪ್ಯಾರಾ ಮತ್ತು (3)ನೇ ಉಪ ಪ್ಯಾರಾ, 2ನೇ ಪ್ಯಾರಾದ (1), (6) ನೇ ಉಪ ಪ್ಯಾರಾ, 1ನೇ ಪರಂತುಕವನ್ನು ಬಿಟ್ಟು (6ಎ) ಉಪಪ್ಯಾರಾ ಮತ್ತು (7)ನೇ ಉಪಪ್ಯಾರಾ, 3ನೇ ಪ್ಯಾರಾದ (3)ನೇ ಉಪ ಪ್ಯಾರಾ, 4ನೇ ಪ್ಯಾರಾದ (4) ನೇ ಉಪ ಪ್ಯಾರಾ, 5ನೇ ಪ್ಯಾರಾದ (1) ನೇ ಉಪ ಪ್ಯಾರಾ, 6ನೇ ಪ್ಯಾರಾ, 7ನೇ ಪ್ಯಾರಾದ (2)ನೇ ಉಪ ಪ್ಯಾರಾ, 8ನೇ ಪ್ಯಾರಾದ (4) ನೇ ಉಪ ಪ್ಯಾರಾ, 9ನೇ ಪ್ಯಾರಾದ (3)ನೇ ಉಪ ಪ್ಯಾರಾ, 10ನೇ ಪ್ಯಾರಾದ (3) ನೇ ಉಪ ಪ್ಯಾರಾ, 14ನೇ ಪ್ಯಾರಾದ (1) ನೇ ಉಪ ಪ್ಯಾರಾ, 15ನೇ ಪ್ಯಾರಾದ (1) ನೇ ಉಪ ಪ್ಯಾರಾ ಮತ್ತು 16ನೇ ಪ್ಯಾರಾದ (1)ನೇ ಮತ್ತು (2) ನೇ ಉಪ ಪ್ಯಾರಾದ ಮೇರೆಗೆ ತನ್ನ ಪ್ರಕಾರ್ಯಗಳ ನಿರ್ವಹಣೆಯಲ್ಲಿ ಮಂತ್ರಿಮಂಡಲದೊಂದಿಗೆ ಹಾಗೂ ಉತ್ತರ ಕಚಾರ್ ಗುಡ್ಡಗಾಡು ಸ್ವಾಯತ್ತ ಪರಿಷತ್ತಿನೊಂದಿಗೆ ಅಥವಾ ಸಂದರ್ಭಾನುಸಾರ ಕಾರ್ಬಿ ಆಂಗ್ಲಾಂಗ್ ಸ್ವಾಯತ್ತ ಪರಿಷತ್ತಿನೊಂದಿಗೆ ಸಮಾಲೋಚಿಸಿದ ತರುವಾಯ ಅವನು ತನ್ನ ವಿವೇಚನಾನುಸಾರ ಅವಶ್ಯವೆಂದು ಪರಿಗಣಿಸುವಂತಹ ಕ್ರಮವನ್ನು ಕೈಗೊಳ್ಳತಕ್ಕದ್ದು.".

ತ್ರಿಪುರ ಮತ್ತು ಮಿಜೋರಾಂ ರಾಜ್ಯಗಳಿಗೆ ಅನ್ವಯವಾಗುವುದಕ್ಕಾಗಿ 1988ನೇ ಇಸವಿಯ ಸಂವಿಧಾನ ಆರನೇ ಅನುಸೂಚಿ (ತಿದ್ದುಪಡಿ) ಅಧಿನಿಯಮದ (1988ರ 67) 2ನೇ ಪ್ರಕರಣದ ಮೂಲಕ 20ಬಿ ಪ್ಯಾರಾದ ತರುವಾಯ ಈ ಮುಂದಿನ ಪ್ಯಾರಾವನ್ನು ಸೇರಿಸಲಾಗಿದೆ, ಎಂದರೆ:-

"**20ಬಿಬಿ. ರಾಜ್ಯಪಾಲನು ತನ್ನ ಪ್ರಕಾರ್ಯಗಳ ನಿರ್ವಹಣೆಯಲ್ಲಿ ವಿವೇಚನಾಧಿಕಾರಗಳನ್ನು ಚಲಾಯಿಸುವುದು:-** ರಾಜ್ಯಪಾಲನು, ಈ ಅನುಸೂಚಿಯ 1ನೇ ಪ್ಯಾರಾದ (2) ಮತ್ತು (3)ನೇ ಉಪ ಪ್ಯಾರಾಗಳ ಮೇರೆಗೆ, 2ನೇ ಪ್ಯಾರಾದ (1) ಮತ್ತು (7)ನೇ ಉಪ ಪ್ಯಾರಾಗಳ ಮೇರೆಗೆ, 3ನೇ ಪ್ಯಾರಾದ (3)ನೇ ಉಪ ಪ್ಯಾರಾ ಮೇರೆಗೆ, 4ನೇ ಪ್ಯಾರಾದ (4)ನೇ ಉಪ ಪ್ಯಾರಾದ ಮೇರೆಗೆ, 5ನೇ ಪ್ಯಾರಾದ ಮೇರೆಗೆ, 6ನೇ ಪ್ಯಾರಾದ (1)ನೇ ಉಪ ಪ್ಯಾರಾದ ಮೇರೆಗೆ, 7ನೇ ಪ್ಯಾರಾದ (2)ನೇ ಉಪ ಪ್ಯಾರಾದ ಮೇರೆಗೆ, 9ನೇ ಪ್ಯಾರಾದ (3)ನೇ ಉಪ ಪ್ಯಾರಾದ ಮೇರೆಗೆ, 14ನೇ ಪ್ಯಾರಾದ (1)ನೇ ಉಪ ಪ್ಯಾರಾದ ಮೇರೆಗೆ, 15ನೇ ಪ್ಯಾರಾದ (1)ನೇ ಉಪ-ಪ್ಯಾರಾದ ಮೇರೆಗೆ ಮತ್ತು 16ನೇ ಪ್ಯಾರಾದ (1) ಮತ್ತು (2)ನೇ ಉಪ ಪ್ಯಾರಾಗಳ ಮೇರೆಗೆ ತನ್ನ ಪ್ರಕಾರ್ಯಗಳ ನಿರ್ವಹಣೆಯಲ್ಲಿ, ಮಂತ್ರಿಮಂಡಲದೊಂದಿಗೆ ಹಾಗೂ ಅವನು ಅಗತ್ಯವೆಂದು ಪರಿಗಣಿಸಿದರೆ, ಸಂಬಂಧಪಟ್ಟ ಜಿಲ್ಲಾ ಪರಿಷತ್ತಿನೊಂದಿಗೆ ಅಥವಾ ಪ್ರಾದೇಶಿಕ ಪರಿಷತ್ತಿನೊಂದಿಗೆ ಸಮಾಲೋಚಿಸಿದ ತರುವಾಯ, ಅವನು ತನ್ನ ವಿವೇಚನಾನುಸಾರ ಅವಶ್ಯವೆಂದು ಪರಿಗಣಿಸುವಂತಹ ಕ್ರಮವನ್ನು ಕೈಗೊಳ್ಳತಕ್ಕದ್ದು.".

(*a*) every autonomous region existing immediately before the prescribed date in the Union territory of Mizoram shall, on and from that date, be an autonomous district in that Union territory (hereafter referred to as the corresponding new district) and the Administrator thereof may, by one or more orders, direct that such consequential amendments as are necessary to give effect to the provisions of this clause shall be made in paragraph 20 of this Schedule (including Part III of the table appended to that paragraph) and thereupon the said paragraph and the said Part III shall be deemed to have been amended accordingly;

(*b*) every Regional Council of an autonomous region in the Union territory of Mizoram existing immediately before the prescribed date (hereafter referred to as the existing Regional Council) shall, on and from that date and until a District Council is duly constituted for the corresponding new district, be deemed to be the District Council of that district (hereafter referred to as the corresponding new District Council).

(2) Every member whether elected or nominated of an existing Regional Council shall be deemed to have been elected or, as the case may be, nominated to the corresponding new District Council and shall hold office until a District Council is duly constituted for the corresponding new district under this Schedule.

(3) Until rules are made under sub-paragraph (7) of paragraph 2 and sub-paragraph (4) of paragraph 4 of this Schedule by the corresponding new District Council, the rules made under the said provisions by the existing Regional Council and in force immediately before the prescribed date shall have effect in relation to the corresponding new District Council subject to such adaptations and modifications as may be made therein by the Administrator of the Union territory of Mizoram.

(4) The Administrator of the Union territory of Mizoram may, by one or more orders, provide for all or any of the following matters, namely:—

(*a*) the transfer in whole or in part of the assets, rights and liabilities of the existing Regional Council (including the rights and liabilities under any contract made by it) to the corresponding new District Council;

(*b*) the substitution of the corresponding new District Council for the existing Regional Council as a party to the legal proceedings to which the existing Regional Council is a party;

(*c*) the transfer or re-employment of any employees of the existing Regional Council to or by the corresponding new District Council, the terms and conditions of service applicable to such employees after such transfer or re-employment;

(ಎ) ನಿಯಮಿಸಿದ ದಿನಾಂಕಕ್ಕೆ ನಿಕಟಪೂರ್ವದಲ್ಲಿ ಮಿಜೋರಾಂ ಒಕ್ಕೂಟರಾಜ್ಯಕ್ಷೇತ್ರದಲ್ಲಿ ಅಸ್ತಿತ್ವದಲ್ಲಿದ್ದ ಪ್ರತಿಯೊಂದು ಸ್ವಾಯತ್ತ ಕ್ಷೇತ್ರವೂ ಆ ದಿನಾಂಕದಂದು ಮತ್ತು ಆ ದಿನಾಂಕದಿಂದ ಆ ಒಕ್ಕೂಟ ರಾಜ್ಯಕ್ಷೇತ್ರದಲ್ಲಿ ಒಂದು ಸ್ವಾಯತ್ತ ಜಿಲ್ಲೆಯಾಗಿರತಕ್ಕದ್ದು (ಇಲ್ಲಿ ಇನ್ನು ಮುಂದೆ ಇದನ್ನು ಸಂವಾದಿ ಹೊಸ ಜಿಲ್ಲೆಯೆಂದು ಉಲ್ಲೇಖಿಸಲಾಗಿದೆ) ಮತ್ತು ಅದರ ಆಡಳಿತಗಾರನು ಒಂದು ಆದೇಶದ ಮೂಲಕ ಅಥವಾ ಹೆಚ್ಚು ಆದೇಶಗಳ ಮೂಲಕ, ಈ ಖಂಡದ ಉಪಬಂಧಗಳನ್ನು ಜಾರಿಗೊಳಿಸಲು ಅವಶ್ಯವಾಗಿರುವಂಥ ಆನುಷಂಗಿಕ ತಿದ್ದುಪಡಿಗಳನ್ನು ಈ ಅನುಸೂಚಿಯ 20ನೇ ಪ್ಯಾರಾದಲ್ಲಿ (ಸದರಿ ಪ್ಯಾರಾಗೆ ಅನುಬಂಧಿಸಿರುವ ಕೋಷ್ಟಕದ III ನೆಯ ಭಾಗವೂ ಸೇರಿದಂತೆ) ಮಾಡತಕ್ಕದ್ದು ಎಂದು ನಿರ್ದೇಶಿಸಬಹುದು ಮತ್ತು ಆ ತರುವಾಯ ಸದರಿ ಪ್ಯಾರಾವನ್ನು ಮತ್ತು ಸದರಿ IIIನೇ ಭಾಗವನ್ನು ತದನುಸಾರವಾಗಿ ತಿದ್ದುಪಡಿ ಮಾಡಲಾಗಿದೆ ಎಂದು ಭಾವಿಸತಕ್ಕದ್ದು;

(ಬಿ) ನಿಯಮಿಸಿದ ದಿನಾಂಕಕ್ಕೆ ನಿಕಟಪೂರ್ವದಲ್ಲಿ ಅಸ್ತಿತ್ವದಲ್ಲಿದ್ದ ಮಿಜೋರಾಂ ಒಕ್ಕೂಟ ರಾಜ್ಯಕ್ಷೇತ್ರದಲ್ಲಿನ ಒಂದು ಸ್ವಾಯತ್ತ ಕ್ಷೇತ್ರದ ಪ್ರತಿಯೊಂದು ಪ್ರಾದೇಶಿಕ ಪರಿಷತ್ತನ್ನು (ಇಲ್ಲಿ ಇನ್ನು ಮುಂದೆ ಇದನ್ನು ಅಸ್ತಿತ್ವದಲ್ಲಿರುವ ಪ್ರಾದೇಶಿಕ ಪರಿಷತ್ತು ಎಂದು ಉಲ್ಲೇಖಿಸಲಾಗಿದೆ) ಆ ದಿನಾಂಕದಂದು ಮತ್ತು ಆ ದಿನಾಂಕದಿಂದ ಮತ್ತು ಸಂವಾದಿ ಹೊಸ ಜಿಲ್ಲೆಗಾಗಿ ಒಂದು ಜಿಲ್ಲಾ ಪರಿಷತ್ತು ಕ್ರಮಬದ್ಧವಾಗಿ ರಚಿತವಾಗುವವರೆಗೆ, ಆ ಜಿಲ್ಲೆಯ ಜಿಲ್ಲಾ ಪರಿಷತ್ತೆಂಬುದಾಗಿ (ಇನ್ನು ಮುಂದೆ ಇದನ್ನು ಸಂವಾದಿ ಹೊಸ ಜಿಲ್ಲಾ ಪರಿಷತ್ತು ಎಂದು ಉಲ್ಲೇಖಿಸಲಾಗಿದೆ) ಭಾವಿಸತಕ್ಕದ್ದು.

(2) ಅಸ್ತಿತ್ವದಲ್ಲಿರುವ ಒಂದು ಪ್ರಾದೇಶಿಕ ಪರಿಷತ್ತಿನ ಪ್ರತಿಯೊಬ್ಬ ಸದಸ್ಯನು ಸಂದರ್ಭಾನುಸಾರ ಚುನಾಯಿತನಾದವನಾಗಿರಲಿ ಅಥವಾ ನಾಮನಿರ್ದೇಶನಗೊಂಡವನಾಗಿರಲಿ ಅವನನ್ನು ಸಂವಾದಿ ಹೊಸ ಜಿಲ್ಲಾ ಪರಿಷತ್ತಿಗೆ ಚುನಾಯಿತನಾದವನೆಂದು ಅಥವಾ ಸಂದರ್ಭಾನುಸಾರ ನಾಮನಿರ್ದೇಶನಗೊಂಡವನೆಂದು ಭಾವಿಸತಕ್ಕದ್ದು ಮತ್ತು ಈ ಅನುಸೂಚಿಯ ಮೇರೆಗೆ ಸಂವಾದಿ ಹೊಸ ಜಿಲ್ಲೆಗೆ ಕ್ರಮಬದ್ಧವಾಗಿ ಒಂದು ಜಿಲ್ಲಾ ಪರಿಷತ್ತು ರಚಿತವಾಗುವವರೆಗೆ, ಅವನು ಪದಧಾರಣ ಮಾಡತಕ್ಕದ್ದು.

(3) ಈ ಅನುಸೂಚಿಯ 2ನೆಯ ಪ್ಯಾರಾದ (7)ನೇ ಉಪ-ಪ್ಯಾರಾದ ಮತ್ತು 4ನೇ ಪ್ಯಾರಾದ (4)ನೆಯ ಉಪ-ಪ್ಯಾರಾದ ಮೇರೆಗೆ ಸಂವಾದಿ ಹೊಸ ಜಿಲ್ಲಾ ಪರಿಷತ್ತು ನಿಯಮಗಳನ್ನು ರಚಿಸುವವರೆಗೆ, ಅಸ್ತಿತ್ವದಲ್ಲಿರುವ ಪ್ರಾದೇಶಿಕ ಪರಿಷತ್ತು ಸದರಿ ಉಪಬಂಧಗಳ ಮೇರೆಗೆ ರಚಿಸಿದ ಮತ್ತು ಗೊತ್ತುಪಡಿಸಿದ ದಿನಾಂಕಕ್ಕೆ ನಿಕಟಪೂರ್ವದಲ್ಲಿ ಜಾರಿಯಲ್ಲಿದ್ದ ನಿಯಮಗಳು, ಸಂವಾದಿ ಹೊಸ ಜಿಲ್ಲಾ ಪರಿಷತ್ತಿಗೆ ಸಂಬಂಧಿಸಿದಂತೆ ಮಿಜೋರಾಂ ಒಕ್ಕೂಟ ರಾಜ್ಯಕ್ಷೇತ್ರದ ಆಡಳಿತಗಾರನು ಅವುಗಳಲ್ಲಿ ಮಾಡಬಹುದಾದ ಅಳವಡಿಕೆಗಳು ಮತ್ತು ಮಾರ್ಪಾಟುಗಳಿಗೆ ಒಳಪಟ್ಟು ಪರಿಣಾಮಕಾರಿಯಾಗತಕ್ಕದ್ದು.

(4) ಮಿಜೋರಾಂ ಒಕ್ಕೂಟ ರಾಜ್ಯಕ್ಷೇತ್ರದ ಆಡಳಿತಗಾರನು, ಒಂದು ಆದೇಶದ ಮೂಲಕ ಅಥವಾ ಹೆಚ್ಚು ಆದೇಶಗಳ ಮೂಲಕ, ಈ ಕೆಳಕಂಡ ಎಲ್ಲ ವಿಷಯಗಳ ಬಗ್ಗೆ ಅಥವಾ ಯಾವುದೇ ವಿಷಯದ ಬಗ್ಗೆ ಉಪಬಂಧಿಸಬಹುದು, ಎಂದರೆ:-

(ಎ) ಅಸ್ತಿತ್ವದಲ್ಲಿರುವ ಪ್ರಾದೇಶಿಕ ಪರಿಷತ್ತಿನ (ಅದು ಮಾಡಿಕೊಂಡ ಯಾವುದೇ ಕರಾರಿನ ಮೇರೆಗಿನ ಹಕ್ಕುಗಳು ಮತ್ತು ಹೊಣೆಗಾರಿಕೆಗಳೂ ಸೇರಿದಂತೆ) ಆಸ್ತಿಗಳನ್ನು, ಹಕ್ಕುಗಳನ್ನು ಮತ್ತು ಹೊಣೆಗಾರಿಕೆಗಳನ್ನು ಸಂಪೂರ್ಣವಾಗಿ ಅಥವಾ ಭಾಗಶಃ ಸಂವಾದಿ ಹೊಸ ಜಿಲ್ಲಾ ಪರಿಷತ್ತಿಗೆ ವರ್ಗಾಯಿಸುವುದು;

(ಬಿ) ಅಸ್ತಿತ್ವದಲ್ಲಿರುವ ಪ್ರಾದೇಶಿಕ ಪರಿಷತ್ತು ಒಂದು ಪಕ್ಷವಾಗಿರುವ ಯಾವುದೇ ಕಾನೂನು ವ್ಯವಹರಣೆಗಳಲ್ಲಿ ಅಂಥ ಪರಿಷತ್ತಿಗೆ ಬದಲಾಗಿ ಸಂವಾದಿ ಹೊಸ ಜಿಲ್ಲಾ ಪರಿಷತ್ತನ್ನು ಒಂದು ಪಕ್ಷವಾಗಿ ಸೇರಿಸುವುದು;

(ಸಿ) ಅಸ್ತಿತ್ವದಲ್ಲಿರುವ ಪ್ರಾದೇಶಿಕ ಪರಿಷತ್ತಿನ ಯಾರೇ ನೌಕರರನ್ನು ಸಂವಾದಿ ಹೊಸ ಜಿಲ್ಲಾ ಪರಿಷತ್ತಿಗೆ ವರ್ಗಾಯಿಸುವುದು ಅಥವಾ ಆ ಸಂವಾದಿ ಹೊಸ ಜಿಲ್ಲಾ ಪರಿಷತ್ತು ಅವರನ್ನು ಪುನರ್ ನೇಮಕ ಮಾಡುವುದು ಮತ್ತು ಅಂಥ ವರ್ಗಾವಣೆ ಅಥವಾ ಪುನರ್ ನೇಮಕದ ತರುವಾಯ, ಅಂಥ ನೌಕರರಿಗೆ ಅನ್ವಯವಾಗುವ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು;

(*d*) the continuance of any laws made by the existing Regional Council and in force immediately before the prescribed date, subject to such adaptations and modifications, whether by way of repeal or amendment, as the Administrator may make in this behalf until such laws are altered, repealed or amended by a competent Legislature or other competent authority;

(*e*) such incidental, consequential and supplementary matters as the Administrator considers necessary.

**20C. Interpretation**.— Subject to any provision made in this behalf, the provisions of this Schedule shall, in their application to the Union territory of Mizoram, have effect—

(1) as if references to the Governor and Government of the State were references to the Administrator of the Union territory appointed under article 239, references to State (except in the expression "Government of the State") were references to the Union territory of Mizoram and references to the State Legislature were references to the Legislative Assembly of the Union territory of Mizoram;

(2) as if—

(*a*) in sub-paragraph (5) of paragraph 4, the provision for consultation with the Government of the State concerned had been omitted;

(*b*) in sub-paragraph (2) of paragraph 6, for the words "to which the executive power of the State extends", the words "with respect to which the Legislative Assembly of the Union territory of Mizoram has power to make laws" had been substituted;

(*c*) in paragraph 13, the words and figures "under article 202" had been omitted.]]

**21. Amendment of the Schedule**.—(1) Parliament may from time to time by law amend by way of addition, variation or repeal any of the provisions of this Schedule and, when the Schedule is so amended, any reference to this Schedule in this Constitution shall be construed as a reference to such Schedule as so amended.

(2) No such law as is mentioned in sub-paragraph (1) of this paragraph shall be deemed to be an amendment of this Constitution for the purposes of article 368.

(ಡಿ) ಅಸ್ತಿತ್ವದಲ್ಲಿರುವ ಪ್ರಾದೇಶಿಕ ಪರಿಷತ್ತು ರಚಿಸಿದ ಮತ್ತು ಗೊತ್ತು ಪಡಿಸಿದ ದಿನಾಂಕಕ್ಕೆ ನಿಕಟಪೂರ್ವದಲ್ಲಿ ಜಾರಿಯಲ್ಲಿದ್ದ ಯಾವುದೇ ಕಾನೂನುಗಳನ್ನು ಆಡಳಿತಗಾರನು ಈ ಬಗ್ಗೆ ನಿರಸನ ರೂಪದಲ್ಲಾಗಲಿ ಅಥವಾ ತಿದ್ದುಪಡಿಯ ರೂಪದಲ್ಲಾಗಲಿ ಮಾಡಬಹುದಾದಂಥ ಅಳವಡಿಕೆಗಳು ಮತ್ತು ಮಾರ್ಪಾಟುಗಳಿಗೆ ಒಳಪಟ್ಟು, ಸಕ್ಷಮ ವಿಧಾನಮಂಡಲವು ಅಥವಾ ಇತರ ಸಕ್ಷಮ ಪ್ರಾಧಿಕಾರವು ಬದಲಾಯಿಸುವವರೆಗೆ, ನಿರಸನಗೊಳಿಸುವವರೆಗೆ ಅಥವಾ ತಿದ್ದುಪಡಿಮಾಡುವವರೆಗೆ ಅಂಥ ಕಾನೂನುಗಳನ್ನು ಮುಂದುವರಿಸುವುದು;

(ಇ) ಆಡಳಿತಗಾರನು ಅವಶ್ಯವೆಂದು ಪರಿಗಣಿಸುವಂಥ ಪ್ರಾಸಂಗಿಕ, ಆನುಷಂಗಿಕ ಮತ್ತು ಪೂರಕ ವಿಷಯಗಳು.

**20ಸಿ. ಅರ್ಥ ವಿವರಣೆ:-** ಈ ಬಗ್ಗೆ ಮಾಡಿದ ಯಾವುದೇ ಉಪಬಂಧಕ್ಕೊಳಪಟ್ಟು, ಈ ಅನುಸೂಚಿಯ ಉಪಬಂಧಗಳನ್ನು ಮಿಜೋರಾಂ ಒಕ್ಕೂಟ ರಾಜ್ಯಕ್ಷೇತ್ರಕ್ಕೆ ಅನ್ವಯಿಸುವಾಗ, ಆ ಉಪಬಂಧಗಳು-

(1) ರಾಜ್ಯಪಾಲನಿಗೆ ಮತ್ತು ರಾಜ್ಯ ಸರ್ಕಾರಕ್ಕೆ ಮಾಡಿದ ಉಲ್ಲೇಖಗಳು 239ನೆಯ ಅನುಚ್ಛೇದದ ಮೇರೆಗೆ ನೇಮಕಗೊಂಡ ಒಕ್ಕೂಟ ರಾಜ್ಯಕ್ಷೇತ್ರದ ಆಡಳಿತಗಾರನಿಗೆ ಮಾಡಿದ ಉಲ್ಲೇಖಗಳಾಗಿದ್ದರೆ, ("ರಾಜ್ಯ ಸರ್ಕಾರ" ಎಂಬ ಪದಗಳನ್ನು ಹೊರತುಪಡಿಸಿ) ರಾಜ್ಯಕ್ಕೆ ಮಾಡಿದ ಉಲ್ಲೇಖಗಳು ಮಿಜೋರಾಂ ಒಕ್ಕೂಟ ರಾಜ್ಯಕ್ಷೇತ್ರಕ್ಕೆ ಮಾಡಿದ ಉಲ್ಲೇಖಗಳಾಗಿದ್ದರೆ, ಮತ್ತು ರಾಜ್ಯ ವಿಧಾನಮಂಡಲಕ್ಕೆ ಮಾಡಿದ ಉಲ್ಲೇಖಗಳು ಮಿಜೋರಾಂ ಒಕ್ಕೂಟ ರಾಜ್ಯಕ್ಷೇತ್ರದ ವಿಧಾನಸಭೆಗೆ ಮಾಡಿದ ಉಲ್ಲೇಖಗಳಾಗಿದ್ದರೆ ಹೇಗೋ ಹಾಗೆ;

(2) (ಎ) 4ನೆಯ ಪ್ಯಾರಾದ (5) ನೆಯ ಉಪ-ಪ್ಯಾರಾದಲ್ಲಿ ಸಂಬಂಧಪಟ್ಟ ರಾಜ್ಯ ಸರ್ಕಾರದೊಡನೆ ಸಮಾಲೋಚನೆಗಾಗಿ ಇರುವ ಉಪಬಂಧವನ್ನು ಬಿಟ್ಟುಬಿಟ್ಟಿದ್ದರೆ ಹೇಗೋ ಹಾಗೆ;

(ಬಿ) 6ನೆಯ ಪ್ಯಾರಾದ (2)ನೆಯ ಉಪಪ್ಯಾರಾದಲ್ಲಿ "ರಾಜ್ಯದ ಕಾರ್ಯಾಂಗ ಅಧಿಕಾರವು ವ್ಯಾಪ್ತವಾಗುವ" ಎಂಬ ಪದಗಳಿಗೆ ಬದಲಾಗಿ ಮಿಜೋರಾಂ ಒಕ್ಕೂಟ ರಾಜ್ಯಕ್ಷೇತ್ರದ ವಿಧಾನಸಭೆಯು ಇತರ ಯಾವ ವಿಷಯಗಳಿಗೆ ಸಂಬಂಧಿಸಿದಂತೆ ಕಾನೂನುಗಳನ್ನು ರಚಿಸಲು ಅಧಿಕಾರ ಹೊಂದಿದೆಯೋ" ಎಂಬ ಪದಗಳನ್ನು ಪ್ರತ್ಯಾಯೋಜಿಸಿದ್ದರೆ ಹೇಗೋಹಾಗೆ;

(ಸಿ) 13ನೆಯ ಪ್ಯಾರಾದಲ್ಲಿ "202ನೆಯ ಅನುಚ್ಛೇದದ ಮೇರೆಗೆ" ಎಂಬ ಪದಗಳನ್ನು ಬಿಟ್ಟುಬಿಟ್ಟಿದ್ದರೆ ಹೇಗೋ ಹಾಗೆ

- ಪರಿಣಾಮವುಳ್ಳದ್ದಾಗಿರತಕ್ಕದ್ದು.]]

**21. ಅನುಸೂಚಿಯ ತಿದ್ದುಪಡಿ:-** (1) ಸಂಸತ್ತು ಕಾಲಕಾಲಕ್ಕೆ ಕಾನೂನಿನ ಮೂಲಕ ಸೇರ್ಪಡೆಯ, ವ್ಯತ್ಯಾಸದ ಅಥವಾ ನಿರಸನದ ರೂಪದಲ್ಲಿ ಈ ಅನುಸೂಚಿಯ ಯಾವುದೇ ಉಪಬಂಧಗಳನ್ನು ತಿದ್ದುಪಡಿ ಮಾಡಬಹುದು ಮತ್ತು ಈ ಅನುಸೂಚಿಯು ಹಾಗೆ ತಿದ್ದುಪಡಿಯಾದಾಗ ಸಂವಿಧಾನದಲ್ಲಿ ಈ ಅನುಸೂಚಿಗೆ ಮಾಡಿದ ಯಾವುದೇ ಉಲ್ಲೇಖವನ್ನು, ಹಾಗೆ ತಿದ್ದುಪಡಿಯಾದಂಥ ಅನುಸೂಚಿಗೆ ಮಾಡಿದ ಉಲ್ಲೇಖ ಎಂದು ಅರ್ಥೈಸತಕ್ಕದ್ದು.

(2) ಈ ಪ್ಯಾರಾದ (1) ನೆಯ ಉಪ-ಪ್ಯಾರಾದಲ್ಲಿ ನಮೂದಿಸಿರುವಂಥ ಯಾವುದೇ ಕಾನೂನನ್ನು 368ನೆಯ ಅನುಚ್ಛೇದದ ಉದ್ದೇಶಗಳಿಗಾಗಿ ಈ ಸಂವಿಧಾನದ ತಿದ್ದುಪಡಿ ಎಂಬುದಾಗಿ ಭಾವಿಸತಕ್ಕದ್ದಲ್ಲ.

"Provided further that nothing in this article shall apply to a permanent resident of the State of Jammu and Kashmir, who, after having so migrated to the territory now included in Pakistan, returns to the territory of that State under a permit for resettlement in that State or permanent return issued by or under the authority of any law made by the Legislature of that State, and every such person shall be deemed to be a citizen of India.".

**(4) PART III.**

(*a*) In article 13, references to the commencement of the Constitution shall be construed as references to the commencement of this Order.

[1]* * * * *

(*c*) In clause (3) of article 16, the reference to the State shall be construed as not including a reference to the State of Jammu and Kashmir.

(*d*) In article 19, for a period of [2][[3][twenty-five] years] from the commencement of this Order:—

(*i*) in clauses (3) and (4), after the words "in the interests of", the words "the security of the State or" shall be inserted;

(*ii*) in clause (5), for the words "or for the protection of the interests of any Scheduled Tribes", the words "or in the interests of the security of the State" shall be substituted; and

(*iii*) the following new clause shall be added, namely:—

'(7) The words "reasonable restrictions" occurring in clauses (2), (3), (4) and (5) shall be construed as meaning such restrictions as the appropriate Legislature deems reasonable.'

(*e*) In clauses (4) and (7) of article 22, for the word "Parliament", the words "the Legislature of the State" shall be substituted.

(*f*) In article 31, clauses (3), (4) and (6) shall be omitted; and for clause (5), there shall be substituted the following clause, namely:—

"(5) Nothing in clause (2) shall affect—

(*a*) the provisions of any existing law; or

(*b*) the provisions of any law which the State may hereafter make—

(*i*) for the purpose of imposing or levying any tax or penalty; or

(*ii*) for the promotion of public health or the prevention of danger to life or property; or

(*iii*) with respect to property declared by law to be evacuee property.".

---

1. Cl. (b) omitted by C.O. 124.
2. Subs. by C.O. 69, for "ten years".
3. Subs. by C.O. 97, for "twenty".

"ಮತ್ತೂ ಪರಂತು, ಈ ಅನುಚ್ಛೇದದಲ್ಲಿ ಇರುವುದು ಯಾವುದೂ, ಜಮ್ಮು ಮತ್ತು ಕಾಶ್ಮೀರ ರಾಜ್ಯದ ಖಾಯಂ ನಿವಾಸಿಯಾಗಿದ್ದು, ಈಗ ಪಾಕಿಸ್ತಾನದಲ್ಲಿ ಒಳಗೊಂಡಿರುವ ರಾಜ್ಯಕ್ಷೇತ್ರಕ್ಕೆ ಹಾಗೆ ವಲಸೆ ಹೋದ ಬಳಿಕ, ಆ ರಾಜ್ಯದಲ್ಲಿ ಮತ್ತೆ ನೆಲಸುವುದಕ್ಕಾಗಿ ಅಥವಾ ಖಾಯಂ ಆಗಿ ಹಿಂತಿರುಗುವುದಕ್ಕಾಗಿ, ಆ ರಾಜ್ಯದ ವಿಧಾನಮಂಡಲವು ರಚಿಸಿದ ಯಾವುದೇ ಕಾನೂನಿನ ಅಧಿಕಾರದ ಮೂಲಕ ಅಥವಾ ಮೇರೆಗೆ ಕೊಟ್ಟ ಪರ್ಮಿಟ್ಟಿನ ಮೇರೆಗೆ ಆ ರಾಜ್ಯದ ರಾಜ್ಯಕ್ಷೇತ್ರಕ್ಕೆ ವಾಪಸ್ಸು ಬರುವವನಿಗೆ ಅನ್ವಯವಾಗತಕ್ಕದ್ದಲ್ಲ ಮತ್ತು ಅಂಥ ಪ್ರತಿಯೊಬ್ಬ ವ್ಯಕ್ತಿಯನ್ನು ಭಾರತದ ನಾಗರಿಕನೆಂದು ಭಾವಿಸತಕ್ಕದ್ದು."

**(4) ಭಾಗ III.**

(ಎ) 13ನೇ ಅನುಚ್ಛೇದದಲ್ಲಿ, ಸಂವಿಧಾನದ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳನ್ನು ಈ ಆದೇಶದ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು.

[1]* * * * *

(ಸಿ) 16ನೇ ಅನುಚ್ಛೇದದ (3)ನೇ ಖಂಡದಲ್ಲಿ, ರಾಜ್ಯಕ್ಕೆ ಮಾಡಿದ ಉಲ್ಲೇಖವು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಮಾಡಿದ ಉಲ್ಲೇಖವನ್ನು ಒಳಗೊಳ್ಳುವುದಿಲ್ಲವೆಂದು ಅರ್ಥೈಸತಕ್ಕದ್ದು.

(ಡಿ) 19ನೇ ಅನುಚ್ಛೇದದಲ್ಲಿ, ಈ ಆದೇಶವು ಪ್ರಾರಂಭವಾದಾಗಿನಿಂದ [2][[3][ಇಪ್ಪತ್ತೈದು] ವರ್ಷಗಳ] ಅವಧಿಗಾಗಿ:-

(i) (3)ನೇ ಮತ್ತು (4)ನೇ ಖಂಡದಲ್ಲಿ "ಹಿತದೃಷ್ಟಿಯಿಂದ" ಎಂಬ ಪದಗಳ ನಂತರ "ರಾಜ್ಯದ ಭದ್ರತೆ ಅಥವಾ" ಎಂಬ ಪದಗಳನ್ನು ಸೇರಿಸತಕ್ಕದ್ದು;

(ii) (5)ನೇ ಖಂಡದಲ್ಲಿ "ಅಥವಾ ಯಾವುದೇ ಅನುಸೂಚಿತ ಬುಡಕಟ್ಟಿನ ಹಿತಾಸಕ್ತಿಯನ್ನು ಸಂರಕ್ಷಿಸುವುದಕ್ಕಾಗಿ" ಎಂಬ ಪದಗಳಿಗೆ ಬದಲಾಗಿ "ಅಥವಾ ರಾಜ್ಯದ ಭದ್ರತೆಯ ಹಿತದೃಷ್ಟಿಯಿಂದ" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು; ಮತ್ತು

(iii) ಕೆಳಕಂಡ ಹೊಸ ಖಂಡವನ್ನು ಸೇರಿಸತಕ್ಕದ್ದು, ಎಂದರೆ:-

'(7) "ಯುಕ್ತ ನಿರ್ಬಂಧಗಳು" ಎಂಬುದು (2)ನೇ, (3)ನೇ, (4)ನೇ ಮತ್ತು (5)ನೇ ಖಂಡಗಳಲ್ಲಿ ಬರುವ ಪದಗಳನ್ನು ಸಮುಚಿತ ವಿಧಾನಮಂಡಲವು ಯುಕ್ತವಾದುದೆಂದು ಭಾವಿಸಬಹುದಾದಂಥ ನಿರ್ಬಂಧಗಳು ಎಂದು ಅರ್ಥ ಬರುವಂತೆ ಅರ್ಥೈಸತಕ್ಕದ್ದು.'

(ಇ) 22ನೇ ಅನುಚ್ಛೇದದ (4)ನೇ ಮತ್ತು (7)ನೇ ಖಂಡಗಳಲ್ಲಿ "ಸಂಸತ್ತು" ಎಂಬ ಪದಕ್ಕೆ ಬದಲಾಗಿ "ರಾಜ್ಯದ ವಿಧಾನಮಂಡಲವು" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

(ಎಫ್) 31ನೇ ಅನುಚ್ಛೇದದಲ್ಲಿ (3)ನೇ, (4)ನೇ ಮತ್ತು (6)ನೇ ಖಂಡಗಳನ್ನು ಬಿಟ್ಟುಬಿಡತಕ್ಕದ್ದು; ಮತ್ತು (5)ನೇ ಖಂಡಕ್ಕೆ ಬದಲಾಗಿ, ಕೆಳಕಂಡ ಖಂಡವನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

"(5) (2)ನೆಯ ಖಂಡದಲ್ಲಿರುವುದು ಯಾವುದೂ,-

(ಎ) ಅಸ್ತಿತ್ವದಲ್ಲಿರುವ ಯಾವುದೇ ಕಾನೂನಿನ ಉಪಬಂಧಗಳಿಗೆ; ಅಥವಾ

(ಬಿ) ಇನ್ನು ಮುಂದೆ ರಾಜ್ಯವು,-

(i) ಯಾವುದೇ ತೆರಿಗೆಯನ್ನು ಅಥವಾ ದಂಡವನ್ನು ವಿಧಿಸುವ ಅಥವಾ ಹಾಕುವ ಉದ್ದೇಶಕ್ಕಾಗಿ; ಅಥವಾ

(ii) ಸಾರ್ವಜನಿಕ ಆರೋಗ್ಯವನ್ನು ಸಂವರ್ಧಿಸುವುದಕ್ಕಾಗಿ ಅಥವಾ ಪ್ರಾಣಕ್ಕೆ ಅಥವಾ ಸ್ವತ್ತಿಗೆ ಉಂಟಾಗುವ ಅಪಾಯವನ್ನು ನಿವಾರಿಸುವುದಕ್ಕಾಗಿ; ಅಥವಾ

(iii) ನಿರ್ವಾಸಿತರ ಸ್ವತ್ತಾಗಬೇಕೆಂದು ಕಾನೂನಿನ ಮೂಲಕ ಘೋಷಿಸಿದ ಸ್ವತ್ತಿಗೆ ಸಂಬಂಧಿಸಿದಂತೆ

- ಮಾಡುವ ಯಾವುದೇ ಕಾನೂನಿನ ಉಪಬಂಧಗಳಿಗೆ ಬಾಧಕವನ್ನುಂಟುಮಾಡತಕ್ಕದ್ದಲ್ಲ."

1. ಸಿ.ಓ. 124 ರ ಮೂಲಕ (ಬಿ) ಖಂಡವನ್ನು ಬಿಟ್ಟುಬಿಡಲಾಗಿದೆ.
2. ಸಿ.ಓ. 69 ರ ಮೂಲಕ "ಹತ್ತು ವರ್ಷಗಳು" ಎಂಬುದಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
3. ಸಿ.ಓ. 97 ರ ಮೂಲಕ "ಇಪ್ಪತ್ತು" ಎಂಬುದಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.

(*g*) In article 31A, the proviso to clause (1) shall be omitted; and for subclause (*a*) of clause (2), the following sub-clause shall be substituted, namely:—

'(*a*) "estate" shall mean land which is occupied or has been let for agricultural purposes or for purposes subservient to agriculture, or for pasture, and includes—

(*i*) sites of buildings and other structures on such land;

(*ii*) trees standing on such land;

(*iii*) forest land and wooded waste;

(*iv*) area covered by or fields floating over water;

(*v*) sites of *jandars* and *gharats;*

(*vi*) any *jagir, inam, muafi* or *mukarrari* or other similar grant, but does not include —

(*i*) the site of any building in any town, or town area or village *abadi* or any land appurtenant to any such building or site;

(*ii*) any land which is occupied as the site of a town or village; or

(*iii*) any land reserved for building purposes in a municipality or notified area or cantonment or town area or any area for which a town planning scheme is sanctioned.'.

[1][(*h*) In article 32, clause (3) shall be omitted.]

(*i*) In article 35—

(*i*) references to the commencement of the Constitution shall be construed as references to the commencement of this Order;

(*ii*) in clause (*a*) (i), the words, brackets and figures "clause (3) of article 16, clause (3) of article 32" shall be omitted; and

(*iii*) after clause (*b*), the following clause shall be added, namely:—

"(*c*) no law with respect to preventive detention made by the Legislature of the State of Jammu and Kashmir, whether before or after the commencement of the Constitution (Application to Jammu and Kashmir) Order, 1954, shall be void on the ground that it is inconsistent with any of the provisions of this part, but any such law shall, to the extent of such inconsistency, cease to have effect on the expiration of [2][[3][twenty-five] years] from the commencement of the said Order, except as respects things done or omitted to be done before the expiration thereof.".

1. Subs. by C.O. 89, for cl. (*h*).
2. Subs. by C.O. 69, for "ten years".
3. Subs. by C.O. 97, for "twenty".

(ಜಿ) 31ಎ ಅನುಚ್ಛೇದದಲ್ಲಿ (1)ನೇ ಖಂಡದ ಪರಂತುಕವನ್ನು ಬಿಟ್ಟುಬಿಡತಕ್ಕದ್ದು ಮತ್ತು (2)ನೇ ಖಂಡದ (ಎ) ಉಪಖಂಡಕ್ಕೆ ಬದಲಾಗಿ, ಈ ಕೆಳಕಂಡ ಉಪಖಂಡವನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

'(ಎ) "ಎಸ್ಟೇಟು" ಎಂದರೆ, ಕೃಷಿ ಉದ್ದೇಶಗಳಿಗಾಗಿ ಅಥವಾ ಕೃಷಿಗೆ ಸಾಧಕವಾದ ಉದ್ದೇಶಗಳಿಗಾಗಿ ಅಥವಾ ಹುಲ್ಲುಗಾವಲಿಗಾಗಿ ಅಧಿಭೋಗದಲ್ಲಿರುವ ಅಥವಾ ಗುತ್ತಿಗೆಗೆ ಕೊಟ್ಟಿರುವ ಭೂಮಿ; ಮತ್ತು-

(i) ಅಂಥ ಭೂಮಿಯ ಮೇಲಿನ ಕಟ್ಟಡಗಳ ನಿವೇಶನಗಳನ್ನು ಮತ್ತು ಇತರ ಕಟ್ಟಡಗಳನ್ನು;

(ii) ಅಂಥ ಭೂಮಿಯ ಮೇಲೆ ನಿಂತಿರುವ ಮರಗಳನ್ನು;

(iii) ಅರಣ್ಯ ಭೂಮಿಯನ್ನು ಮತ್ತು ಅರಣ್ಯ ಬಂಜರು ಭೂಮಿಯನ್ನು;

(iv) ಜಲಾವೃತ ಪ್ರದೇಶ ಅಥವಾ ನೀರಿನಲ್ಲಿ ತೇಲುವ ಹೊಲಗದ್ದೆಗಳನ್ನು;

(v) ಜಂದಾರ್ ಮತ್ತು ಘರಾಟ್ ನಿವೇಶನಗಳನ್ನು;

(vi) ಯಾವುದೇ ಜಾಗೀರು, ಇನಾಂ, ಮುವಾಫಿ ಅಥವಾ ಮಕರರಿ ಅಥವಾ ಅಂಥದೇ ಇತರ ಮಂಜೂರಾತಿಯನ್ನು

- ಒಳಗೊಳ್ಳುತ್ತದೆ, ಆದರೆ-

(i) ಯಾವುದೇ ಪಟ್ಟಣದಲ್ಲಿರುವ ಅಥವಾ ಪಟ್ಟಣ ಪ್ರದೇಶದಲ್ಲಿರುವ ಅಥವಾ ಗ್ರಾಮ ಅಬಾದಿಯಲ್ಲಿರುವ ಯಾವುದೇ ಕಟ್ಟಡದ ನಿವೇಶನವು ಅಥವಾ ಅಂಥ ಯಾವುದೇ ಕಟ್ಟಡಕ್ಕೆ ಅಥವಾ ನಿವೇಶನಕ್ಕೆ ಲಗತ್ತಾದ ಯಾವುದೇ ಭೂಮಿಯು;

(ii) ಪಟ್ಟಣದ ಅಥವಾ ಗ್ರಾಮದ ನಿವೇಶನವಾಗಿ ಅಧಿಭೋಗದಲ್ಲಿರುವ ಯಾವುದೇ ಭೂಮಿಯು; ಅಥವಾ

(iii) ಪುರಸಭೆಯ ಅಥವಾ ಅಧಿಸೂಚಿತ ಪ್ರದೇಶದಲ್ಲಿ ಅಥವಾ ದಂಡು ಪ್ರದೇಶದಲ್ಲಿ ಅಥವಾ ಪಟ್ಟಣ ಪ್ರದೇಶದಲ್ಲಿ ಅಥವಾ ಪಟ್ಟಣ ಯೋಜನೆಯ ಪರಿಯೋಜನೆಯು ಮಂಜೂರಾದ ಯಾವುದೇ ಪ್ರದೇಶದಲ್ಲಿ ಕಟ್ಟಡದ ಉದ್ದೇಶಗಳಿಗಾಗಿ ಕಾಯ್ದಿರಿಸಿದ ಯಾವುದೇ ಭೂಮಿಯು

- ಒಳಗೊಳ್ಳುವುದಿಲ್ಲ.'

[1][(ಹೆಚ್) 32ನೇ ಅನುಚ್ಛೇದದಲ್ಲಿ (3)ನೇ ಖಂಡವನ್ನು ಬಿಟ್ಟುಬಿಡತಕ್ಕದ್ದು.]

(ಐ) 35ನೇ ಅನುಚ್ಛೇದದಲ್ಲಿ,-

(i) ಸಂವಿಧಾನದ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳನ್ನು ಈ ಆದೇಶದ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು;

(ii) (ಎ)(i)ನೇ ಖಂಡದಲ್ಲಿ "16ನೇ ಅನುಚ್ಛೇದದ (3)ನೇ ಖಂಡದ ಮೇರೆಗೆ, 32ನೇ ಅನುಚ್ಛೇದದ (3)ನೇ ಖಂಡದ ಮೇರೆಗೆ" ಎಂಬ ಪದಗಳನ್ನು, ಆವರಣಗಳನ್ನು ಮತ್ತು ಅಂಕಿಗಳನ್ನು ಬಿಟ್ಟುಬಿಡತಕ್ಕದ್ದು; ಮತ್ತು

(iii) (ಬಿ) ಖಂಡದ ತರುವಾಯ ಕೆಳಕಂಡ ಖಂಡವನ್ನು ಸೇರಿಸತಕ್ಕದ್ದು, ಎಂದರೆ:-

"(ಸಿ) 1954ರ ಸಂವಿಧಾನ (ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯ) ಆದೇಶದ ಪ್ರಾರಂಭಕ್ಕೆ ಮುಂಚಿತವಾಗಿಯಾಗಲೀ ಅಥವಾ ಅನಂತರವಾಗಲೀ ಜಮ್ಮು ಮತ್ತು ಕಾಶ್ಮೀರ ರಾಜ್ಯದ ವಿಧಾನಮಂಡಲವು ಮಾಡಿದ ಪ್ರತಿಬಂಧಕ ಸ್ಥಾನಬದ್ಧತೆಗೆ ಸಂಬಂಧಿಸಿದ ಯಾವುದೇ ಕಾನೂನು, ಈ ಭಾಗದ ಉಪಬಂಧಗಳಿಗೆ ಅಸಂಗತವಾಗಿದೆ ಎಂಬ ಕಾರಣದ ಮೇಲೆ ಅನೂರ್ಜಿತವಾಗತಕ್ಕದ್ದಲ್ಲ, ಆದರೆ, ಅಂಥ ಯಾವುದೇ ಕಾನೂನು, ಹಾಗೆ ಅಸಂಗತವಾಗಿರುವಷ್ಟರ ಮಟ್ಟಿಗೆ, ಅಂಥ ಆದೇಶದ ಪ್ರಾರಂಭದಿಂದ [2][[3][ಇಪ್ಪತ್ತೈದು] ವರ್ಷಗಳು] ಮುಕ್ತಾಯವಾದ ಮೇಲೆ, ಅದರ ಮುಕ್ತಾಯಕ್ಕೆ ಮುಂಚೆ ಮಾಡಿದ ಅಥವಾ ಮಾಡದೆ ಬಿಟ್ಟ ಕಾರ್ಯಗಳಿಗೆ ಸಂಬಂಧಿಸಿದಂತೆ ಹೊರತು ಪರಿಣಾಮಕಾರಿಯಾಗಿರುವುದು ನಿಂತುಹೋಗತಕ್ಕದ್ದು."

---

1. ಸಿ.ಓ. 89ರ ಮೂಲಕ (ಹೆಚ್) ಖಂಡಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
2. ಸಿ.ಓ. 69ರ ಮೂಲಕ "ಹತ್ತು ವರ್ಷಗಳು" ಎಂಬುದಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
3. ಸಿ.ಓ. 97ರ ಮೂಲಕ "ಇಪ್ಪತ್ತು" ಎಂಬುದಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.

(j) After article 35, the following new article shall be added, namely:—

"**35A.** ***Saving of laws with respect to permanent residents and their rights.—*** Notwithstanding anything contained in this Constitution, no existing law in force in the State of Jammu and Kashmir, and no law hereafter enacted by the Legislature of the State,—

(*a*) defining the classes of persons who are, or shall be, permanent residents of the State of Jammu and Kashmir; or

(*b*) conferring on such permanent residents any special rights and privileges or imposing upon other persons any restrictions as respects—

(*i*) employment under the State Government;

(*ii*) acquisition of immovable property in the State;

(*iii*) settlement in the State; or

(*iv*) right to scholarships and such other forms of aid as the State Government may provide,

shall be void on the ground that it is inconsistent with or takes away or abridges any rights conferred on the other citizens of India by any provision of this Part.".

**(5) PART V.**

[1][(*a*) For the purposes of article 55, the population of the State of Jammu and Kashmir shall be deemed to be sixty-three lakhs.

(*b*) In article 81, for clauses (2) and (3), the following clauses shall be substituted, namely:—

"(2) For the purposes of sub-clause (*a*) of clause (1),—

(*a*) there shall be allotted to the State six seats in the House of the People;

(*b*) the State shall be divided into single member territorial constituencies by the Delimitation Commission constituted under the Delimitation Act, 1972, in accordance with such procedure as the Commission may deem fit;

(*c*) the constituencies shall, as far as practicable, be geographically compact areas, and in delimiting them regard shall be had to physical features, existing boundaries of administrative units, facilities of communication and public convenience; and

(*d*) the constituencies into which the State is divided shall not comprise the area under the occupation of Pakistan.

1. Subs. by C.O. 98, for cls. (*a*) and (*b*).

(ಜೆ) 35ನೇ ಅನುಚ್ಛೇದದ ತರುವಾಯ ಈ ಕೆಳಕಂಡ ಹೊಸ ಅನುಚ್ಛೇದವನ್ನು ಸೇರಿಸತಕ್ಕದ್ದು, ಎಂದರೆ:–

**"35ಎ. ಖಾಯಂ ನಿವಾಸಿಗಳ ಮತ್ತು ಅವರ ಹಕ್ಕುಗಳ ಬಗ್ಗೆ ಕಾನೂನುಗಳ ಉಳಿಸುವಿಕೆ.–** ಈ ಸಂವಿಧಾನದಲ್ಲಿ ಏನೇ ಒಳಗೊಂಡಿದ್ದರೂ, ಜಮ್ಮು ಮತ್ತು ಕಾಶ್ಮೀರ ರಾಜ್ಯದಲ್ಲಿ ಜಾರಿಯಲ್ಲಿರುವಂಥ ಅಸ್ತಿತ್ವದಲ್ಲಿರುವ ಯಾವುದೇ ಕಾನೂನು ಮತ್ತು ಇನ್ನು ಮುಂದೆ ರಾಜ್ಯ ವಿಧಾನಮಂಡಲವು ಅಧಿನಿಯಮಿಸುವ,–

(ಎ) ಜಮ್ಮು ಮತ್ತು ಕಾಶ್ಮೀರ ರಾಜ್ಯದ ಖಾಯಂ ನಿವಾಸಿಗಳಾಗಿರುವ ಅಥವಾ ನಿವಾಸಿಗಳಾಗಿರತಕ್ಕ ವ್ಯಕ್ತಿಗಳ ವರ್ಗಗಳನ್ನು ಪರಿಭಾಷಿಸುವ; ಅಥವಾ

(ಬಿ) ಅಂಥ ಖಾಯಂ ನಿವಾಸಿಗಳಿಗೆ, ಯಾವುವೇ ವಿಶೇಷ ಹಕ್ಕುಗಳನ್ನು ಮತ್ತು ವಿಶೇಷ ಅಧಿಕಾರಗಳನ್ನು ಪ್ರದಾನ ಮಾಡುವ; ಅಥವಾ

(i) ರಾಜ್ಯ ಸರ್ಕಾರದ ಅಧೀನದಲ್ಲಿಯ ಉದ್ಯೋಗಕ್ಕೆ;

(ii) ರಾಜ್ಯದಲ್ಲಿ ಸ್ಥಿರ ಸ್ವತ್ತನ್ನು ಆರ್ಜನೆ ಮಾಡುವುದಕ್ಕೆ;

(iii) ರಾಜ್ಯದಲ್ಲಿ ನೆಲೆಸುವುದಕ್ಕೆ; ಅಥವಾ

(iv) ವಿದ್ಯಾರ್ಥಿ ವೇತನ ಮತ್ತು ರಾಜ್ಯ ಸರ್ಕಾರವು ಒದಗಿಸಬಹುದಾದ ಅಂಥ ಇತರ ರೀತಿಯ ನೆರವಿನ ಹಕ್ಕಿಗೆ

– ಸಂಬಂಧಿಸಿದಂತೆ ಇತರ ವ್ಯಕ್ತಿಗಳ ಮೇಲೆ ಯಾವುದೇ ನಿರ್ಬಂಧಗಳನ್ನು ವಿಧಿಸುವ ಯಾವುದೇ ಕಾನೂನು, ಈ ಭಾಗದ ಯಾವುದೇ ಉಪಬಂಧದ ಮೂಲಕ ಭಾರತದ ಇತರ ನಾಗರಿಕರಿಗೆ ಪ್ರದತ್ತವಾದ ಯಾವುವೇ ಹಕ್ಕುಗಳಿಗೆ ಅದು ಅಸಂಗತವಾಗಿದೆ ಎಂಬ, ಅಥವಾ ಯಾವುವೇ ಹಕ್ಕುಗಳನ್ನು ಕಿತ್ತುಕೊಳ್ಳುತ್ತದೆ ಎಂಬ, ಅಥವಾ ಮೊಟಕುಗೊಳಿಸುತ್ತದೆ ಎಂಬ ಕಾರಣದ ಮೇಲೆ ಅನೂರ್ಜಿತವಾಗತಕ್ಕದ್ದಲ್ಲ."

**(5) ಭಾಗ V.**

[1][(ಎ) 55ನೇ ಅನುಚ್ಛೇದದ ಉದ್ದೇಶಗಳಿಗಾಗಿ ಜಮ್ಮು ಮತ್ತು ಕಾಶ್ಮೀರ ರಾಜ್ಯದ ಜನಸಂಖ್ಯೆಯನ್ನು ಅರವತ್ಮೂರು ಲಕ್ಷ ಎಂದು ಭಾವಿಸತಕ್ಕದ್ದು.

(ಬಿ) 81ನೇ ಅನುಚ್ಛೇದದಲ್ಲಿ, (2) ಮತ್ತು (3)ನೇ ಖಂಡಗಳಿಗೆ ಬದಲಾಗಿ ಕೆಳಕಂಡ ಖಂಡಗಳನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

"(2) (1)ನೇ ಖಂಡದ (ಎ) ಉಪಖಂಡದ ಉದ್ದೇಶಗಳಿಗಾಗಿ,–

(ಎ) ಲೋಕಸಭೆಯಲ್ಲಿ ಆ ರಾಜ್ಯಕ್ಕೆ ಆರು ಸ್ಥಾನಗಳನ್ನು ಹಂಚಿಕೆ ಮಾಡತಕ್ಕದ್ದು;

(ಬಿ) 1972ನೇ ಇಸವಿಯ ಸೀಮಾ ನಿರ್ಣಯ ಅಧಿನಿಯಮದ ಮೇರೆಗೆ ರಚಿತವಾದ ಸೀಮಾ ನಿರ್ಣಯ ಆಯೋಗವು, ಅದು ತಾನು ಸೂಕ್ತವೆಂದು ಭಾವಿಸಬಹುದಾದಂಥ ಪ್ರಕ್ರಿಯೆಗೆ ಅನುಸಾರವಾಗಿ, ರಾಜ್ಯವನ್ನು ಏಕ ಸದಸ್ಯ ಚುನಾವಣಾ ಕ್ಷೇತ್ರಗಳಾಗಿ ವಿಭಾಗಿಸತಕ್ಕದ್ದು;

(ಸಿ) ಚುನಾವಣಾ ಕ್ಷೇತ್ರಗಳು ಕಾರ್ಯತಃ ಸಾಧ್ಯವಾಗುವಷ್ಟರ ಮಟ್ಟಿಗೆ ಭೌಗೋಳಿಕವಾಗಿ ಹೊಂದಿಕೊಂಡಿರುವ ಪ್ರದೇಶಗಳಾಗಿರತಕ್ಕದ್ದು ಮತ್ತು ಅವುಗಳ ಸೀಮಾನಿರ್ಣಯ ಮಾಡುವಲ್ಲಿ ಭೌತಿಕ ಲಕ್ಷಣಗಳನ್ನು, ಅಸ್ತಿತ್ವದಲ್ಲಿರುವ ಆಡಳಿತ ಘಟಕಗಳ ಸರಹದ್ದುಗಳನ್ನು, ಸಂಪರ್ಕ ಸೌಲಭ್ಯಗಳನ್ನು, ಮತ್ತು ಸಾರ್ವಜನಿಕ ಅನುಕೂಲತೆಯನ್ನು ಗಮನದಲ್ಲಿಡತಕ್ಕದ್ದು; ಮತ್ತು

(ಡಿ) ರಾಜ್ಯವನ್ನು ಯಾವ ಚುನಾವಣಾ ಕ್ಷೇತ್ರಗಳಾಗಿ ಭಾಗಿಸಲಾಗುತ್ತದೆಯೋ, ಆ ಚುನಾವಣಾ ಕ್ಷೇತ್ರಗಳು ಪಾಕಿಸ್ತಾನದ ಸ್ವಾಧೀನದಲ್ಲಿರುವ ಪ್ರದೇಶವನ್ನು ಒಳಗೊಳ್ಳತಕ್ಕದ್ದಲ್ಲ.

1. ಸಿ.ಓ. 98ರ ಮೂಲಕ (ಎ) ಮತ್ತು (ಬಿ) ಖಂಡಗಳಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.

(3) Nothing in clause (2) shall affect the representation of the State in the House of the People until the dissolution of the House existing on the date of publication in the Gazette of India of the final order or orders of the Delimitation Commission relating to the delimitation of parliamentary constituencies under the Delimitation Act, 1972.

(4) (*a*) The Delimitation Commission shall associate with itself for the purpose of assisting it in its duties in respect of the State, five persons who shall be members of the House of the People representing the State.

(*b*) The persons to be so associated from the State shall be nominated by the Speaker of the House of the People having due regard to the composition of the House.

(*c*) The first nominations to be made under sub-clause (b) shall be made by the Speaker of the House of the People within two months from the commencement of the Constitution (Application to Jammu and Kashmir) Second Amendment Order, 1974.

(*d*) None of the associate members shall have a right to vote or to sign any decision of the Delimitation Commission.

(*e*) If owing to death or resignation, the office of an associate member falls vacant, it shall be filled as soon as may be practicable by the Speaker of the House of the People and in accordance with the provisions of subclauses (*a*) and (*b*).".].

[1][(*c*) In article 133, after clause (1), the following clause shall be inserted, namely:—

'(1A) The provisions of section 3 of the Constitution (Thirtieth Amendment) Act, 1972, shall apply in relation to the State of Jammu and Kashmir subject to the modification that references therein to "this Act", "the commencement of this Act", "this Act had not been passed" and "as amended by this Act" shall be construed respectively as references to "the Constitution (Application to Jammu and Kashmir) Second Amendment Order, 1974", "the commencement of the said Order", "the said Order had not been made" and "as it stands after the commencement of the said Order".'].

[2][(*d*)] In article 134, clause (2), after the words "Parliament may", the words "on the request of the Legislature of the State" shall be inserted.

[2][(*e*)] Articles 135, [3]*** and 139 shall be omitted.

[4]* * * * *

---

1. Ins. by C.O. 98
2. Cls. (*c*) and (*d*) relettered as cls. (*d*) and (*e*), *ibid.*
3. The figures "136" omitted by C.O. 60.
4. Cls. (*f*) and (*g*) omitted by C.O. 56.

(3) (2)ನೇ ಖಂಡದಲ್ಲಿ ಇರುವುದು ಯಾವುದೂ, 1972ನೇ ಇಸವಿಯ ಸೀಮಾ ನಿರ್ಣಯ ಅಧಿನಿಯಮದ ಮೇರೆಗೆ ಸಂಸತ್ ಚುನಾವಣಾ ಕ್ಷೇತ್ರಗಳ ಸೀಮಾನಿರ್ಣಯಕ್ಕೆ ಸಂಬಂಧಿಸಿದಂತೆ ಸೀಮಾ ನಿರ್ಣಯ ಆಯೋಗದ ಅಂತಿಮ ಆದೇಶವನ್ನು ಅಥವಾ ಆದೇಶಗಳನ್ನು, ಭಾರತ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಂದು ಅಸ್ತಿತ್ವದಲ್ಲಿರುವ ಸದನವು ವಿಸರ್ಜನೆಯಾಗುವವರೆಗೆ ಲೋಕಸಭೆಯಲ್ಲಿ ರಾಜ್ಯದ ಪ್ರಾತಿನಿಧ್ಯಕ್ಕೆ ಬಾಧಕವನ್ನುಂಟುಮಾಡತಕ್ಕದ್ದಲ್ಲ.

(4) (ಎ) ರಾಜ್ಯವನ್ನು ಪ್ರತಿನಿಧಿಸುವ ಲೋಕಸಭೆಯ ಸದಸ್ಯರಾಗಿರತಕ್ಕ ಐವರು ವ್ಯಕ್ತಿಗಳನ್ನು ಸೀಮಾನಿರ್ಣಯ ಆಯೋಗವು ರಾಜ್ಯಕ್ಕೆ ಸಂಬಂಧಿಸಿದಂತೆ ತನ್ನ ಕರ್ತವ್ಯಗಳಿಗೆ ನೆರವಾಗುವ ಉದ್ದೇಶಕ್ಕಾಗಿ ತನ್ನ ಜೊತೆಗೆ ಸೇರಿಸಿಕೊಳ್ಳತಕ್ಕದ್ದು.

(ಬಿ) ರಾಜ್ಯದಿಂದ ಹಾಗೆ ಸೇರಿಸಿಕೊಳ್ಳಬೇಕಾದ ವ್ಯಕ್ತಿಗಳನ್ನು ಸದನದ ರಚನೆಗೆ ಯುಕ್ತ ಗಮನ ನೀಡಿ ಲೋಕಸಭೆಯ ಅಧ್ಯಕ್ಷನು ನಾಮನಿರ್ದೇಶನ ಮಾಡತಕ್ಕದ್ದು.

(ಸಿ) ಲೋಕಸಭೆಯ ಅಧ್ಯಕ್ಷನು (ಬಿ) ಉಪಖಂಡದ ಮೇರೆಗೆ ಮಾಡಬೇಕಾದ ಮೊದಲನೆಯ ನಾಮನಿರ್ದೇಶನಗಳನ್ನು 1974ನೇ ಇಸವಿಯ ಸಂವಿಧಾನ (ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯ) ಎರಡನೇ ತಿದ್ದುಪಡಿ ಆದೇಶದ ಪ್ರಾರಂಭದಿಂದ ಎರಡು ತಿಂಗಳೊಳಗಾಗಿ ಮಾಡತಕ್ಕದ್ದು.

(ಡಿ) ಯಾವ ಸಹವರ್ತಿ ಸದಸ್ಯರಿಗೂ ಮತನೀಡುವ ಅಥವಾ ಸೀಮಾನಿರ್ಣಯ ಆಯೋಗದ ಯಾವುದೇ ತೀರ್ಮಾನಕ್ಕೆ ಸಹಿಹಾಕುವ ಹಕ್ಕು ಇರತಕ್ಕದ್ದಲ್ಲ.

(ಇ) ಸಹವರ್ತಿ ಸದಸ್ಯನ ಪದವು ಮರಣದ ಅಥವಾ ರಾಜೀನಾಮೆಯ ಕಾರಣದಿಂದಾಗಿ ಖಾಲಿಯಾದರೆ, ಕಾರ್ಯ ಸಾಧ್ಯವಾದಷ್ಟು ಬೇಗನೆ ಲೋಕಸಭಾಧ್ಯಕ್ಷನು (ಎ) ಮತ್ತು (ಬಿ) ಉಪಖಂಡಗಳ ಉಪಬಂಧಗಳಿಗೆ ಅನುಸಾರವಾಗಿ ಅದನ್ನು ತುಂಬತಕ್ಕದ್ದು".]

[1][(ಸಿ) 133ನೇ ಅನುಚ್ಛೇದದಲ್ಲಿ, (1)ನೇ ಖಂಡದ ತರುವಾಯ, ಈ ಕೆಳಕಂಡ ಖಂಡವನ್ನು ಸೇರಿಸತಕ್ಕದ್ದು, ಎಂದರೆ:-

'(1ಎ) 1972ನೇ ಇಸವಿಯ ಸಂವಿಧಾನ (ಮೂವತ್ತನೆಯ ತಿದ್ದುಪಡಿ) ಅಧಿನಿಯಮದ 3ನೇ ಪ್ರಕರಣದ ಉಪಬಂಧಗಳು, ಅದರಲ್ಲಿ "ಈ ಅಧಿನಿಯಮ", "ಈ ಅಧಿನಿಯಮದ ಪ್ರಾರಂಭ", "ಈ ಅಧಿನಿಯಮವು ಅಂಗೀಕೃತವಾಗಿರದಿದ್ದರೆ" ಮತ್ತು "ಈ ಅಧಿನಿಯಮದ ಮೂಲಕ ತಿದ್ದುಪಡಿಯಾದಂತೆ" ಎಂಬ ಪದಾವಳಿಗಳಿಗೆ ಮಾಡಿದ ಉಲ್ಲೇಖಗಳನ್ನು ಅನುಕ್ರಮವಾಗಿ "1974ನೇ ಇಸವಿಯ ಸಂವಿಧಾನ (ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯ) ಎರಡನೇ ತಿದ್ದುಪಡಿ ಆದೇಶ", "ಸದರಿ ಆದೇಶದ ಪ್ರಾರಂಭ", "ಸದರಿ ಆದೇಶವನ್ನು ಮಾಡಿರದಿದ್ದರೆ" ಮತ್ತು "ಸದರಿ ಆದೇಶದ ಪ್ರಾರಂಭದ ತರುವಾಯ ಇದ್ದಂತೆ" ಎಂಬ ಪದಾವಳಿಗಳಿಗೆ ಮಾಡಿದ ಉಲ್ಲೇಖಗಳಾಗಿ ಅರ್ಥೈಸತಕ್ಕದ್ದು ಎಂಬ ಮಾರ್ಪಾಟುಗಳಿಗೆ ಒಳಪಟ್ಟು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಸಂಬಂಧಿಸಿದಂತೆ ಅನ್ವಯವಾಗತಕ್ಕದ್ದು.']

[2][(ಡಿ)] 134ನೇ ಅನುಚ್ಛೇದದ (2)ನೇ ಖಂಡದಲ್ಲಿ "ಸಂಸತ್ತು" ಎಂಬ ಪದದ ತರುವಾಯ "ರಾಜ್ಯ ವಿಧಾನಮಂಡಲದ ಕೋರಿಕೆಯ ಮೇರೆಗೆ" ಎಂಬ ಪದಗಳನ್ನು ಸೇರಿಸತಕ್ಕದ್ದು.

[2][(ಇ)] 135ನೇ [3]* * *ಅನುಚ್ಛೇದವನ್ನು ಮತ್ತು 139ನೇ ಅನುಚ್ಛೇದವನ್ನು ಬಿಟ್ಟುಬಿಡತಕ್ಕದ್ದು.

[4]* * * * *

1. ಸಿ.ಓ. 98ರ ಮೂಲಕ ಸೇರಿಸಲಾಗಿದೆ.
2. ಸಿ.ಓ. 98ರ ಮೂಲಕ (ಸಿ) ಮತ್ತು (ಡಿ) ಖಂಡಗಳಿಗೆ (ಡಿ) ಮತ್ತು (ಇ) ಖಂಡಗಳೆಂದು ಪುನರ್ ಅಕ್ಷರ ನೀಡಲಾಗಿದೆ.
3. ಸಿ.ಓ. 60ರ ಮೂಲಕ "136" ಎಂಬ ಅಂಕಿಗಳನ್ನು ಬಿಟ್ಟುಬಿಡಲಾಗಿದೆ.
4. ಸಿ.ಓ. 56ರ ಮೂಲಕ (ಎಫ್) ಮತ್ತು (ಜಿ) ಖಂಡಗಳನ್ನು ಬಿಟ್ಟುಬಿಡಲಾಗಿದೆ.

**[1][(5A) PART VI.**

[2][(*a*) Articles 153 to 217, article 219, article 221, articles 223, 224, 224A and 225 and articles 227 to 237 shall be omitted.]

(*b*) In article 220, references to the commencement of the Constitution shall be construed as references to the commencement of the Constitution (Application to Jammu and Kashmir) Amendment Order, 1960.

[3][(*c*) In article 222, after clause (1), the following new clause shall be inserted, namely:—

"(1A) Every such transfer from the High Court of Jammu and Kashmir or to that High Court shall be made after consultation with the Governor.".]]

**(6) PART XI.**

[4][(*a*) In article 246, for the words, brackets and figures "clauses (2) and (3)" occurring in clause (1), the word, brackets and figure "clause (2)" shall be substituted, and the words, brackets and figure "Notwithstanding anything in clause (3)," occurring in clause (2) and the whole of clauses (3) and (4) shall be omitted.]

[5][6][(*b*) For article 248, the following article shall be substituted, namely:—

"248. *Residuary powers of legislation.*—Parliament has exclusive power to make any law with respect to—

[7][(*a*) prevention of activities involving terrorist acts directed towards overawing the Government as by law established or striking terror in the people or any section of the people or alienating any section of the people or adversely affecting the harmony amongst different sections of the people;]

[8][(*aa*)] [9][prevention of other activities] directed towards disclaiming, questioning or disrupting the sovereignty and territorial integrity of India or bringing about cession of a part of the territory of India or secession of a part of the territory of India from the Union or causing insult to the Indian National Flag, the Indian National Anthem and this Constitution; and

(*b*) taxes on—

(*i*) foreign travel by sea or air;

(*ii*) inland air travel;

(*iii*) postal articles, including money orders, phono-grams and telegrams.".

---

1. Ins. by C.O. 60 (w.e.f. 26-1-1960).
2. Subs. by C.O. 89, for cl. (*a*).
3. Subs. by C.O. 74, for cl. (*c*) (w.e.f. 24-11-1965).
4. Subs. by C.O. 66, for cl. (*a*).
5. Cls. (*b*) and (*bb*) subs. by C.O. 85, for original cl. (*b*).
6. Subs. by C.O. 93, for cl. (*b*).
7. Ins. by C.O. 122.
8. Cl. (*a*) relettered as cl. (*aa*), *ibid.*
9. Subs., *ibid.*, for "prevention of activities".

[1][(5ಎ) **ಭಾಗ VI.**

[2][(ಎ) 153 ರಿಂದ 217ರ ವರೆಗಿನ ಅನುಚ್ಛೇದಗಳನ್ನು, 219ನೇ ಅನುಚ್ಛೇದವನ್ನು, 221ನೇ ಅನುಚ್ಛೇದವನ್ನು, 223, 224, 224ಎ ಮತ್ತು 225ನೇ ಅನುಚ್ಛೇದಗಳನ್ನು ಮತ್ತು 227 ರಿಂದ 237ರ ವರೆಗಿನ ಅನುಚ್ಛೇದಗಳನ್ನು ಬಿಟ್ಟುಬಿಡತಕ್ಕದ್ದು.]

(ಬಿ) 220ನೇ ಅನುಚ್ಛೇದದಲ್ಲಿ, ಸಂವಿಧಾನದ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳನ್ನು 1960ರ ಸಂವಿಧಾನ (ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯ) ತಿದ್ದುಪಡಿ ಆದೇಶಕ್ಕೆ ಮಾಡಿದ ಉಲ್ಲೇಖಗಳೆಂಬಂತೆ ಅರ್ಥೈಸತಕ್ಕದ್ದು.

[3][(ಸಿ) 222ನೇ ಅನುಚ್ಛೇದದಲ್ಲಿ (1)ನೇ ಖಂಡದ ತರುವಾಯ, ಈ ಕೆಳಕಂಡ ಹೊಸ ಖಂಡವನ್ನು ಸೇರಿಸತಕ್ಕದ್ದು, ಎಂದರೆ:-

"(1ಎ) ಜಮ್ಮು ಮತ್ತು ಕಾಶ್ಮೀರದ ಉಚ್ಚ ನ್ಯಾಯಾಲಯದಿಂದ ಅಥವಾ ಆ ಉಚ್ಚ ನ್ಯಾಯಾಲಯಕ್ಕೆ ಮಾಡುವ ಅಂಥ ಪ್ರತಿಯೊಂದು ವರ್ಗಾವಣೆಯನ್ನು ರಾಜ್ಯಪಾಲನೊಡನೆ ಸಮಾಲೋಚನೆ ಮಾಡಿದ ತರುವಾಯ ಮಾಡತಕ್ಕದ್ದು."]]

**(6) ಭಾಗ XI.**

[4][(ಎ) 246ನೇ ಅನುಚ್ಛೇದದಲ್ಲಿ (1)ನೇ ಖಂಡದಲ್ಲಿ ಬರುವ "(2) ಮತ್ತು (3)ನೇ ಖಂಡಗಳಲ್ಲಿ" ಎಂಬ ಪದಗಳು, ಆವರಣಗಳು, ಮತ್ತು ಅಂಕಿಗಳಿಗೆ ಬದಲಾಗಿ "(2)ನೇ ಖಂಡದಲ್ಲಿ" ಎಂಬ ಪದಗಳನ್ನು, ಆವರಣಗಳನ್ನು ಮತ್ತು ಅಂಕಿಯನ್ನು ಪ್ರತ್ಯಾಯೋಜಿಸತಕ್ಕದ್ದು ಮತ್ತು (2)ನೇ ಖಂಡದಲ್ಲಿ ಬರುವ "(3)ನೇ ಖಂಡದಲ್ಲಿ ಏನೇ ಇದ್ದರೂ" ಎಂಬ ಪದಗಳನ್ನು, ಆವರಣಗಳನ್ನು ಮತ್ತು ಅಂಕಿಯನ್ನು ಹಾಗೂ (3) ಮತ್ತು (4)ನೇ ಖಂಡಗಳನ್ನು ಸಂಪೂರ್ಣವಾಗಿ ಬಿಟ್ಟುಬಿಡತಕ್ಕದ್ದು.]

[5][[6][(ಬಿ) 248ನೇ ಅನುಚ್ಛೇದಕ್ಕೆ ಬದಲಾಗಿ ಕೆಳಕಂಡ ಅನುಚ್ಛೇದವನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

**"248. ಶಾಸನ ರಚನೆಯ ಉಳಿಕೆ ಅಧಿಕಾರಗಳು.**- ಸಂಸತ್ತು-

[7][(ಎ) ಕಾನೂನಿನ ಮೂಲಕ ಸ್ಥಾಪಿತವಾದ ಸರ್ಕಾರಕ್ಕೆ ಭಯಹುಟ್ಟಿಸುವ ಉದ್ದೇಶವುಳ್ಳ ಭಯೋತ್ಪಾದಕ ಕೃತ್ಯಗಳನ್ನು ಒಳಗೊಂಡ ಅಥವಾ ಜನರಲ್ಲಿ ಅಥವಾ ಜನರ ಯಾವುದೇ ವರ್ಗದಲ್ಲಿ ಭಯವನ್ನು ಉಂಟುಮಾಡುವ ಅಥವಾ ಜನರ ಯಾವುದೇ ವರ್ಗವನ್ನು ದೂರ ಮಾಡುವ ಅಥವಾ ಜನರ ವಿವಿಧ ವರ್ಗಗಳ ನಡುವೆ ಇರುವ ಸಾಮರಸ್ಯಕ್ಕೆ ಪ್ರತಿಕೂಲ ಪರಿಣಾಮ ಉಂಟುಮಾಡುವ ಚಟುವಟಿಕೆಗಳನ್ನು ಪ್ರತಿಬಂಧಿಸುವುದಕ್ಕೆ;]

[8][(ಎಎ)] ಭಾರತದ ಸಾರ್ವಭೌಮತ್ವವನ್ನು ಮತ್ತು ಅದರ ರಾಜ್ಯಕ್ಷೇತ್ರೀಯ ಅಖಂಡತೆಯನ್ನು ನಿರಾಕರಿಸುವ, ಪ್ರಶ್ನಿಸುವ, ಅಥವಾ ವಿಚ್ಛಿನ್ನಗೊಳಿಸುವ ಉದ್ದೇಶದ ಅಥವಾ ಭಾರತದ ರಾಜ್ಯಕ್ಷೇತ್ರದ ಒಂದು ಭಾಗವನ್ನು ಬಿಟ್ಟುಕೊಡುವ ಅಥವಾ ಒಕ್ಕೂಟದಿಂದ ಭಾರತದ ರಾಜ್ಯಕ್ಷೇತ್ರದ ಒಂದು ಭಾಗವು ಬೇರೆಯಾಗುವಂತೆ ಮಾಡುವ ಅಥವಾ ಭಾರತದ ರಾಷ್ಟ್ರಧ್ವಜಕ್ಕೆ, ಭಾರತದ ರಾಷ್ಟ್ರಗೀತೆಗೆ ಮತ್ತು ಈ ಸಂವಿಧಾನಕ್ಕೆ ಅಪಮಾನವುಂಟು ಮಾಡುವ ಉದ್ದೇಶದ [9][ಚಟುವಟಿಕೆಗಳನ್ನು ಪ್ರತಿಬಂಧಿಸುವುದಕ್ಕೆ;] ಮತ್ತು

(ಬಿ) (i) ಸಮುದ್ರ ಅಥವಾ ವಿಮಾನದ ಮೂಲಕ ವಿದೇಶಿ ಪ್ರಯಾಣದ;

(ii) ಅಂತರ್ದೇಶೀಯ ವಿಮಾನ ಪ್ರಯಾಣದ;

(iii) ಮನಿಯಾರ್ಡರುಗಳು, ಫೋನೋಗ್ರಾಮುಗಳು ಮತ್ತು ಟೆಲಿಗ್ರಾಮುಗಳನ್ನು ಒಳಗೊಂಡು ಅಂಚೆ ವಸ್ತುಗಳ ಮೇಲಿನ ತೆರಿಗೆಗಳಿಗೆ

- ಸಂಬಂಧಪಟ್ಟಂತೆ ಯಾವುದೇ ಕಾನೂನನ್ನು ರಚಿಸಲು ಅನನ್ಯ ಅಧಿಕಾರವನ್ನು ಹೊಂದಿರುತ್ತದೆ."

1. ಸಿ.ಓ. 60ರ ಮೂಲಕ (26.1.1960 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.
2. ಸಿ.ಓ. 89ರ ಮೂಲಕ (ಎ) ಖಂಡಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
3. ಸಿ.ಓ. 74ರ ಮೂಲಕ (ಸಿ) ಖಂಡಕ್ಕೆ ಬದಲಾಗಿ (24.11.1965 ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಲಾಗಿದೆ.
4. ಸಿ.ಓ. 66ರ ಮೂಲಕ (ಎ) ಖಂಡಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
5. ಸಿ.ಓ. 85ರ ಮೂಲಕ ಮೂಲ (ಬಿ) ಖಂಡಕ್ಕೆ ಬದಲಾಗಿ (ಬಿ) ಮತ್ತು (ಬಿಬಿ) ಖಂಡಗಳನ್ನು ಪ್ರತ್ಯಾಯೋಜಿಸಲಾಗಿದೆ.
6. ಸಿ.ಓ. 93ರ ಮೂಲಕ (ಬಿ) ಖಂಡಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
7. ಸಿ.ಓ. 122ರ ಮೂಲಕ ಸೇರಿಸಲಾಗಿದೆ.
8. ಸಿ.ಓ. 122ರ ಮೂಲಕ (ಎ) ಖಂಡಕ್ಕೆ (ಎಎ) ಖಂಡವೆಂದು ಪುನರ್ ಅಕ್ಷರ ನೀಡಲಾಗಿದೆ.
9. ಸಿ.ಓ. 122ರ ಮೂಲಕ "ಚಟುವಟಿಕೆಗಳನ್ನು ಪ್ರತಿಬಂಧಿಸುವುದಕ್ಕೆ" ಎಂಬುದಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.

[1][***Explanation.***— In this article, "terrorist act" means any act or thing by using bombs, dynamite or other explosive substances or inflammable substances or firearms or other lethal weapons or poisons or noxious gases or other chemicals or any other substances (whether biological or otherwise) of a hazardous nature.]

[2][(*bb*) In article 249, in clause (1), for the words "any matter enumerated in the State List specified in the resolution", the words "any matter specified in the resolution, being a matter which is not enumerated in the Union List or in the Concurrent List" shall be substituted.]]

(*c*) In article 250, for the words "to any of the matters enumerated in the State List", the words "also to matters not enumerated in the Union List" shall be substituted.

[3]* * * * *

(*e*) To article 253, the following proviso shall be added, namely:—

"Provided that after the commencement of the Constitution (Application to Jammu and Kashmir) Order, 1954, no decision affecting the disposition of the State of Jammu and Kashmir shall be made by the Government of India without the consent of the Government of that State.".

[4]* * * * *

[5][(*f*)] Article 255 shall be omitted.

[5][(*g*)] Article 256 shall be re-numbered as clause (1) of that article, and the following new clause shall be added thereto, namely:—

"(2) The State of Jammu and Kashmir shall so execise its executive power as to facilitate the discharge by the Union of its duties and responsibilities under the Constitution in relation to that State; and in particular, the said State shall, if so required by the Union, acquire or requisition property on behalf and at the expense of the Union, or if the property belongs to the State, transfer it to the Union on such terms as may be agreed, or in default of agreement, as may be determined by an arbitrator appointed by the Chief Justice of India.".

[6]* * * * *

[7][(*h*)] In clause (2) of article 261, the words "made by Parliament" shall be omitted.

---

1. Ins. by C.O. 122.
2. Subs. by C.O. 129, for cl. (*bb*).
3. Cl. (*d*) omitted, *ibid.*
4. Cl. (*f*) omitted by C.O. 66.
5. Cl. (*g*) and (*h*) relettered as cls. (*f*) and (*g*), *ibid.*
6. Cl. (*i*) omitted by C.O. 56.
7. Cl. (*j*) relettered as cl. (*i*) by C.O. 56 and again relettered as cl. (h) by C.O. 66.

[1][**ವಿವರಣೆ.**- ಈ ಅನುಚ್ಛೇದದಲ್ಲಿ, "ಭಯೋತ್ಪಾದಕ ಕೃತ್ಯ" ಎಂದರೆ ಬಾಂಬುಗಳನ್ನು, ಸಿಡಿಮದ್ದುಗಳನ್ನು ಅಥವಾ ಇತರ ಸ್ಫೋಟಕ ವಸ್ತುಗಳನ್ನು ಅಥವಾ ಸುಲಭವಾಗಿ ಬೆಂಕಿ ಹತ್ತಿಕೊಳ್ಳುವ ವಸ್ತುಗಳನ್ನು ಅಥವಾ ಬಂದೂಕುಗಳನ್ನು ಅಥವಾ ಇತರ ಮಾರಕ ಅಸ್ತ್ರಗಳನ್ನು ಅಥವಾ ವಿಷಕಾರಿ ಅಥವಾ ಹಾನಿಕಾರಕ ಅನಿಲಗಳನ್ನು ಅಥವಾ ಅಪಾಯವನ್ನುಂಟುಮಾಡುವ ಸ್ವರೂಪದ ಇತರ ರಾಸಾಯನಿಕಗಳನ್ನು ಅಥವಾ ಯಾವುವೇ ಇತರ ವಸ್ತುಗಳನ್ನು (ಅದು ಜೈವಿಕದ್ದಾಗಿರಲಿ ಅಥವಾ ಇತರೆ ರೀತಿಯದ್ದಾಗಿರಲಿ) ಬಳಸುವ ಮೂಲಕ ಮಾಡಿದ ಕೃತ್ಯ ಅಥವಾ ಕಾರ್ಯ.]

[2][(ಬಿಬಿ) 249ನೇ ಅನುಚ್ಛೇದದಲ್ಲಿ, (1)ನೇ ಖಂಡದಲ್ಲಿ "ನಿರ್ಣಯದಲ್ಲಿ ನಿರ್ದಿಷ್ಟಪಡಿಸಿರುವ ರಾಜ್ಯ ಪಟ್ಟಿಯಲ್ಲಿ ನಮೂದಿಸಿರುವ ಯಾವುದೇ ವಿಷಯಕ್ಕೆ" ಎಂಬ ಪದಗಳಿಗೆ ಬದಲಾಗಿ, "ಒಕ್ಕೂಟ ಪಟ್ಟಿಯಲ್ಲಿ ಅಥವಾ ಸಮವರ್ತಿ ಪಟ್ಟಿಯಲ್ಲಿ ನಮೂದಿಸಿರದ ವಿಷಯವಾಗಿದ್ದು, ನಿರ್ಣಯದಲ್ಲಿ ನಿರ್ದಿಷ್ಟಪಡಿಸಿರುವ ಯಾವುದೇ ವಿಷಯಕ್ಕೆ" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.]

(ಸಿ) 250ನೇ ಅನುಚ್ಛೇದದಲ್ಲಿ, "ರಾಜ್ಯಪಟ್ಟಿಯಲ್ಲಿ ನಮೂದಿಸಿದ ವಿಷಯಗಳ ಪೈಕಿ ಯಾವುದೇ ವಿಷಯದ ಬಗ್ಗೆ" ಎಂಬ ಪದಗಳಿಗೆ ಬದಲಾಗಿ "ಒಕ್ಕೂಟ ಪಟ್ಟಿಯಲ್ಲಿ ನಮೂದಿಸಿರದ ವಿಷಯಗಳ ಬಗ್ಗೆ ಸಹ" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

[3] * * * * * *

(ಇ) 253ನೇ ಅನುಚ್ಛೇದಕ್ಕೆ, ಕೆಳಕಂಡ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

"ಪರಂತು, 1954ರ ಸಂವಿಧಾನ (ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯ) ಆದೇಶವು ಪ್ರಾರಂಭವಾದ ನಂತರ ಜಮ್ಮು ಮತ್ತು ಕಾಶ್ಮೀರ ರಾಜ್ಯದ ವ್ಯವಸ್ಥೆಗೆ ಬಾಧಕವನ್ನುಂಟು ಮಾಡುವ ಯಾವುದೇ ತೀರ್ಮಾನವನ್ನು ಭಾರತ ಸರ್ಕಾರವು ಆ ರಾಜ್ಯ ಸರ್ಕಾರದ ಸಮ್ಮತಿಯಿಲ್ಲದೆ ಕೈಗೊಳ್ಳತಕ್ಕದ್ದಲ್ಲ."

[4] * * * * * *

[5][(ಎಫ್)] 255ನೇ ಅನುಚ್ಛೇದವನ್ನು ಬಿಟ್ಟುಬಿಡತಕ್ಕದ್ದು.

[5][(ಜಿ) 256ನೇ ಅನುಚ್ಛೇದಕ್ಕೆ ಆ ಅನುಚ್ಛೇದದ (1)ನೇ ಖಂಡವೆಂದು ಪುನರ್ ಸಂಖ್ಯೆ ನೀಡತಕ್ಕದ್ದು, ಮತ್ತು ಈ ಕೆಳಕಂಡ ಹೊಸ ಖಂಡವನ್ನು ಅದಕ್ಕೆ ಸೇರಿಸತಕ್ಕದ್ದು, ಎಂದರೆ:-

"(2) ಜಮ್ಮು ಮತ್ತು ಕಾಶ್ಮೀರ ರಾಜ್ಯವು ತನ್ನ ಕಾರ್ಯಾಂಗ ಅಧಿಕಾರವನ್ನು ಒಕ್ಕೂಟವು ಆ ರಾಜ್ಯಕ್ಕೆ ಸಂಬಂಧಪಟ್ಟಂತೆ ಸಂವಿಧಾನದ ಮೇರೆಗಿನ ಕರ್ತವ್ಯಗಳನ್ನು ಮತ್ತು ಜವಾಬ್ದಾರಿಗಳನ್ನು ನಿರ್ವಹಿಸಲು ಅನುಕೂಲವಾಗುವ ಹಾಗೆ ಚಲಾಯಿಸತಕ್ಕದ್ದು, ಮತ್ತು ವಿಶೇಷವಾಗಿ ಆ ರಾಜ್ಯವು, ಒಕ್ಕೂಟದ ಪರವಾಗಿ ಮತ್ತು ಅದರ ವೆಚ್ಚದಲ್ಲಿ ಸ್ವತ್ತನ್ನು ಆರ್ಜಿಸತಕ್ಕದ್ದು ಅಥವಾ ಕಡ್ಡಾಯವಾಗಿ ಕೋರತಕ್ಕದ್ದು ಅಥವಾ ಆ ಸ್ವತ್ತು ರಾಜ್ಯಕ್ಕೆ ಸೇರಿದ್ದಾಗಿದ್ದರೆ ಅದನ್ನು ಒಪ್ಪಿಗೆಯಾಗಬಹುದಾದಂಥ ನಿಬಂಧನೆಗಳ ಮೇಲೆ, ಅಥವಾ ಹಾಗೆ ಒಪ್ಪಿಗೆಯಾಗದಿದ್ದಲ್ಲಿ, ಭಾರತದ ಮುಖ್ಯ ನ್ಯಾಯಮೂರ್ತಿಯು ನೇಮಿಸಿದ ಮಧ್ಯಸ್ಥಗಾರನು ನಿರ್ಧರಿಸಬಹುದಾದಂತೆ ಒಕ್ಕೂಟಕ್ಕೆ ವರ್ಗಾಯಿಸತಕ್ಕದ್ದು ಎಂದು ಒಕ್ಕೂಟವು ಅಗತ್ಯಪಡಿಸಿದರೆ ಹಾಗೆ ಮಾಡತಕ್ಕದ್ದು."

[6] * * * * * *

[7][(ಹೆಚ್)] 261ನೇ ಅನುಚ್ಛೇದದ (2)ನೇ ಖಂಡದಲ್ಲಿ "ಸಂಸತ್ತು ರಚಿಸಿದ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

---

1. ಸಿ.ಓ. 122ರ ಮೂಲಕ ಸೇರಿಸಲಾಗಿದೆ.
2. ಸಿ.ಓ. 129ರ ಮೂಲಕ (ಬಿಬಿ) ಖಂಡಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
3. ಸಿ.ಓ. 129ರ ಮೂಲಕ (ಡಿ) ಖಂಡವನ್ನು ಬಿಟ್ಟುಬಿಡಲಾಗಿದೆ.
4. ಸಿ.ಓ. 66ರ ಮೂಲಕ (ಎಫ್) ಖಂಡವನ್ನು ಬಿಟ್ಟುಬಿಡಲಾಗಿದೆ.
5. ಸಿ.ಓ. 66ರ ಮೂಲಕ (ಜಿ) ಮತ್ತು (ಹೆಚ್) ಖಂಡಗಳಿಗೆ (ಎಫ್) ಮತ್ತು (ಜಿ) ಖಂಡಗಳೆಂದು ಪುನರ್ ಅಕ್ಷರ ನೀಡಲಾಗಿದೆ.
6. ಸಿ.ಓ. 56ರ ಮೂಲಕ (ಐ) ಖಂಡವನ್ನು ಬಿಟ್ಟುಬಿಡಲಾಗಿದೆ.
7. ಸಿ.ಓ. 56ರ ಮೂಲಕ (ಜೆ) ಖಂಡಕ್ಕೆ (ಐ) ಖಂಡವೆಂದು ಪುನರ್ ಅಕ್ಷರ ನೀಡಲಾಗಿದೆ ಮತ್ತು ಸಿ.ಓ. 66ರ ಮೂಲಕ (ಹೆಚ್) ಖಂಡವೆಂದು ಪುನಃ ಪುನರ್ ಅಕ್ಷರ ನೀಡಲಾಗಿದೆ.

**(7) PART XII.**

[1]* * * * *

[2](*a*)] Clause (2) of article 267, article 273, clause (2) of article 283 [9][and article 290] shall be omitted.

[2](*b*)] In articles 266, 282, 284, 298, 299 and 300, references to the State or States shall be construed as not including references to the State of Jammu and Kashmir.

[2](*c*)] In articles 277 and 295, references to the commencement of the Constitution shall be construed as references to the commencement of this order.

**(8) PART XIII.**

[4]*** In clause (1) of article 303, the words "by virtue of any entry relating to trade and commerce in any of the Lists in the Seventh Schedule" shall be omitted.

[4]* * * * *

**(9) PART XIV.**

[5][In article 312, after the words "the States", the brackets and words "(including the State of Jammu and Kashmir)" shall be inserted.]

**[6][(10) PART XV.**

(*a*) In clause (1) of article 324, the reference to the Constitution shall, in relation to elections to either House of the Legislature of Jammu and Kashmir, be construed as a reference to the Constitution of Jammu and Kashmir.

[7][(*b*) In articles 325, 326, 327 and 329, the reference to a State shall be construed as not including a reference to the State of Jammu and Kashmir.

(*c*) Article 328 shall be omitted.

(*d*) In article 329, the words and figures "or article 328" shall be omitted.]]

[8][(*e*) In article 329A, clauses (4) and (5) shall be omitted.

---

1. Cls. (*a*) and (*b*) inserted by C.O. 55 have been omitted by C.O. 56.
2. Cls. (*a*), (b) and (*c*) [relettered as cls. (*c*), (*d*) and (*e*) respectively by C.O. 55] have again been relettered as cls. (*a*), (*b*) and (*c*) respectively by C.O. 56.
3. Subs. by C.O. 94, for "articles 290 and 291".
4. Brackets and letter '(*a*)' and cl. (*b*) omitted by C.O. 56.
5. Subs., *ibid.*, for the previous modification.
6. Subs. by C.O. 60, for sub-paragraph (10) (w.e.f. 26-1-1960).
7. Subs. by C.O. 75 for cls. (*b*) and (*c*).
8. Ins. by C.O. 105.

**(7) ಭಾಗ XII.**

[1]* * * * * *

[2][(ಎ)] 267ನೇ ಅನುಚ್ಛೇದದ (2)ನೇ ಖಂಡವನ್ನು, 273ನೇ ಅನುಚ್ಛೇದವನ್ನು, 283ನೇ ಅನುಚ್ಛೇದದ (2)ನೇ ಖಂಡವನ್ನು [3][ಮತ್ತು 290ನೇ ಅನುಚ್ಛೇದವನ್ನು] ಬಿಟ್ಟುಬಿಡತಕ್ಕದ್ದು.

[2][(ಬಿ)] 266ನೇ, 282ನೇ, 284ನೇ, 298ನೇ, 299ನೇ ಮತ್ತು 300ನೇ ಅನುಚ್ಛೇದಗಳಲ್ಲಿ ರಾಜ್ಯಕ್ಕೆ ಅಥವಾ ರಾಜ್ಯಗಳಿಗೆ ಮಾಡಿದ ಉಲ್ಲೇಖಗಳು, ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಮಾಡಿದ ಉಲ್ಲೇಖಗಳನ್ನು ಒಳಗೊಳ್ಳುವುದಿಲ್ಲವೆಂದು ಅರ್ಥೈಸತಕ್ಕದ್ದು.

[2][(ಸಿ)] 277ನೇ ಮತ್ತು 295ನೇ ಅನುಚ್ಛೇದಗಳಲ್ಲಿ ಸಂವಿಧಾನದ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳನ್ನು ಈ ಆದೇಶದ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು.

**(8) ಭಾಗ XIII.**

303ನೇ ಅನುಚ್ಛೇದದ (1)ನೇ ಖಂಡದಲ್ಲಿ [4]*** "ಏಳನೇ ಅನುಸೂಚಿಯ ಯಾವುದೇ ಪಟ್ಟಿಯಲ್ಲಿ ವ್ಯಾಪಾರಕ್ಕೆ ಅಥವಾ ವಾಣಿಜ್ಯಕ್ಕೆ ಸಂಬಂಧಿಸಿದಂತೆ ಇರುವ ಯಾವುದೇ ನಮೂದಿನ ಕಾರಣದಿಂದ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

[4]* * * * * *

**(9) ಭಾಗ XIV.**

[5][312ನೇ ಅನುಚ್ಛೇದದಲ್ಲಿ "ರಾಜ್ಯಗಳಿಗೆ" ಎಂಬ ಪದದ ತರುವಾಯ, "(ಜಮ್ಮು ಮತ್ತು ಕಾಶ್ಮೀರ ರಾಜ್ಯವನ್ನು ಒಳಗೊಂಡು)" ಎಂಬ ಆವರಣಗಳನ್ನು ಮತ್ತು ಪದಗಳನ್ನು ಸೇರಿಸತಕ್ಕದ್ದು.]

[6][**(10) ಭಾಗ XV.**

(ಎ) 324ನೇ ಅನುಚ್ಛೇದದ (1)ನೇ ಖಂಡದಲ್ಲಿ ಸಂವಿಧಾನಕ್ಕೆ ಮಾಡಿದ ಉಲ್ಲೇಖವನ್ನು ಜಮ್ಮು ಮತ್ತು ಕಾಶ್ಮೀರ ರಾಜ್ಯದ ವಿಧಾನಮಂಡಲದ ಎರಡೂ ಸದನಗಳಿಗೆ ನಡೆಸಲಾಗುವ ಚುನಾವಣೆಗಳಿಗೆ ಸಂಬಂಧಪಟ್ಟಂತೆ, ಜಮ್ಮು ಮತ್ತು ಕಾಶ್ಮೀರದ ಸಂವಿಧಾನಕ್ಕೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು.

[7][(ಬಿ) 25ನೇ, 326ನೇ, 327ನೇ ಮತ್ತು 329ನೇ ಅನುಚ್ಛೇದಗಳಲ್ಲಿ ಒಂದು ರಾಜ್ಯಕ್ಕೆ ಮಾಡಿದ ಉಲ್ಲೇಖವು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಮಾಡಿದ ಉಲ್ಲೇಖವನ್ನು ಒಳಗೊಳ್ಳುವುದಿಲ್ಲವೆಂದು ಅರ್ಥೈಸತಕ್ಕದ್ದು.

(ಸಿ) 328ನೇ ಅನುಚ್ಛೇದವನ್ನು ಬಿಟ್ಟುಬಿಡತಕ್ಕದ್ದು.

(ಡಿ) 329ನೇ ಅನುಚ್ಛೇದದಲ್ಲಿ "ಅಥವಾ 328ನೇ ಅನುಚ್ಛೇದದ" ಎಂಬ ಪದಗಳನ್ನು ಮತ್ತು ಅಂಕಿಗಳನ್ನು ಬಿಟ್ಟುಬಿಡತಕ್ಕದ್ದು.]]

[8][(ಇ) 329ಎ ಅನುಚ್ಛೇದದಲ್ಲಿ, (4)ನೇ ಮತ್ತು (5)ನೇ ಖಂಡಗಳನ್ನು ಬಿಟ್ಟುಬಿಡತಕ್ಕದ್ದು.

1. ಸಿ.ಓ. 55ರ ಮೂಲಕ (ಎ) ಮತ್ತು (ಬಿ) ಖಂಡಗಳಿಗೆ ಸೇರಿಸಲಾಗಿದ್ದು, ಸಿ.ಓ. 56ರ ಮೂಲಕ ಬಿಟ್ಟುಬಿಡಲಾಗಿದೆ.
2. ಸಿ.ಓ. 55ರ ಮೂಲಕ (ಎ), (ಬಿ) ಮತ್ತು (ಸಿ) ಖಂಡಗಳಿಗೆ ಅನುಕ್ರಮವಾಗಿ (ಸಿ), (ಡಿ) ಮತ್ತು (ಇ) ಖಂಡಗಳೆಂದು ಪುನರ್ ಅಕ್ಷರ ನೀಡಲಾಗಿದ್ದು, ಸಿ.ಓ.56ರ ಮೂಲಕ ಅನುಕ್ರಮವಾಗಿ (ಎ), (ಬಿ) ಮತ್ತು (ಸಿ) ಖಂಡಗಳಿಗೆ ಪುನರ್ ಅಕ್ಷರ ನೀಡಲಾಗಿದೆ.
3. ಸಿ.ಓ. 94ರ ಮೂಲಕ "290 ಮತ್ತು 291ನೇ ಅನುಚ್ಛೇದಗಳ" ಎಂಬುದಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
4. ಸಿ.ಓ. 56ರ ಮೂಲಕ "(ಎ)" ಆವರಣಗಳನ್ನು ಮತ್ತು ಅಕ್ಷರವನ್ನು ಮತ್ತು (ಬಿ) ಖಂಡವನ್ನು ಬಿಟ್ಟುಬಿಡಲಾಗಿದೆ.
5. ಸಿ.ಓ. 56ರ ಮೂಲಕ ಹಿಂದಿನ ಮಾರ್ಪಾಡಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
6. ಸಿ.ಓ. 60ರ ಮೂಲಕ (10)ನೇ ಉಪ ಪ್ಯಾರಾಗೆ ಬದಲಾಗಿ (26.1.1960 ರಿಂದ ಜಾರಿಗೆ ಬರುವಂತೆ) ಪ್ರತ್ಯಾಯೋಜಿಸಲಾಗಿದೆ.
7. ಸಿ.ಓ. 75ರ ಮೂಲಕ (ಬಿ) ಮತ್ತು (ಸಿ) ಖಂಡಗಳಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
8. ಸಿ.ಓ. 105ರ ಮೂಲಕ ಸೇರಿಸಲಾಗಿದೆ.

**(11) PART XVI.**

[1]* * * * *

[2][(*a*)] Articles 331, 332, 333, [3][336 and 337] shall be omitted.

[2][(*b*)] In articles 334 and 335, references to the State or the States shall be construed as not including references to the State of Jammu and Kashmir.

[4][(*c*) In clause (1) of article 339, the words "the administration of the Scheduled Areas and" shall be omitted.]

**(12) PART XVII.**

The provisions of the Part shall apply only in so far as they relate to—

(*i*) the official language of the Union;

(*ii*) the official language for communication between one State and another, or between a State and the Union; and

(*iii*) the language of the proceedings in the Supreme Court.

**(13) PART XVIII.**

(*a*) To article 352, the following new clause shall be added, namely:—

"[5][(6)] No Proclamation of Emergency made on grounds only of internal disturbance or imminent danger thereof shall have effect in relation to the State of Jammu and Kashmir (except as respects article 354) [6][unless—

(*a*) it is made at the request or with the concurrence of the Government of that State, or

(*b*) where it has not been so made, it is applied subsequently by the President to that State at the request or with the concurrence of the Government of that State.]".

[7][(*b*) In clause (1) of article 356, references to provisions or provision of this Constitution shall, in relation to the State of Jammu and Kashmir, be construed as including references to provisions or provision of the Constitution of Jammu and Kashmir.

[8][(*bb*) In clause (4) of the article 356, after the second proviso, the following proviso shall be inserted, namely:—

---

1. Cl. (*a*) omitted by C.O. 124.
2. Cls. (*b*) and (*c*) relettered as cls. (*a*) and (*b*), *ibid.*
3. Subs., *ibid.*, for "336, 337, 339 and 342".
4. Ins., *ibid.*
5. Subs. by C.O. 104, for "(4)".
6. Subs. by C.O. 100, for certain words.
7. Subs. by C.O. 71, for cl. (*b*).
8. Added by C.O. 151.

**(11) ಭಾಗ XVI.**

[1]* * * * * *

[2][(ಎ)] 331ನೇ, 332ನೇ, 333ನೇ, [3][336ನೇ ಮತ್ತು 337ನೇ] ಅನುಚ್ಛೇದಗಳನ್ನು ಬಿಟ್ಟುಬಿಡತಕ್ಕದ್ದು.

[2][(ಬಿ)] 334ನೇ ಮತ್ತು 335ನೇ ಅನುಚ್ಛೇದಗಳಲ್ಲಿ ರಾಜ್ಯಕ್ಕೆ ಅಥವಾ ರಾಜ್ಯಗಳಿಗೆ ಮಾಡಿದ ಉಲ್ಲೇಖಗಳು, ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಮಾಡಿದ ಉಲ್ಲೇಖಗಳನ್ನು ಒಳಗೊಳ್ಳುವುದಿಲ್ಲವೆಂದು ಅರ್ಥೈಸತಕ್ಕದ್ದು.

[4][(ಸಿ) 339ನೇ ಅನುಚ್ಛೇದದ (1)ನೇ ಖಂಡದಲ್ಲಿ "ಅನುಸೂಚಿತ ಪ್ರದೇಶಗಳ ಆಡಳಿತ ಮತ್ತು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.]

**(12) ಭಾಗ XVII.**

ಈ ಭಾಗದ ಉಪಬಂಧಗಳು, ಅವು,-

(i) ಒಕ್ಕೂಟದ ರಾಜಭಾಷೆಗೆ;

(ii) ಒಂದು ರಾಜ್ಯದ ಮತ್ತು ಇನ್ನೊಂದು ರಾಜ್ಯದ ನಡುವೆ ಮತ್ತು ಒಂದು ರಾಜ್ಯದ ಮತ್ತು ಒಕ್ಕೂಟದ ನಡುವೆ ಸಂಪರ್ಕಕ್ಕಾಗಿನ ರಾಜಭಾಷೆಗೆ; ಮತ್ತು

(iii) ಸರ್ವೋಚ್ಛ ನ್ಯಾಯಾಲಯದಲ್ಲಿನ ವ್ಯವಹರಣೆಗಳ ಭಾಷೆಗೆ;

- ಸಂಬಂಧಪಡುವಷ್ಟರ ಮಟ್ಟಿಗೆ ಮಾತ್ರ ಅನ್ವಯಿಸತಕ್ಕದ್ದು.

**(13) ಭಾಗ XVIII.**

(ಎ) 352ನೇ ಅನುಚ್ಛೇದಕ್ಕೆ ಬದಲಾಗಿ, ಈ ಕೆಳಕಂಡ ಹೊಸ ಖಂಡವನ್ನು ಸೇರಿಸತಕ್ಕದ್ದು, ಎಂದರೆ:-

"[5][(6)] ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಸಂಬಂಧಿಸಿದಂತೆ, (354ನೇ ಅನುಚ್ಛೇದಕ್ಕೆ ಸಂಬಂಧಿಸಿದುದನ್ನು ಹೊರತುಪಡಿಸಿ) ಆಂತರಿಕ ಗಲಭೆಯ ಅಥವಾ ಅದರ ಸನ್ನಿಹಿತ ಅಪಾಯದ ಕಾರಣಗಳ ಮೇಲೆ ಮಾತ್ರವೇ ಮಾಡಿದ ತುರ್ತು ಪರಿಸ್ಥಿತಿಯ [6][ಯಾವುದೇ ಉದ್ಘೋಷಣೆಯು,-

(ಎ) ಅದನ್ನು ಆ ರಾಜ್ಯ ಸರ್ಕಾರದ ಕೋರಿಕೆ ಮೇರೆಗೆ ಅಥವಾ ಸಹಮತಿಯೊಡನೆ ಮಾಡಿದ ಹೊರತು; ಅಥವಾ

(ಬಿ) ಅದನ್ನು ಹಾಗೆ ಮಾಡಿರದಿರುವಲ್ಲಿ, ಆ ರಾಜ್ಯ ಸರ್ಕಾರದ ಕೋರಿಕೆ ಮೇರೆಗೆ ಅಥವಾ ಸಹಮತಿಯೊಡನೆ ತದನಂತರ ಅದನ್ನು ರಾಷ್ಟ್ರಪತಿಯು ಆ ರಾಜ್ಯಕ್ಕೆ ಅನ್ವಯಿಸಿದ ಹೊರತು

- ಪರಿಣಾಮವುಳ್ಳದ್ದಾಗಿರತಕ್ಕದ್ದಲ್ಲ.]"

[7][(ಬಿ) 356ನೇ ಅನುಚ್ಛೇದದ (1)ನೇ ಖಂಡದಲ್ಲಿ ಈ ಸಂವಿಧಾನದ ಉಪಬಂಧಗಳಿಗೆ ಅಥವಾ ಉಪಬಂಧಕ್ಕೆ ಮಾಡಿದ ಉಲ್ಲೇಖಗಳು, ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಸಂಬಂಧಿಸಿದಂತೆ ಜಮ್ಮು ಮತ್ತು ಕಾಶ್ಮೀರ ರಾಜ್ಯದ ಸಂವಿಧಾನದ ಉಪಬಂಧಗಳಿಗೆ ಅಥವಾ ಉಪಬಂಧಕ್ಕೆ ಮಾಡಿದ ಉಲ್ಲೇಖಗಳನ್ನು ಒಳಗೊಂಡಿರುವುದಾಗಿ ಅರ್ಥೈಸತಕ್ಕದ್ದು.

[8][(ಬಿಬಿ) 356ನೇ ಅನುಚ್ಛೇದದ (4)ನೇ ಖಂಡದಲ್ಲಿ, ಎರಡನೇ ಪರಂತುಕದ ತರುವಾಯ ಈ ಕೆಳಕಂಡ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

---

1. ಸಿ.ಓ. 124ರ ಮೂಲಕ (ಎ) ಖಂಡವನ್ನು ಬಿಟ್ಟುಬಿಡಲಾಗಿದೆ.
2. ಸಿ.ಓ. 124ರ ಮೂಲಕ (ಬಿ) ಮತ್ತು (ಸಿ) ಖಂಡಗಳಿಗೆ (ಎ) ಮತ್ತು (ಬಿ) ಖಂಡಗಳೆಂದು ಪುನರ್ ಅಕ್ಷರ ನೀಡಲಾಗಿದೆ.
3. ಸಿ.ಓ. 124ರ ಮೂಲಕ "336, 337, 339 ಮತ್ತು 342" ಅನುಚ್ಛೇದಗಳಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
4. ಸಿ.ಓ. 124ರ ಮೂಲಕ ಸೇರಿಸಲಾಗಿದೆ.
5. ಸಿ.ಓ. 104ರ ಮೂಲಕ "(4)"ಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
6. ಸಿ.ಓ. 100ರ ಮೂಲಕ ಕೆಲವು ಪದಗಳಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
7. ಸಿ.ಓ. 71ರ ಮೂಲಕ (ಬಿ) ಖಂಡಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
8. ಸಿ.ಓ. 151ರ ಮೂಲಕ ಸೇರಿಸಲಾಗಿದೆ.

'Provided also that in the case of the Proclamation issued under clause (1) on the 18th day of July, 1990 with respect to the State of Jammu and Kashmir, the reference in the first proviso to this clause to "three years" shall be construed as a reference to [1]["seven years"] '.]

(*c*) Article 360 shall be omitted.]

**(14) PART XIX.**

[2]* * * * *

[3][(*a*)] [4][Article 365] shall be omitted.

[5]* * * * *

[6][(*b*)] To article 367, there shall be added the following clause, namely:—

"(4) For the purposes of this Constitution as it applies in relation to the State of Jammu and Kashmir—

(*a*) references to this Constitution or to the provisions thereof shall be construed as references to the Constitution or the provisions thereof as applied in relation to the said State;

[7][(*aa*) references to the person for the time being recognised by the President on the recommendation of the Legislative Assembly of the State as the Sadar-i-Riyasat of Jammu and Kashmir, acting on the advice of the Council of Ministers of the State for the time being in office, shall be construed as references to the Governor of Jammu and Kashmir;

(*b*) references to the Government of the said State shall be construed as including references to the Governor of Jammu and Kashmir acting on the advice of his Council of Ministers:

Provided that in respect of any period prior to the 10th day of April, 1965, such references shall be construed as including references to the Sadar-i-Riyasat acting on the advice of his Council of Ministers;]

(*c*) references to a High Court shall include references to the High Court of Jammu and Kashmir;

[8]* * * * *

---

1. Subs. by C.O. 162 for "six years".
2. Cl. (*a*) omitted by C.O. 74.
3. Cls. (*b*) and (*c*) relettered as cls. (*a*) and (*b*), *ibid.*
4. Subs. by C.O. 94, for "Articles 362 and 365".
5. Original cl. (*c*) omitted by C.O. 56.
6. Cls. (*b*) and (*c*) relettered as cls. (*a*) and (*b*) by C.O. 74.
7. Subs. *ibid.*, for cl. (*b*).
8. Cl. (*d*) omitted by C.O. 56.

'ಮತ್ತೂ ಪರಂತು, (1)ನೇ ಖಂಡದ ಮೇರೆಗೆ, ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಸಂಬಂಧಪಟ್ಟಂತೆ 1990ರ ಜುಲೈ 18ನೇ ದಿನದಂದು ಹೊರಡಿಸಿದ ಉದ್ಘೋಷಣೆಯ ಸಂದರ್ಭದಲ್ಲಿ ಈ ಖಂಡದ ಮೊದಲನೆಯ ಪರಂತುಕದಲ್ಲಿ "ಮೂರು ವರ್ಷಗಳಿಗಿಂತ" ಎಂಬುದಕ್ಕೆ ಮಾಡಿದ ಉಲ್ಲೇಖವನ್ನು [1]["ಏಳು ವರ್ಷಗಳಿಗಿಂತ"] ಎಂಬುದಕ್ಕೆ ಮಾಡಿದ ಉಲ್ಲೇಖವೆಂದು ಅರ್ಥೈಸತಕ್ಕದ್ದು'.]

(ಸಿ) 360ನೇ ಅನುಚ್ಛೇದವನ್ನು ಬಿಟ್ಟುಬಿಡತಕ್ಕದ್ದು.]

**(14) ಭಾಗ XIX.**

[2]* * * * * *

[3][(ಎ) [4][365ನೇ ಅನುಚ್ಛೇದವನ್ನು] ಬಿಟ್ಟುಬಿಡತಕ್ಕದ್ದು.

[5][* * * * * *

[6][(ಬಿ) 367ನೇ ಅನುಚ್ಛೇದಕ್ಕೆ, ಈ ಕೆಳಕಂಡ ಖಂಡವನ್ನು ಸೇರಿಸತಕ್ಕದ್ದು, ಎಂದರೆ:-

"(4) ಈ ಸಂವಿಧಾನದ ಉದ್ದೇಶಗಳಿಗಾಗಿ ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಸಂಬಂಧಪಟ್ಟಂತೆ ಅದು ಅನ್ವಯವಾಗುವ ಹಾಗೆ,-

(ಎ) ಈ ಸಂವಿಧಾನಕ್ಕೆ ಅಥವಾ ಅದರ ಉಪಬಂಧಗಳಿಗೆ ಮಾಡಿದ ಉಲ್ಲೇಖಗಳನ್ನು ಈ ಸಂವಿಧಾನವು ಅಥವಾ ಅದರ ಉಪಬಂಧಗಳು ಸದರಿ ರಾಜ್ಯಕ್ಕೆ ಸಂಬಂಧಪಟ್ಟಂತೆ ಅನ್ವಯವಾಗುವ ಹಾಗೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು;

[7][(ಎಎ) ಜಮ್ಮು ಮತ್ತು ಕಾಶ್ಮೀರ ರಾಜ್ಯದ ವಿಧಾನಸಭೆಯ ಶಿಫಾರಸ್ಸಿನ ಮೇಲೆ, ಆ ರಾಜ್ಯದ ಸದರ್-ಏ-ರಿಯಾಸತ್ ಎಂದು ರಾಷ್ಟ್ರಪತಿಯು ತತ್ಕಾಲದಲ್ಲಿ ಮಾನ್ಯತೆ ನೀಡಿದ್ದು, ತತ್ಕಾಲದಲ್ಲಿ ಅಧಿಕಾರದಲ್ಲಿರುವ ಆ ರಾಜ್ಯದ ಮಂತ್ರಿಮಂಡಲದ ಸಲಹೆ ಮೇಲೆ ಕಾರ್ಯನಿರ್ವಹಿಸುತ್ತಿರುವ ವ್ಯಕ್ತಿಗೆ ಮಾಡಿದ ಉಲ್ಲೇಖಗಳನ್ನು ಜಮ್ಮು ಮತ್ತು ಕಾಶ್ಮೀರ ರಾಜ್ಯದ ರಾಜ್ಯಪಾಲನಿಗೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು;

(ಬಿ) ಆ ರಾಜ್ಯ ಸರ್ಕಾರಕ್ಕೆ ಮಾಡಿದ ಉಲ್ಲೇಖಗಳನ್ನು, ಅವು ತನ್ನ ಮಂತ್ರಿಮಂಡಲದ ಸಲಹೆಯ ಮೇಲೆ ಕಾರ್ಯನಿರ್ವಹಿಸುತ್ತಿರುವ ಜಮ್ಮು ಮತ್ತು ಕಾಶ್ಮೀರ ರಾಜ್ಯದ ರಾಜ್ಯಪಾಲನಿಗೆ ಮಾಡಿದ ಉಲ್ಲೇಖಗಳನ್ನು ಒಳಗೊಂಡಿರುವ ಹಾಗೆ ಅರ್ಥೈಸತಕ್ಕದ್ದು:

ಪರಂತು, 1965ನೆಯ ಇಸವಿಯ ಏಪ್ರಿಲ್ ತಿಂಗಳ 10ನೆಯ ದಿನಕ್ಕೆ ಮುಂಚಿನ ಯಾವುದೇ ಅವಧಿಗೆ ಸಂಬಂಧಿಸಿದಂತೆ ಅಂಥ ಉಲ್ಲೇಖಗಳು ತನ್ನ ಮಂತ್ರಿಮಂಡಲದ ಸಲಹೆಯ ಮೇಲೆ ಕಾರ್ಯನಿರ್ವಹಿಸುತ್ತಿರುವ ಸದರ್-ಏ-ರಿಯಾಸತ್‌ಗೆ ಮಾಡಿದ ಉಲ್ಲೇಖಗಳನ್ನೊಳಗೊಂಡಿರುವ ಹಾಗೆ ಅರ್ಥೈಸತಕ್ಕದ್ದು;

(ಸಿ) ಒಂದು ಉಚ್ಚ ನ್ಯಾಯಾಲಯಕ್ಕೆ ಮಾಡಿದ ಉಲ್ಲೇಖಗಳು ಜಮ್ಮು ಮತ್ತು ಕಾಶ್ಮೀರ ರಾಜ್ಯದ ಉಚ್ಚ ನ್ಯಾಯಾಲಯಕ್ಕೆ ಮಾಡಿದ ಉಲ್ಲೇಖಗಳನ್ನೊಳಗೊಂಡಿರತಕ್ಕದ್ದು;

[8]* * * * *

---

1. ಸಿ.ಓ. 162ರ ಮೂಲಕ "ಆರು ವರ್ಷಗಳಿಗಿಂತ" ಎಂಬುದಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
2. ಸಿ.ಓ. 74ರ ಮೂಲಕ (ಎ) ಖಂಡವನ್ನು ಬಿಟ್ಟುಬಿಡಲಾಗಿದೆ.
3. ಸಿ.ಓ. 74ರ ಮೂಲಕ (ಬಿ) ಮತ್ತು (ಸಿ) ಖಂಡಗಳಿಗೆ (ಎ) ಮತ್ತು (ಬಿ) ಖಂಡಗಳೆಂದು ಪುನರ್ ಅಕ್ಷರ ನೀಡಲಾಗಿದೆ.
4. ಸಿ.ಓ. 94ರ ಮೂಲಕ "362 ಮತ್ತು 365ನೇ ಅನುಚ್ಛೇದಗಳು" ಎಂಬುದಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
5. ಸಿ.ಓ. 56ರ ಮೂಲಕ ಮೂಲ (ಸಿ) ಖಂಡವನ್ನು ಬಿಟ್ಟುಬಿಡಲಾಗಿದೆ.
6. ಸಿ.ಓ. 74ರ ಮೂಲಕ (ಬಿ) ಮತ್ತು (ಸಿ) ಖಂಡಗಳಿಗೆ (ಎ) ಮತ್ತು (ಬಿ) ಖಂಡಗಳೆಂದು ಪುನರ್‌ಅಕ್ಷರ ನೀಡಲಾಗಿದೆ.
7. ಸಿ.ಓ. 74ರ ಮೂಲಕ (ಬಿ) ಖಂಡಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
8. ಸಿ.ಓ. 56ರ ಮೂಲಕ (ಡಿ) ಖಂಡವನ್ನು ಬಿಟ್ಟುಬಿಡಲಾಗಿದೆ.

[1][(*d*)] references to the permanent residents of the said State shall be construed as meaning persons who, before the commencement of the Constitution (Application to Jammu and Kashmir) Order, 1954 were recognised as State subjects under the laws in force in the State or who are recognised by any law made by the Legislature of the State as permanent residents of the State; and

[2][(*e*) references to a Governor shall include references to the Governor of Jammu and Kashmir:

Provided that in respect of any period prior to the 10th day of April, 1965, such references shall be construed as references to the person recognised by the President as the Sadar-i-Riyasat of Jammu and Kashmir and as including references to any person recognised by the President as being competent to exercise the powers of the Sadar-i-Riyasat.]"

**(15) PART XX.**

[3][(*a*)] [4][To clause (2) of article 368], the following proviso shall be added, namely:—

"Provided further that no such amendment shall have effect in relation to the State of Jammu and Kashmir unless applied by order of the President under clause (1) of article 370.".

[5][(*b*) After clause (3) of article 368, the following clause shall be added, namely:—

"(4) No law made by the Legislature of the State of Jammu and Kashmir seeking to make any change in or in the effect of any provision of the Constitution of Jammu and Kashmir relating to—

(*a*) appointment, powers, functions, duties, emoluments, allowances, privileges or immunities of the Governor; or

(*b*) superintendence, direction and control of elections by the Election Commission of India, eligibility for inclusion in the electoral rolls without discrimination, adult suffrage and composition of the Legislative Council, being matters specified in sections 138, 139, 140 and 50 of the Constitution of Jammu and Kashmir,

shall have any effect unless such law has, after having been reserved for the consideration of the President, received his assent.".]

---

1. Cl. (*e*) relettered as cl. (*d*) by C.O. 56.
2. Subs. by C.O. 74, for cl. (*e*).
3. Numbered as cl. (*a*) by C.O. 101.
4. Subs. by C.O. 91, for "To article 368".
5. Ins. by C.O. 101.

[1][(ಡಿ)] ಆ ರಾಜ್ಯದ ಖಾಯಂ ನಿವಾಸಿಗಳಿಗೆ ಮಾಡಿದ ಉಲ್ಲೇಖಗಳನ್ನು 1954ನೆಯ ಇಸವಿಯ ಸಂವಿಧಾನ (ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯ) ಆದೇಶವು ಪ್ರಾರಂಭವಾಗುವುದಕ್ಕೆ ಮುಂಚೆ, ಆ ರಾಜ್ಯದಲ್ಲಿ ಜಾರಿಯಲ್ಲಿದ್ದ ಕಾನೂನುಗಳ ಮೇರೆಗೆ ಆ ರಾಜ್ಯದ ಪ್ರಜೆಗಳೆಂದು ಮನ್ನಣೆ ಪಡೆದಿದ್ದ ಅಥವಾ ಆ ರಾಜ್ಯ ವಿಧಾನಮಂಡಲವು ರಚಿಸಿದ ಯಾವುದೇ ಕಾನೂನಿನ ಮೂಲಕ ಆ ರಾಜ್ಯದ ಖಾಯಂ ನಿವಾಸಿಗಳೆಂದು ಮನ್ನಣೆ ಪಡೆದಿರುವ ವ್ಯಕ್ತಿಗಳೆಂಬುದಾಗಿ ಅರ್ಥವಿರುವಂತೆ ಅರ್ಥೈಸತಕ್ಕದ್ದು; ಮತ್ತು

[2][(ಇ) ರಾಜ್ಯಪಾಲನಿಗೆ ಮಾಡಿದ ಉಲ್ಲೇಖಗಳು ಜಮ್ಮು ಮತ್ತು ಕಾಶ್ಮೀರ ರಾಜ್ಯದ ರಾಜ್ಯಪಾಲನಿಗೆ ಮಾಡಿದ ಉಲ್ಲೇಖಗಳನ್ನು ಒಳಗೊಂಡಿರತಕ್ಕದ್ದು:

ಪರಂತು, 1965ನೇ ಇಸವಿಯ ಏಪ್ರಿಲ್ ತಿಂಗಳ 10ನೇ ದಿನಕ್ಕೆ ಮುಂಚಿನ ಯಾವುದೇ ಅವಧಿಗೆ ಸಂಬಂಧಿಸಿದಂತೆ ಅಂಥ ಉಲ್ಲೇಖಗಳ ಜಮ್ಮು ಮತ್ತು ಕಾಶ್ಮೀರ ರಾಜ್ಯದ 'ಸದರ್-ಏ-ರಿಯಾಸತ್' ಎಂದು ರಾಷ್ಟ್ರಪತಿಯಿಂದ ಮನ್ನಣೆ ಪಡೆದಿರುವ ವ್ಯಕ್ತಿಗೆ ಮಾಡಿದ ಉಲ್ಲೇಖಗಳೆಂಬಂತೆ ಮತ್ತು ಅವು ಸದರ್-ಏ-ರಿಯಾಸತ್‌ನ ಅಧಿಕಾರಗಳನ್ನು ಚಲಾಯಿಸಲು ಸಕ್ಷಮನಾಗಿರುವವನು ಎಂಬುದಾಗಿ ರಾಷ್ಟ್ರಪತಿಯಿಂದ ಮನ್ನಣೆ ಪಡೆದ ಯಾರೇ ವ್ಯಕ್ತಿಗೆ ಮಾಡಿದ ಉಲ್ಲೇಖಗಳನ್ನೊಳಗೊಂಡಿರುವುದಾಗಿ ಅರ್ಥೈಸತಕ್ಕದ್ದು.]"

**(15) ಭಾಗ XX.**

[3][(ಎ)] [4][368ನೇ ಅನುಚ್ಛೇದದ (2)ನೇ ಖಂಡಕ್ಕೆ] ಈ ಕೆಳಕಂಡ ಇನ್ನೊಂದು ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

"ಮತ್ತೂ ಪರಂತು, ಅಂಥ ಯಾವುದೇ ತಿದ್ದುಪಡಿಯು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಸಂಬಂಧಪಟ್ಟಂತೆ 370ನೇ ಅನುಚ್ಛೇದದ (1)ನೇ ಖಂಡದ ಮೇರೆಗಿನ ರಾಷ್ಟ್ರಪತಿಯ ಆದೇಶದ ಮೂಲಕ ಅದನ್ನು ಅನ್ವಯಿಸಿದ ಹೊರತು, ಪರಿಣಾಮವುಳ್ಳದ್ದಾಗಿರತಕ್ಕದ್ದಲ್ಲ."

[5][(ಬಿ) 368ನೇ ಅನುಚ್ಛೇದದ (3)ನೇ ಖಂಡದ ತರುವಾಯ, ಈ ಕೆಳಕಂಡ ಖಂಡವನ್ನು ಸೇರಿಸತಕ್ಕದ್ದು, ಎಂದರೆ:-

"(4) ಜಮ್ಮು ಮತ್ತು ಕಾಶ್ಮೀರ ರಾಜ್ಯದ ಸಂವಿಧಾನದ ಯಾವುದೇ ಉಪಬಂಧದಲ್ಲಿ ಅಥವಾ ಅದರ ಪರಿಣಾಮದಲ್ಲಿ ಯಾವುದೇ ಬದಲಾವಣೆಯನ್ನು ಮಾಡಲು ಉದ್ದೇಶಿಸಿ ಜಮ್ಮು ಮತ್ತು ಕಾಶ್ಮೀರ ರಾಜ್ಯದ ವಿಧಾನಮಂಡಲವು,-

(ಎ) ರಾಜ್ಯಪಾಲನ ನೇಮಕಕ್ಕೆ, ಅಧಿಕಾರಗಳಿಗೆ, ಪ್ರಕಾರ್ಯಗಳಿಗೆ, ಕರ್ತವ್ಯಗಳಿಗೆ, ಉಪಲಬ್ಧಿಗಳಿಗೆ, ಭತ್ಯೆಗಳಿಗೆ, ವಿಶೇಷಾಧಿಕಾರಗಳಿಗೆ ಅಥವಾ ಉನ್ಮುಕ್ತಿಗಳಿಗೆ; ಅಥವಾ

(ಬಿ) ಜಮ್ಮು ಮತ್ತು ಕಾಶ್ಮೀರ ರಾಜ್ಯ ಸಂವಿಧಾನದ 138ನೇ, 139ನೇ 140ನೇ ಮತ್ತು 150ನೇ ಪ್ರಕರಣಗಳಲ್ಲಿ ನಿರ್ದಿಷ್ಟಪಡಿಸಿದ ವಿಷಯಗಳಾದ ಭಾರತದ ಚುನಾವಣಾ ಆಯೋಗದಿಂದ ಚುನಾವಣೆಗಳ ಅಧೀಕ್ಷಣೆಗೆ, ನಿರ್ದೇಶನಕ್ಕೆ ಮತ್ತು ನಿಯಂತ್ರಣಕ್ಕೆ, ತಾರತಮ್ಯ ಮಾಡದೆ ಮತದಾರರ ಪಟ್ಟಿಯಲ್ಲಿ ಸೇರಿಸುವ ಸಲುವಾಗಿ ಅರ್ಹತೆಗೆ, ವಯಸ್ಕ ಮತದಾನಕ್ಕೆ ಮತ್ತು ವಿಧಾನ ಪರಿಷತ್ತಿನ ರಚನೆಗೆ

- ಸಂಬಂಧಿಸಿದಂತೆ ರಚಿಸಿದ ಯಾವುದೇ ಕಾನೂನು ರಾಷ್ಟ್ರಪತಿಯ ಪರ್ಯಾಲೋಚನೆಗಾಗಿ ಕಾಯ್ದಿರಿಸಿದ್ದು ಅವನ ಸಮ್ಮತಿಯನ್ನು ಪಡೆದ ಹೊರತು ಯಾವುದೇ ಪರಿಣಾಮವನ್ನು ಉಳ್ಳದ್ದಾಗಿರತಕ್ಕದ್ದಲ್ಲ".]

---

1. ಸಿ.ಓ. 56ರ ಮೂಲಕ (ಇ) ಖಂಡಕ್ಕೆ (ಡಿ) ಖಂಡವೆಂದು ಪುನರ್ ಅಕ್ಷರ ನೀಡಲಾಗಿದೆ.
2. ಸಿ.ಓ. 74ರ ಮೂಲಕ (ಇ) ಖಂಡಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
3. ಸಿ.ಓ. 101ರ ಮೂಲಕ (ಎ) ಖಂಡವೆಂದು ಸಂಖ್ಯೆ ನೀಡಲಾಗಿದೆ.
4. ಸಿ.ಓ. 91ರ ಮೂಲಕ "368ನೇ ಅನುಚ್ಛೇದಕ್ಕೆ" ಎಂಬುದಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
5. ಸಿ.ಓ. 101ರ ಮೂಲಕ ಸೇರಿಸಲಾಗಿದೆ.

**(16) PART XXI.**

(*a*) Articles 369, 371, [1][371A], [2][372A], 373, clauses (1), (2), (3) and (5) of article 374 and [3][articles 376 to 378A and 392] shall be omitted.

(*b*) In article 372—

(*i*) clauses (2) and (3) shall be omitted;

(*ii*) references to the laws in force in the territory of India shall include references to *hidayats, ailans, ishtihars,* circulars*, robkars, irshads, yadashts,* State Council Resolutions, Resolutions of the Constituent Assembly, and other instruments having the force of law in the territory of the State of Jammu and Kashmir; and

(*iii*) references to the commencement of the Constitution shall be construed as references to the commencement of this Order.

(*c*) In clause (4) of article 374, the reference to the authority functioning as the Privy Council of a State shall be construed as a reference to the Advisory Board constituted under the Jammu and Kashmir Constitution Act, 1996 and references to the commencement of the Constitution shall be construed as references to the commencement of this Order.

**(17) PART XXII.**

Articles 394 and 395 shall be omitted.

**(18) FIRST SCHEDULE.**

**(19) SECOND SCHEDULE.**

[4]* * * * *

**(20) THIRD SCHEDULE.**

Forms V, VI, VII and VIII shall be omitted.

**(21) FOURTH SCHEDULE.**

[5][**(22) SEVENTH SCHEDULE.**

(*a*) In the Union List—

(*i*) for entry 3, the entry "3. Administration of cantonments." shall be substituted;

---

1. Ins. by C.O. 74.
2. Ins. by C.O. 56.
3. Subs. *ibid.*, for "articles 376 to 392".
4. Modification relating to paragraph 6 omitted by C.O. 56.
5. Subs. by C.O. 66, for sub-paragraph (22).

**(16) ಭಾಗ XXI.**

(ಎ) 369ನೇ, 371ನೇ, [1][371ಎ], [2][372ಎ], 373ನೇ ಅನುಚ್ಛೇದಗಳನ್ನು, 374ನೇ ಅನುಚ್ಛೇದದ (1)ನೇ, (2)ನೇ, (3)ನೇ ಮತ್ತು (5)ನೇ ಖಂಡಗಳನ್ನು ಮತ್ತು [3][376 ರಿಂದ 378ಎ ಮತ್ತು 392ನೇ ಅನುಚ್ಛೇದಗಳನ್ನು] ಬಿಟ್ಟುಬಿಡತಕ್ಕದ್ದು.

(ಬಿ) 372ನೇ ಅನುಚ್ಛೇದದಲ್ಲಿ,-

(i) (2) ಮತ್ತು (3)ನೇ ಖಂಡಗಳನ್ನು ಬಿಟ್ಟುಬಿಡತಕ್ಕದ್ದು;

(ii) ಭಾರತದ ರಾಜ್ಯಕ್ಷೇತ್ರದಲ್ಲಿ ಜಾರಿಯಲ್ಲಿದ್ದ ಕಾನೂನುಗಳಿಗೆ ಮಾಡಿದ ಉಲ್ಲೇಖಗಳು, ಹಿದಾಯತುಗಳಿಗೆ, ಐಲಾನುಗಳಿಗೆ, ಇಸ್ತಿಹಾರುಗಳಿಗೆ, ಸುತ್ತೋಲೆಗಳಿಗೆ, ರೂಬ್‌ಕಾರ್‌ಗಳಿಗೆ, ಇರ್‌ಷಾದುಗಳಿಗೆ, ಯಾದಾಸ್ತುಗಳಿಗೆ, ರಾಜ್ಯ ಪರಿಷತ್ತಿನ ನಿರ್ಣಯಗಳಿಗೆ, ಸಂವಿಧಾನ ಸಭೆಯ ನಿರ್ಣಯಗಳಿಗೆ ಹಾಗೂ ಜಮ್ಮು ಮತ್ತು ಕಾಶ್ಮೀರ ರಾಜ್ಯದ ರಾಜ್ಯಕ್ಷೇತ್ರದಲ್ಲಿ ಕಾನೂನಿನ ಬಲವುಳ್ಳ ಇತರ ಲಿಖಿತಗಳಿಗೆ ಮಾಡಿದ ಉಲ್ಲೇಖಗಳನ್ನು ಒಳಗೊಳ್ಳತಕ್ಕದ್ದು; ಮತ್ತು

(iii) ಸಂವಿಧಾನದ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳನ್ನು ಈ ಆದೇಶದ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು.

(ಸಿ) 374ನೇ ಅನುಚ್ಛೇದದ (4)ನೇ ಖಂಡದಲ್ಲಿ, ರಾಜ್ಯದ ಪ್ರೀವಿಕೌನ್ಸಿಲ್ ಆಗಿ ಕಾರ್ಯನಿರ್ವಹಿಸುತ್ತಿರುವ ಪ್ರಾಧಿಕಾರಕ್ಕೆ ಮಾಡಿದ ಉಲ್ಲೇಖವನ್ನು, ಜಮ್ಮು ಮತ್ತು ಕಾಶ್ಮೀರ ಸಂವಿಧಾನ ಅಧಿನಿಯಮ 1996ರ ಮೇರೆಗೆ ರಚಿತವಾದ ಸಲಹಾ ಮಂಡಳಿಗೆ ಮಾಡಿದ ಉಲ್ಲೇಖವೆಂದು ಅರ್ಥೈಸತಕ್ಕದ್ದು, ಮತ್ತು ಸಂವಿಧಾನದ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳನ್ನು, ಈ ಆದೇಶದ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು.

**(17) ಭಾಗ XXII.**

394ನೇ ಮತ್ತು 395ನೇ ಅನುಚ್ಛೇದಗಳನ್ನು ಬಿಟ್ಟುಬಿಡತಕ್ಕದ್ದು.

**(18) ಮೊದಲನೆಯ ಅನುಸೂಚಿ.**

**(19) ಎರಡನೆಯ ಅನುಸೂಚಿ.**

[4]* * * * * *

**(20) ಮೂರನೆಯ ಅನುಸೂಚಿ.**

Vನೇ, VIನೇ, VIIನೇ ಮತ್ತು VIIIನೇ ನಮೂನೆಗಳನ್ನು ಬಿಟ್ಟುಬಿಡತಕ್ಕದ್ದು.

**(21) ನಾಲ್ಕನೆಯ ಅನುಸೂಚಿ.**

[5][**(22) ಏಳನೆಯ ಅನುಸೂಚಿ.**

(ಎ) ಒಕ್ಕೂಟ ಪಟ್ಟಿಯಲ್ಲಿ,-

(i) 3ನೇ ನಮೂದಿಗೆ ಬದಲಾಗಿ "3. ದಂಡು ಪ್ರದೇಶಗಳ ಆಡಳಿತ" ಎಂಬ ನಮೂದನ್ನು ಪ್ರತ್ಯಾಯೋಜಿಸತಕ್ಕದ್ದು;

---

1. ಸಿ.ಓ. 74ರ ಮೂಲಕ ಸೇರಿಸಲಾಗಿದೆ.
2. ಸಿ.ಓ. 56ರ ಮೂಲಕ ಸೇರಿಸಲಾಗಿದೆ.
3. ಸಿ.ಓ. 56ರ ಮೂಲಕ "376 ರಿಂದ 392ರ ವರೆಗಿನ ಅನುಚ್ಛೇದಗಳನ್ನು" ಎಂಬುದಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
4. ಸಿ.ಓ. 56ರ ಮೂಲಕ 6ನೇ ಪ್ಯಾರಾಗೆ ಸಂಬಂಧಿಸಿದ ಮಾರ್ಪಾಡನ್ನು ಬಿಟ್ಟುಬಿಡಲಾಗಿದೆ.
5. ಸಿ.ಓ. 66ರ ಮೂಲಕ (22)ನೇ ಉಪ ಪ್ಯಾರಾಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.

[1][(*ii*) entries 8, 9 [2][and 34], [3]*** entry 79, and the words "Inter-State migration" in entry 81 shall be omitted;]

[4]* * * * *

[5][(*iii*) in entry 72, the reference to the States shall be construed,—

(*a*) in relation to appeals to the Supreme Court from any decision or order of the High Court of the State of Jammu and Kashmir made in an election petition whereby an election to either House of the Legislature of that State has been called in question, as including a reference to the State of Jammu and Kashmir;

(*b*) in relation to other matters, as not including a reference to that State]; [6][and]

[7][(*iv*) for entry 97, the following entry shall be substituted, namely:—

"[8][97. Prevention of activities—

(*a*) involving terrorist acts directed towards overawing the Government as by law established or striking terror in the people or any section of the people or alienating any section of the people or adversely affecting the harmony amongst different sections of the people;

(*b*) directed towards disclaiming, questioning or disrupting the sovereignty and territorial integrity of India or bringing about cession of a part of the territory of India or secession of a part of the territory of India from the Union or causing insult to the Indian National Flag, the Indian National Anthem and this Constitution,

taxes on foreign travel by sea or air, on inland air travel and on postal articles, including money orders, phonograms and telegrams.

***Explanation.—*** In this entry, "terrorist act" has the same meaning as in the *Explanation* to article 248.]".]

(*b*) The State List shall be omitted.

---

1. Subs. by C.O. 85, for item (ii).
2. Subs. by C.O. 92, for "34 and 60".
3. The words and figures 'the words "and records" in the entry 67' omitted by C.O. 95.
4. Original item (iii) omitted by C.O. 74.
5. Subs. by C.O. 83, for item (iii).
6. Ins. by C.O. 85.
7. Subs. by C.O. 93, for item (iv).
8. Subs. by C.O. 122, for entry 97.

[1][(ii) 8ನೇ, 9ನೇ [2][ಮತ್ತು 34ನೇ] ನಮೂದುಗಳು [3]* * * 79ನೇ ನಮೂದು, ಮತ್ತು 81ನೇ ನಮೂದಿನಲ್ಲಿನ "ಅಂತರ ರಾಜ್ಯ ವಲಸೆ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;]

[4][* * * * *

[5][(iii) 72ನೇ ನಮೂದಿನಲ್ಲಿ ರಾಜ್ಯಗಳಿಗೆ ಮಾಡಿದ ಉಲ್ಲೇಖವನ್ನು,-

(ಎ) ಜಮ್ಮು ಮತ್ತು ಕಾಶ್ಮೀರ ರಾಜ್ಯದ ವಿಧಾನಮಂಡಲದ ಯಾವುದೇ ಸದನಕ್ಕೆ ನಡೆದ ಚುನಾವಣೆಯನ್ನು ಪ್ರಶ್ನಿಸಿದ್ದ ಚುನಾವಣಾ ತಕರಾರು ಅರ್ಜಿಯ ಮೇಲೆ ಆ ರಾಜ್ಯದ ಉಚ್ಚ ನ್ಯಾಯಾಲಯವು ನೀಡಿದ ಯಾವುದೇ ತೀರ್ಮಾನದ ಅಥವಾ ಆದೇಶದ ಬಗ್ಗೆ ಸರ್ವೋಚ್ಚ ನ್ಯಾಯಾಲಯಕ್ಕೆ ಸಲ್ಲಿಸಿದ ಅಪೀಲುಗಳಿಗೆ ಸಂಬಂಧಪಟ್ಟಂತೆ ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಮಾಡಿದ ಉಲ್ಲೇಖವನ್ನು ಒಳಗೊಂಡಿರುವುದಾಗಿ;

(ಬಿ) ಇತರ ವಿಷಯಗಳಿಗೆ ಸಂಬಂಧಪಟ್ಟಂತೆ, ಆ ರಾಜ್ಯಕ್ಕೆ ಮಾಡಿದ ಉಲ್ಲೇಖಗಳನ್ನು ಒಳಗೊಂಡಿಲ್ಲವೆಂದು

– ಅರ್ಥೈಸತಕ್ಕದ್ದು;] [6][ಮತ್ತು]

[7][(iv) 97ನೇ ನಮೂದಿಗೆ ಬದಲಾಗಿ ಈ ಕೆಳಕಂಡ ನಮೂದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

[8]["97. (ಎ) ಕಾನೂನಿನ ಮೂಲಕ ಸ್ಥಾಪಿತವಾದ ಸರ್ಕಾರಕ್ಕೆ ಭಯಹುಟ್ಟಿಸುವ ಉದ್ದೇಶವುಳ್ಳ ಭಯೋತ್ಪಾದಕ ಕೃತ್ಯಗಳನ್ನೊಳಗೊಂಡ ಅಥವಾ ಜನರಲ್ಲಿ ಅಥವಾ ಜನರ ಯಾವುದೇ ವರ್ಗದಲ್ಲಿ ಭಯವನ್ನು ಉಂಟು ಮಾಡುವ ಅಥವಾ ಜನರ ಯಾವುದೇ ವರ್ಗವನ್ನು ದೂರಮಾಡುವ ಅಥವಾ ಜನರ ವಿವಿಧ ವರ್ಗಗಳ ನಡುವೆ ಇರುವ ಸಾಮರಸ್ಯಕ್ಕೆ ಪ್ರತಿಕೂಲ ಪರಿಣಾಮ ಉಂಟುಮಾಡುವ ಚಟುವಟಿಕೆಗಳನ್ನು ಪ್ರತಿಬಂಧಿಸುವುದು;

(ಬಿ) ಭಾರತದ ಸಾರ್ವಭೌಮತ್ವವನ್ನು ಮತ್ತು ಅದರ ರಾಜ್ಯ ಕ್ಷೇತ್ರೀಯ ಅಖಂಡತೆಯನ್ನು ನಿರಾಕರಿಸುವ, ಪ್ರಶ್ನಿಸುವ, ಅಥವಾ ವಿಚ್ಛಿನ್ನಗೊಳಿಸುವ ಉದ್ದೇಶದ ಅಥವಾ ಭಾರತದ ರಾಜ್ಯಕ್ಷೇತ್ರದ ಒಂದು ಭಾಗವನ್ನು ಬಿಟ್ಟುಕೊಡುವ ಅಥವಾ ಒಕ್ಕೂಟದಿಂದ ಭಾರತದ ರಾಜ್ಯಕ್ಷೇತ್ರದ ಒಂದು ಭಾಗವು ಬೇರೆಯಾಗುವಂತೆ ಮಾಡುವ ಅಥವಾ ಭಾರತದ ರಾಷ್ಟ್ರಧ್ವಜಕ್ಕೆ, ಭಾರತದ ರಾಷ್ಟ್ರಗೀತೆಗೆ ಮತ್ತು ಈ ಸಂವಿಧಾನಕ್ಕೆ ಅಪಮಾನ ಉಂಟುಮಾಡುವ ಉದ್ದೇಶದ ಚಟುವಟಿಕೆಗಳನ್ನು ಪ್ರತಿಬಂಧಿಸುವುದು

– ಸಮುದ್ರ ಅಥವಾ ವಿಮಾನದ ಮೂಲಕ ವಿದೇಶ ಪ್ರಯಾಣ, ಮತ್ತು ಅಂತರ್ದೇಶೀಯ ವಿಮಾನ ಪ್ರಯಾಣ ಮತ್ತು ಮನಿಯಾರ್ಡರುಗಳನ್ನೊಳಗೊಂಡು ಅಂಚೆ ವಸ್ತುಗಳ, ಫೋನೋಗ್ರಾಂಗಳ ಮತ್ತು ಟೆಲಿಗ್ರಾಂಗಳ ಮೇಲಿನ ತೆರಿಗೆಗಳು.

**ವಿವರಣೆ.**- ಈ ನಮೂದಿನಲ್ಲಿ, "ಭಯೋತ್ಪಾದಕ ಕೃತ್ಯ" ಎಂಬುದು 248ನೇ ಅನುಚ್ಛೇದದ ವಿವರಣೆಗೆ ಇರುವಂತಹ ಅರ್ಥವನ್ನೇ ಹೊಂದಿರುತ್ತದೆ.]"]

(ಬಿ) ರಾಜ್ಯಪಟ್ಟಿಯನ್ನು ಬಿಟ್ಟುಬಿಡತಕ್ಕದ್ದು.

---

1. ಸಿ.ಓ. 85ರ ಮೂಲಕ (ii)ನೇ ಖಾಬಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
2. ಸಿ.ಓ. 92ರ ಮೂಲಕ "34 ಮತ್ತು 60" ಎಂಬುದಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
3. ಸಿ.ಓ. 95ರ ಮೂಲಕ 67ನೇ ನಮೂದಿನಲ್ಲಿನ "ಮತ್ತು ದಾಖಲೆಗಳು" ಎಂಬ ಪದಗಳನ್ನು ಬಿಟ್ಟುಬಿಡಲಾಗಿದೆ.
4. ಸಿ.ಓ. 74ರ ಮೂಲಕ ಮೂಲ (iii)ನೇ ಖಾಬನ್ನು ಬಿಟ್ಟುಬಿಡಲಾಗಿದೆ.
5. ಸಿ.ಓ. 83ರ ಮೂಲಕ (iii)ನೇ ಖಾಬಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
6. ಸಿ.ಓ. 85ರ ಮೂಲಕ ಸೇರಿಸಲಾಗಿದೆ.
7. ಸಿ.ಓ. 93ರ ಮೂಲಕ (iv)ನೇ ಖಾಬಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
8. ಸಿ.ಓ. 122ರ ಮೂಲಕ 97ನೇ ನಮೂದಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.

[1][(*c*) In the Concurrent List—

[2][(*i*) for entry 1, the following entry shall be substituted, namely:—

"1. Criminal law (excluding offences against laws with respect to any of the matters specified in List I and excluding the use of naval, military or air forces or any other armed forces of the Union in aid of the civil power) in so far as such criminal law relates to offences against laws with respect to any of the matters specified in this List."];

[3][[4][(*ia*) for entry 2, the following entry shall be substituted, namely:—

"2. Criminal procedure (including prevention of offences and constitution and organisation of criminal courts, except the Supreme Court and the High Court) in so far as it relates to,—

(*i*) offences against laws with respect to any matters being matters with respect to which Parliament has power to make laws; and

(*ii*) administration of oaths and taking of affidavits by diplomatic and consular officers in any foreign country.";

(*ib*) for entry 12, the following entry shall be substituted, namely:—

"12. Evidence and oaths in so far as they relate to,—

(*i*) administration of oaths and taking of affidavits by diplomatic and consular officers in any foreign country; and

(*ii*) any other matters being matters with respect to which Parliament has power to make laws.";

(*ic*) for entry 13, the entry "13. Civil procedure in so far as it relates to administration of oaths and taking of affidavits by diplomatic and consular officers in any foreign country." shall be substituted;

[5]* * * * *

---

1. Subs. by C.O. 69, for cl. (*c*).
2. Subs. by C.O. 70, for item (*i*).
3. Ins. by C.O. 94.
4. Subs. by C.O. 122, for sub-clauses (*ia*) and (*ib*).
5. Items (*ii*) and (*iii*) omitted by C.O. 74.

[1][(ಸಿ) ಸಮವರ್ತಿ ಪಟ್ಟಿಯಲ್ಲಿ-

[2][(i)1ನೇ ನಮೂದಿಗೆ ಬದಲಾಗಿ, ಈ ಕೆಳಕಂಡ ನಮೂದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

"1. ಕ್ರಿಮಿನಲ್ ಕಾನೂನು (ಪಟ್ಟಿ I ರಲ್ಲಿ ನಿರ್ದಿಷ್ಟಪಡಿಸಿದ ವಿಷಯಗಳಲ್ಲಿ ಯಾವುದೇ ವಿಷಯಕ್ಕೆ ಸಂಬಂಧಿಸಿದ ಕಾನೂನುಗಳಿಗೆ ವಿರುದ್ಧವಾದ ಅಪರಾಧಗಳನ್ನು ಹೊರತುಪಡಿಸಿ ಮತ್ತು ಸಿವಿಲ್ ಅಧಿಕಾರಕ್ಕೆ ನೆರವಾಗುವ ಒಕ್ಕೂಟದ ನೌಕಾ, ಭೂ ಮತ್ತು ವಾಯುಬಲಗಳ ಅಥವಾ ಇತರ ಯಾವುದೇ ಸಶಸ್ತ್ರ ಬಲಗಳ ಬಳಕೆಯನ್ನು ಹೊರತುಪಡಿಸಿ) ಅಂಥ ಕ್ರಿಮಿನಲ್ ಕಾನೂನು ಈ ಪಟ್ಟಿಯಲ್ಲಿ ನಿರ್ದಿಷ್ಟಪಡಿಸಿರುವ ವಿಷಯಗಳಲ್ಲಿ ಯಾವುದೇ ವಿಷಯಕ್ಕೆ ಸಂಬಂಧಿಸಿದ ಕಾನೂನುಗಳಿಗೆ ವಿರುದ್ಧವಾದ ಅಪರಾಧಗಳಿಗೆ ಸಂಬಂಧಪಡುವಷ್ಟರ ಮಟ್ಟಿಗೆ;"]

[3][[4][(ಐಎ) 2ನೇ ನಮೂದಿಗೆ ಬದಲಾಗಿ ಈ ಕೆಳಕಂಡ ನಮೂದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

"2. ದಂಡಪ್ರಕ್ರಿಯೆಯು (ಅಪರಾಧಗಳನ್ನು ತಡೆಗಟ್ಟುವುದು ಮತ್ತು ಸರ್ವೋಚ್ಛ ನ್ಯಾಯಾಲಯವನ್ನು ಮತ್ತು ಉಚ್ಚ ನ್ಯಾಯಾಲಯವನ್ನು ಹೊರತುಪಡಿಸಿ ಕ್ರಿಮಿನಲ್ ನ್ಯಾಯಾಲಯಗಳ ರಚನೆ ಮತ್ತು ಸಂಘಟನೆಯೂ ಸೇರಿದಂತೆ) ಅದು,-

(i) ಕಾನೂನುಗಳನ್ನು ರಚಿಸುವುದಕ್ಕೆ ಸಂಸತ್ತಿಗೆ ಅಧಿಕಾರ ಇರುವಂತಹ ವಿಷಯಗಳಾಗಿರುವ ಯಾವುದೇ ವಿಷಯಗಳಿಗೆ ಸಂಬಂಧಪಟ್ಟ ಕಾನೂನುಗಳಿಗೆ ವಿರುದ್ಧದ ಅಪರಾಧಗಳಿಗೆ ಸಂಬಂಧಪಡುವಷ್ಟರ ಮಟ್ಟಿಗೆ; ಮತ್ತು

(ii) ಪ್ರಮಾಣ ವಚನಗಳ ಬೋಧನೆಗೆ ಮತ್ತು ಯಾವುದೇ ವಿದೇಶಿ ರಾಷ್ಟ್ರದಲ್ಲಿರುವ ರಾಜತಾಂತ್ರಿಕ ಮತ್ತು ಕಾನ್ಸುಲರ್ ಅಧಿಕಾರಿಗಳು ಶಪಥ ಪತ್ರಗಳನ್ನು ತೆಗೆದುಕೊಳ್ಳುವುದಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ;

(ಐಬಿ)12ನೇ ನಮೂದಿಗೆ ಬದಲಾಗಿ ಈ ಕೆಳಕಂಡ ನಮೂದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

"12. ಸಾಕ್ಷ್ಯ ಮತ್ತು ಪ್ರಮಾಣ ವಚನಗಳು, ಅವು,-

(i) ಪ್ರಮಾಣ ವಚನಗಳ ಬೋಧನೆಗೆ ಮತ್ತು ಯಾವುದೇ ವಿದೇಶಿ ರಾಷ್ಟ್ರದಲ್ಲಿರುವ ರಾಜತಾಂತ್ರಿಕ ಮತ್ತು ಕಾನ್ಸುಲರ್ ಅಧಿಕಾರಿಗಳು ಶಪಥ ಪತ್ರಗಳನ್ನು ತೆಗೆದುಕೊಳ್ಳುವುದಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ; ಮತ್ತು

(ii) ಕಾನೂನುಗಳನ್ನು ರಚಿಸುವುದಕ್ಕೆ ಸಂಸತ್ತಿಗೆ ಅಧಿಕಾರ ಇರುವಂತಹ ವಿಷಯಗಳಾಗಿರುವ ಯಾವುದೇ ಇತರ ವಿಷಯಗಳಿಗೆ ಸಂಬಂಧಪಡುವಷ್ಟರ ಮಟ್ಟಿಗೆ;"

(i[1]) 13ನೇ ನಮೂದಿಗೆ ಬದಲಾಗಿ "13. ಸಿವಿಲ್ ಪ್ರಕ್ರಿಯೆಯು, ಅದು, ಪ್ರಮಾಣ ವಚನಗಳ ಬೋಧನೆಗೆ ಮತ್ತು ಯಾವುದೇ ವಿದೇಶದಲ್ಲಿರುವ ರಾಜತಾಂತ್ರಿಕ ಮತ್ತು ಕಾನ್ಸುಲರ್ ಅಧಿಕಾರಿಗಳು ಶಪಥಪತ್ರಗಳನ್ನು ತೆಗೆದುಕೊಳ್ಳುವುದಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ" ಎಂಬ ನಮೂದನ್ನು ಪ್ರತ್ಯಾಯೋಜಿಸತಕ್ಕದ್ದು;

[5]* * * * * *

---

1. ಸಿ.ಓ. 69ರ ಮೂಲಕ (ಸಿ) ಖಂಡಕ್ಕೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
2. ಸಿ.ಓ. 70ರ ಮೂಲಕ (i)ನೇ ಬಾಬಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
3. ಸಿ.ಓ. 94ರ ಮೂಲಕ ಸೇರಿಸಲಾಗಿದೆ.
4. ಸಿ.ಓ. 122ರ ಮೂಲಕ (ಐಎ) ಮತ್ತು (ಐಬಿ) ಉಪಖಂಡಗಳಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
5. ಸಿ.ಓ. 74ರ ಮೂಲಕ (ii) ಮತ್ತು (iii)ನೇ ಬಾಬುಗಳನ್ನು ಬಿಟ್ಟುಬಿಡಲಾಗಿದೆ.

[1][[2][(*ii*)] for entry 30, the entry "30. Vital statistics in so far as they relate to births and deaths including registration of births and deaths." shall be substituted;]

[3]* * * * *

[4][(*iii*) entry 3, entries 5 to 10 (both inclusive), entries 14, 15, 17, 20, 21, 27, 28, 29, 31, 32, 37, 38, 41 and 44 shall be omitted;

(*iiia*) for entry 42, the entry "42. Acquisition and requisitioning of property, so far as regards acquisition of any property covered by entry 67 of List I or entry 40 of List III or of any human work of art which has artistic or aesthetic value." shall be substituted; and

[5][(*iv*) in entry 45, for the words and figures "List II or List III", the words "this List" shall be substituted.

**(23) EIGHTH SCHEDULE.**

[6][**(24) NINTH SCHEDULE.**

[7][(*a*)] After entry 64, the following entries shall be added, namely:—

[8]64A. The Jammu and Kashmir State Kuth Act (No. I of Svt. 1978).

[8][64B.] The Jammu and Kashmir Tenancy Act (No. II of Svt. 1980).

[8][64C.] The Jammu and Kashmir Alienation of Land Act (No. V of Svt. 1995).

[9]* * * * *

[10][64D]. The Jammu and Kashmir Big Landed Estates Abolition Act (No. XVII of Svt. 2007).

[10][64E]. Order No. 6-H of 1951, dated the 10th March, 1951, regarding Resumption of Jagirs and other assignments of land revenue, etc.

[11][64F. The Jammu and Kashmir Restitution of Mortgaged Properties Act, 1976 (Act XIV of 1976).

64G. The Jammu and Kashmir Debtors' Relief Act, 1976 (Act XV of 1976).

---

1. Ins. by C.O. 70.
2. Item (iv) renumbered as item (ii) by C.O. 74.
3. Items (v) and (vi) omitted by C.O. 72.
4. Subs. by C.O. 95, for item (iii).
5. Item (vi) renumbered as item (iv) by C.O. 74.
6. Subs., *ibid.*, for sub-paragraph (24).
7. Numbered by C.O. 105.
8. Renumbered by C.O. 98.
9. Omitted by C.O. 106.
10. Renumbered, *ibid.*
11. Ins. by C.O. 106.

[1][[2][(ii)] 30ನೇ ನಮೂದಿಗೆ ಬದಲಾಗಿ "30. ಜನನ ಮರಣಗಳ ಅಂಕಿಅಂಶಗಳು.- ಜನನ ಮರಣಗಳ ನೋಂದಣಿಯನ್ನು ಒಳಗೊಂಡು ಅವು ಜನನ ಮರಣಗಳಿಗೆ ಸಂಬಂಧಪಡುವಷ್ಟರ ಮಟ್ಟಿಗೆ" ಎಂಬ ನಮೂದನ್ನು ಪ್ರತ್ಯಾಯೋಜಿಸತಕ್ಕದ್ದು;]

[3]* * * * * *

[4][(iii)3ನೇ ನಮೂದನ್ನು, 5 ರಿಂದ 10ನೇ ನಮೂದುಗಳನ್ನು (ಎರಡನ್ನೂ ಒಳಗೊಂಡು) 14, 15, 17, 20, 21, 27, 28, 29, 31, 32, 37, 38, 41 ಮತ್ತು 44ನೇ ನಮೂದುಗಳನ್ನು ಬಿಟ್ಟುಬಿಡತಕ್ಕದ್ದು;

(iiiಎ)42ನೇ ನಮೂದಿಗೆ ಬದಲಾಗಿ "42. ಸ್ವತ್ತಿನ ಆರ್ಜನೆ ಮತ್ತು ಕಡ್ಡಾಯ ಕೋರಿಕೆ, ಪಟ್ಟಿ I ರ 67ನೇ ನಮೂದಿನಲ್ಲಿ ಅಥವಾ ಪಟ್ಟಿ IIIರ 40ನೇ ನಮೂದಿನಲ್ಲಿ ಒಳಗೊಂಡಿರುವ ಯಾವುದೇ ಸ್ವತ್ತಿನ ಅಥವಾ ಕಲಾತ್ಮಕ ಅಥವಾ ಸೌಂದರ್ಯಾತ್ಮಕ ಮಹತ್ವವುಳ್ಳ ಯಾವುದೇ ಮಾನವ ನಿರ್ಮಿತ ಕಲಾಕೃತಿಯ ಆರ್ಜನೆಗೆ ಸಂಬಂಧಪಡುವಷ್ಟರ ಮಟ್ಟಿಗೆ;" ಎಂಬ ನಮೂದನ್ನು ಪ್ರತ್ಯಾಯೋಜಿಸತಕ್ಕದ್ದು; ಮತ್ತು

[5][(iv)45ನೇ ನಮೂದಿನಲ್ಲಿ "ಪಟ್ಟಿ II ಅಥವಾ ಪಟ್ಟಿ III ರಲ್ಲಿ" ಎಂಬ ಪದಗಳಿಗೆ ಮತ್ತು ಅಂಕಿಗಳಿಗೆ ಬದಲಾಗಿ, "ಈ ಪಟ್ಟಿಯಲ್ಲಿ" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

**(23) ಎಂಟನೆಯ ಅನುಸೂಚಿ.**

**[6][(24) ಒಂಬತ್ತನೆಯ ಅನುಸೂಚಿ.**

[7][(ಎ)] 64ನೇ ನಮೂದಿನ ತರುವಾಯ, ಈ ಕೆಳಕಂಡ ನಮೂದುಗಳನ್ನು ಸೇರಿಸತಕ್ಕದ್ದು, ಎಂದರೆ:-

[8]64ಎ. ಜಮ್ಮು ಮತ್ತು ಕಾಶ್ಮೀರ ರಾಜ್ಯ ಕುಥ್ ಅಧಿನಿಯಮ, (ಸಂವತ್ 1978ರ ಸಂಖ್ಯೆ I)

[8][64ಬಿ.] ಜಮ್ಮು ಮತ್ತು ಕಾಶ್ಮೀರ ಗೇಣಿದಾರಿಕೆ ಅಧಿನಿಯಮ (ಸಂವತ್ 1980ರ ಸಂಖ್ಯೆ II)

[8][64ಸಿ.] ಜಮ್ಮು ಮತ್ತು ಕಾಶ್ಮೀರ ಭೂ ಪರಭಾರೆ ಅಧಿನಿಯಮ (ಸಂವತ್ 1995ರ ಸಂಖ್ಯೆ V)

[9]* * * * *

[10][64ಡಿ.] ಜಮ್ಮು ಮತ್ತು ಕಾಶ್ಮೀರ ದೊಡ್ಡ ಭೂ ಎಸ್ಟೇಟುಗಳ ರದ್ದಿಯಾತಿ ಅಧಿನಿಯಮ (ಸಂವತ್ 2007ರ ಸಂಖ್ಯೆ XVII)

[10][64ಇ.] ಜಹಗೀರುಗಳ ಮತ್ತು ಭೂಕಂದಾಯ, ಇತ್ಯಾದಿಗಳ ಹಸ್ತಾಂತರಣದ ಪುನರ್ವಶ ಬಗೆಗಿನ 1951ರ ಆದೇಶ ಸಂಖ್ಯೆ 6-ಹೆಚ್ ದಿನಾಂಕ 10ನೇ ಮಾರ್ಚ್ 1951

[11][64ಎಫ್.] ಜಮ್ಮು ಮತ್ತು ಕಾಶ್ಮೀರ ಅಡಮಾನ ಸ್ವತ್ತುಗಳ ಪೂರ್ವಸ್ಥಿತಿ ಪ್ರಾಪ್ತಿ ಅಧಿನಿಯಮ, 1976 (1976ರ ಅಧಿನಿಯಮ XIV)

64ಜಿ. ಜಮ್ಮು ಮತ್ತು ಕಾಶ್ಮೀರ ಸಾಲಗಾರರ ಪರಿಹಾರ ಅಧಿನಿಯಮ, 1976 (1976ರ XV)

---

1. ಸಿ.ಓ. 70ರ ಮೂಲಕ ಸೇರಿಸಲಾಗಿದೆ.
2. ಸಿ.ಓ. 74ರ ಮೂಲಕ (iv) ನೇ ಬಾಬಿಗೆ (ii)ನೇ ಬಾಬು ಎಂದು ಪುನರ್ ಸಂಖ್ಯೆ ನೀಡಲಾಗಿದೆ.
3. ಸಿ.ಓ. 72ರ ಮೂಲಕ (v)ನೇ ಮತ್ತು (vi)ನೇ ಬಾಬುಗಳನ್ನು ಬಿಟ್ಟುಬಿಡಲಾಗಿದೆ.
4. ಸಿ.ಓ. 95ರ ಮೂಲಕ (iii)ನೇ ಬಾಬಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
5. ಸಿ.ಓ. 74ರ ಮೂಲಕ (vi) ನೇ ಬಾಬಿಗೆ (iv)ನೇ ಬಾಬು ಎಂದು ಪುನರ್ ಸಂಖ್ಯೆ ನೀಡಲಾಗಿದೆ.
6. ಸಿ.ಓ. 74ರ ಮೂಲಕ (24)ನೇ ಉಪಪ್ಯಾರಾಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.
7. ಸಿ.ಓ. 105ರ ಮೂಲಕ ಸಂಖ್ಯೆ ನೀಡಲಾಗಿದೆ.
8. ಸಿ.ಓ. 98ರ ಮೂಲಕ ಪುನರ್ ಸಂಖ್ಯೆ ನೀಡಲಾಗಿದೆ.
9. ಸಿ.ಓ. 106ರ ಮೂಲಕ ಬಿಟ್ಟುಬಿಡಲಾಗಿದೆ.
10. ಸಿ.ಓ. 106ರ ಮೂಲಕ ಪುನರ್ ಸಂಖ್ಯೆ ನೀಡಲಾಗಿದೆ.
11. ಸಿ.ಓ. 106ರ ಮೂಲಕ ಸೇರಿಸಲಾಗಿದೆ.

[1][(*b*) Entries 87 to 124, inserted by the Constitution (Thirty-ninth Amendment) Act, 1975, shall be renumbered as entries 65 to 102 respectively.]

[2][(*c*) Entries 125 to 188 shall be renumbered as entries 103 to 166 respectively.]

[3][**(25) TENTH SCHEDULE.**

(*a*) for the brackets, words and figures "Articles 102(2) and 191(2)", the brackets, word and figures "[Article 102(2)]" shall be substituted;

(*b*) in clause (a) of paragraph 1, the words "or the Legislative Assembly or, as the case may be, either House of the Legislature of a State" shall be omitted;

(*c*) in paragraph 2,—

(*i*) in sub-paragraph (1), in sub-clause (ii) of clause (b) of the *Explanation*, the words and figures "or, as the case may be, article 188" shall be omitted;

(*ii*) in sub-paragraph (3), the words and figures "or, as the case may be, article 188" shall be omitted;

(*iii*) in sub-paragraph (4), the reference to the commencement of the Constitution (Fifty-second Amendment) Act, 1985 shall be construed as a reference to the commencement of the Constitution (Application to Jammu and Kashmir) Amendment Order, 1989;

(*d*) in paragraph 5, the words "or the Chairman or the Deputy Chairman of the Legislative Council of a State or the Speaker or the Deputy Speaker of the Legislative Assembly of a State" shall be omitted;

(*e*) in sub-paragraph (2) of paragraph 6, the words and figures "or, as the case may be, proceedings in the Legislature of a State within the meaning of article 212" shall be omitted;

(*f*) in sub-paragraph (3) of paragraph 8, the words and figures "or, as the case may be, article 194," shall be omitted.]

---

1. Ins. by C.O. 105.
2. Ins. by C.O. 108 (w.e.f. 31-12-1977).
3. Ins. by C.O. 136.

[1][(ಬಿ) 1975ನೇ ಇಸವಿಯ ಸಂವಿಧಾನ (ಮೂವತ್ತೊಂಬತ್ತನೇ ತಿದ್ದುಪಡಿ) ಅಧಿನಿಯಮದ ಮೂಲಕ ಸೇರಿಸಿದ 87 ರಿಂದ 124ರ ವರೆಗಿನ ನಮೂದುಗಳಿಗೆ ಅನುಕ್ರಮವಾಗಿ 65ರಿಂದ 102ರ ವರೆಗಿನ ನಮೂದುಗಳೆಂದು ಪುನರ್‌ಸಂಖ್ಯೆ ನೀಡತಕ್ಕದ್ದು.]

[2][(ಸಿ) 125 ರಿಂದ 188ರ ವರೆಗಿನ ನಮೂದುಗಳಿಗೆ ಅನುಕ್ರಮವಾಗಿ 103 ರಿಂದ 166ರ ವರೆಗಿನ ನಮೂದುಗಳೆಂದು ಪುನರ್ ಸಂಖ್ಯೆ ನೀಡತಕ್ಕದ್ದು.]

[3][**(25) ಹತ್ತನೆಯ ಅನುಸೂಚಿ.**

(ಎ) "ಅನುಚ್ಛೇದಗಳು 102(2) ಮತ್ತು 191(2)" ಎಂಬ ಆವರಣಗಳಿಗೆ, ಪದಗಳಿಗೆ ಮತ್ತು ಅಂಕಿಗಳಿಗೆ ಬದಲಾಗಿ, "[ಅನುಚ್ಛೇದ 102 (2)]" ಎಂಬ ಆವರಣಗಳನ್ನು, ಪದಗಳನ್ನು ಮತ್ತು ಅಂಕಿಗಳನ್ನು ಪ್ರತ್ಯಾಯೋಜಿಸತಕ್ಕದ್ದು;

(ಬಿ)1ನೇ ಪ್ಯಾರಾದ (ಎ) ಖಂಡದಲ್ಲಿ "ಅಥವಾ ಒಂದು ರಾಜ್ಯದ ವಿಧಾನಸಭೆ ಅಥವಾ ಸಂದರ್ಭಾನುಸಾರ ಆ ರಾಜ್ಯದ ವಿಧಾನಮಂಡಲದ ಎರಡೂ ಸದನಗಳು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(ಸಿ) 2ನೇ ಪ್ಯಾರಾದಲ್ಲಿ,-

(i) (1)ನೇ ಉಪ-ಪ್ಯಾರಾದಲ್ಲಿ ವಿವರಣೆಯ (ಬಿ) ಖಂಡದ (ii)ನೇ ಉಪಖಂಡದಲ್ಲಿ, "ಅಥವಾ, ಸಂದರ್ಭಾನುಸಾರ 188ನೆಯ ಅನುಚ್ಛೇದದ" ಎಂಬ ಪದಗಳನ್ನು ಮತ್ತು ಅಂಕಿಗಳನ್ನು ಬಿಟ್ಟುಬಿಡತಕ್ಕದ್ದು;

(ii) (3)ನೇ ಉಪ-ಪ್ಯಾರಾದಲ್ಲಿ, "ಅಥವಾ, ಸಂದರ್ಭಾನುಸಾರ 188ನೆಯ ಅನುಚ್ಛೇದದ" ಎಂಬ ಪದಗಳನ್ನು ಮತ್ತು ಅಂಕಿಗಳನ್ನು ಬಿಟ್ಟುಬಿಡತಕ್ಕದ್ದು;

(iii) (4)ನೇ ಉಪ-ಪ್ಯಾರಾದಲ್ಲಿ, ಸಂವಿಧಾನ (ಐವತ್ತೆರಡನೇ ತಿದ್ದುಪಡಿ) ಅಧಿನಿಯಮ, 1985ರ ಪ್ರಾರಂಭಕ್ಕೆ ಮಾಡಿದ ಉಲ್ಲೇಖವನ್ನು, ಸಂವಿಧಾನ (ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯ) ತಿದ್ದುಪಡಿ ಆದೇಶ, 1989ರ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು;

(ಡಿ) 5ನೇ ಪ್ಯಾರಾದಲ್ಲಿ, "ಅಥವಾ ಒಂದು ರಾಜ್ಯದ ವಿಧಾನ ಪರಿಷತ್ತಿನ ಸಭಾಪತಿಯ ಅಥವಾ ಉಪ-ಸಭಾಪತಿಯ ಅಥವಾ ಒಂದು ರಾಜ್ಯದ ವಿಧಾನಸಭೆಯ ಅಧ್ಯಕ್ಷನ ಅಥವಾ ಉಪಾಧ್ಯಕ್ಷನ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(ಇ) 6ನೇ ಪ್ಯಾರಾದ (2)ನೇ ಉಪ-ಪ್ಯಾರಾದಲ್ಲಿ "ಅಥವಾ, ಸಂದರ್ಭಾನುಸಾರ, 212ನೇ ಅನುಚ್ಛೇದದ ಅರ್ಥವ್ಯಾಪ್ತಿಯೊಳಗೆ ಒಂದು ರಾಜ್ಯದ ವಿಧಾನಮಂಡಲದ ವ್ಯವಹರಣೆಗಳೆಂದು" ಎಂಬ ಪದಗಳನ್ನು ಮತ್ತು ಅಂಕಿಗಳನ್ನು ಬಿಟ್ಟುಬಿಡತಕ್ಕದ್ದು;

(ಎಫ್) 8ನೇ ಪ್ಯಾರಾದ (3)ನೇ ಉಪ-ಪ್ಯಾರಾದಲ್ಲಿ "ಅಥವಾ, ಸಂದರ್ಭಾನುಸಾರ, 194ನೇ ಅನುಚ್ಛೇದದ" ಎಂಬ ಪದಗಳನ್ನು ಮತ್ತು ಅಂಕಿಗಳನ್ನು ಬಿಟ್ಟುಬಿಡತಕ್ಕದ್ದು.]

---

1. ಸಿ.ಓ. 105ರ ಮೂಲಕ ಸೇರಿಸಲಾಗಿದೆ.
2. ಸಿ.ಓ. 108ರ ಮೂಲಕ (31.12.1977 ರಿಂದ ಜಾರಿಗೆ ಬರುವಂತೆ) ಸೇರಿಸಲಾಗಿದೆ.
3. ಸಿ.ಓ. 136ರ ಮೂಲಕ ಸೇರಿಸಲಾಗಿದೆ.

# APPENDIX II

## RE-STATEMENT, WITH REFERENCE TO THE PRESENT TEXT OF THE CONSTITUTION, OF THE EXCEPTIONS AND MODIFICATIONS SUBJECT TO WHICH THE CONSTITUTION APPLIES TO THE STATE OF JAMMU AND KASHMIR

[***Note.***— The exceptions and modifications subject to which the Constitution applies to the State of Jammu and Kashmir are either those provided in the Constitution (Application to Jammu and Kashmir) Order, 1954 or those consequential to the non-application to the State of Jammu and Kashmir of certain amendments to the Constitution. All the exceptions and modifications which have a practical significance are included in the re-statement which is only for facility of quick reference. For ascertaining the exact position, reference will have to be made to the Constitution (Application to Jammu and Kashmir) Order, 1954 and to the text of the Constitution on the 20th June, 1964, as amended by the subsequent amendments to the Constitution mentioned in clause 2 of the said Order.]

**(1) THE PREAMBLE.**

(a) In the first paragraph, omit "SOCIALIST SECULAR";

(b) in the penultimate paragraph, omit "and integrity".

**(2) PART I.**

*Article* 3.—

(a) Add the following further proviso, namely:—

"Provided further that no Bill providing for increasing or diminishing the area of the State of Jammu and Kashmir or altering the name or boundary of that State shall be introduced in Parliament without the consent of the Legislature of that State.";

(b) omit *Explanation* I and *Explanation* II.

**(3) PART II.**

(*a*) This Part shall be deemed to have been applicable in relation to the State of Jammu and Kashmir as from the 26th day of January, 1950.

(*b*) Article 7.— Add the following further proviso, namely:—

"Provided further that nothing in this article shall apply to a permanent resident of the State of Jammu and Kashmir who, after having so migrated to the territory now included in Pakistan, returns to that territory of that State under a permit for resettlement in that State or permanent return issued by or under the authority of any law made by the Legislature of that State, and every such person shall be deemed to be a citizen of India.".

## ಪರಿಶಿಷ್ಟ – II

## ಯಾವ ವಿನಾಯಿತಿಗಳಿಗೆ ಮತ್ತು ಮಾರ್ಪಾಟುಗಳಿಗೆ ಒಳಪಟ್ಟು ಸಂವಿಧಾನವು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯವಾಗುವುದೋ ಆ ವಿನಾಯಿತಿಗಳ ಮತ್ತು ಆ ಮಾರ್ಪಾಟುಗಳ ಮರು ವಿವರಣೆ, ಸಂವಿಧಾನದ ಈಗಿನ ಪಾಠಕ್ಕೆ ಉಲ್ಲೇಖದ ಸಹಿತ

[**ಟಿಪ್ಪಣಿ:**– ಯಾವ ವಿನಾಯಿತಿಗಳಿಗೆ ಮತ್ತು ಮಾರ್ಪಾಟುಗಳಿಗೆ ಒಳಪಟ್ಟು ಸಂವಿಧಾನವು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯವಾಗುವುದೋ ಆ ವಿನಾಯಿತಿಗಳು ಮತ್ತು ಮಾರ್ಪಾಟುಗಳು, 1954ನೇ ಇಸವಿಯ ಸಂವಿಧಾನ (ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯ) ಆದೇಶದಲ್ಲಿ ಉಪಬಂಧಿಸಿದವುಗಳಾಗಿವೆ ಅಥವಾ ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಸಂವಿಧಾನದ ಕೆಲವು ತಿದ್ದುಪಡಿಗಳು ಅನ್ವಯವಾಗದಿರುವ ಪರಿಣಾಮವಾಗಿ ಕಲ್ಪಿಸಿದ ಉಪಬಂಧಗಳಾಗಿವೆ. ವ್ಯಾವಹಾರಿಕ ಮಹತ್ವ ಇರುವಂಥ ಎಲ್ಲ ವಿನಾಯತಿಗಳನ್ನು ಮತ್ತು ಮಾರ್ಪಾಟುಗಳನ್ನು ಮರು ವಿವರಣೆಯಲ್ಲಿ ಸೇರ್ಪಡೆ ಮಾಡಲಾಗಿದೆ. ಶೀಘ್ರ ಪರಾಮರ್ಶೆಗಾಗಿ ಮಾತ್ರ ಈ ಅನುಕೂಲ ಕಲ್ಪಿಸಲಾಗಿದೆ. ಸರಿಯಾದ ಸ್ಥಿತಿಯನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ 1954ನೇ ಇಸವಿಯ ಸಂವಿಧಾನ (ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯ) ಆದೇಶಕ್ಕೆ ಮತ್ತು ಸದರಿ ಆದೇಶದ 2ನೇ ಖಂಡದಲ್ಲಿ ಹೇಳಿದ ಸಂವಿಧಾನದ ಅನಂತರದ ತಿದ್ದುಪಡಿಗಳ ಮೂಲಕ ತಿದ್ದುಪಡಿ ಆದಂತೆ 1964ರ ಜೂನ್ 20 ರಂದು ಇದ್ದ ಸಂವಿಧಾನದ ಪಾಠಕ್ಕೆ ಉಲ್ಲೇಖಗಳನ್ನು ಮಾಡಬೇಕಾಗುತ್ತದೆ.]

**(1) ಪ್ರಸ್ತಾವನೆ.**

(ಎ) ಮೊದಲನೇ ಪ್ಯಾರಾದಲ್ಲಿ "ಸಮಾಜವಾದಿ ಸರ್ವಧರ್ಮ ಸಮಭಾವದ" ಎಂಬುದನ್ನು ಬಿಟ್ಟುಬಿಡತಕ್ಕದ್ದು.

(ಬಿ) ಉಪಾಂತ್ಯ ಪ್ಯಾರಾದಲ್ಲಿ "ಹಾಗೂ ಅಖಂಡತೆಯನ್ನು" ಎಂಬುದನ್ನು ಬಿಟ್ಟುಬಿಡತಕ್ಕದ್ದು.

**(2) ಭಾಗ – I.**

ಅನುಚ್ಛೇದ 3 ರಲ್ಲಿ.–

(ಎ) ಈ ಮುಂದಿನ ಇನ್ನೊಂದು ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತೂ ಪರಂತು, ಜಮ್ಮು ಮತ್ತು ಕಾಶ್ಮೀರ ರಾಜ್ಯದ ಪ್ರದೇಶವನ್ನು ಹೆಚ್ಚಿಸುವುದಕ್ಕೆ ಅಥವಾ ಕಡಿಮೆ ಮಾಡುವುದಕ್ಕೆ ಅಥವಾ ಆ ರಾಜ್ಯದ ಹೆಸರನ್ನು ಅಥವಾ ಸರಹದ್ದನ್ನು ಬದಲಾಯಿಸುವುದಕ್ಕೆ ಉಪಬಂಧಿಸುವ ಯಾವುದೇ ವಿಧೇಯಕವನ್ನು ಆ ರಾಜ್ಯದ ವಿಧಾನಮಂಡಲದ ಸಮ್ಮತಿಯಿಲ್ಲದೆಯೇ ಸಂಸತ್ತಿನಲ್ಲಿ ಮಂಡಿಸತಕ್ಕದ್ದಲ್ಲ.";

(ಬಿ) ವಿವರಣೆ I ಮತ್ತು ವಿವರಣೆ II ನ್ನು ಬಿಟ್ಟುಬಿಡತಕ್ಕದ್ದು.

**(3) ಭಾಗ – II.**

(ಎ) ಈ ಭಾಗವು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಸಂಬಂಧಿಸಿದಂತೆ 1950ರ ಜನವರಿ 26ನೇ ದಿನದಿಂದ ಅನ್ವಯವಾಗಿರುವುದಾಗಿ ಭಾವಿಸತಕ್ಕದ್ದು.

(ಬಿ) ಅನುಚ್ಛೇದ 7.– ಈ ಮುಂದಿನ ಇನ್ನೊಂದು ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತೂ ಪರಂತು, ಈ ಅನುಚ್ಛೇದದಲ್ಲಿ ಇರುವುದು ಯಾವುದೂ, ಜಮ್ಮು ಮತ್ತು ಕಾಶ್ಮೀರ ರಾಜ್ಯದ ಖಾಯಂ ನಿವಾಸಿಯಾಗಿದ್ದು, ಈಗ ಪಾಕಿಸ್ತಾನದಲ್ಲಿ ಒಳಗೊಂಡಿರುವ ರಾಜ್ಯ ಕ್ಷೇತ್ರಕ್ಕೆ ಹಾಗೆ ವಲಸೆ ಹೋದ ಬಳಿಕ, ಆ ರಾಜ್ಯದಲ್ಲಿ ಮತ್ತೆ ನೆಲೆಸುವುದಕ್ಕಾಗಿ ಅಥವಾ ಖಾಯಂ ಆಗಿ ಹಿಂತಿರುಗುವುದಕ್ಕಾಗಿ, ಆ ರಾಜ್ಯದ ವಿಧಾನಮಂಡಲವು ರಚಿಸಿದ ಯಾವುದೇ ಕಾನೂನಿನ ಅಧಿಕಾರದ ಮೂಲಕ ಅಥವಾ ಮೇರೆಗೆ ಕೊಟ್ಟ ಪರ್ಮಿಟ್ಟಿನ ಮೇರೆಗೆ ಆ ರಾಜ್ಯದ ರಾಜ್ಯ ಕ್ಷೇತ್ರಕ್ಕೆ ವಾಪಸು ಬರುವವನಿಗೆ ಅನ್ವಯವಾಗತಕ್ಕದ್ದಲ್ಲ ಮತ್ತು ಅಂಥ ಪ್ರತಿಯೊಬ್ಬ ವ್ಯಕ್ತಿಯನ್ನು ಭಾರತದ ನಾಗರಿಕನೆಂದು ಭಾವಿಸತಕ್ಕದ್ದು".

**(4) PART III.**

(*a*) *Article* 13.—References to the commencement of the Constitution shall be construed as references to the commencement of the Constitution (Application to Jammu and Kashmir) Order, 1954 (C.O. 48), *i.e.*, the 14th day of May, 1954.

* * * * *

(*c*) *Article* 16.— In clause (3), reference to the State shall be construed as not including a reference to the State of Jammu and Kashmir.

(*d*) *Article* 19.—

(A) In clause (1),—

(*i*) in sub-clause (*e*), omit "and" at the end;

(*ii*) after sub-clause (*e*), insert the following clause, namely:—

"*(f)* to acquire, hold and dispose of property; and";

(B) in clause (5), for "sub-clauses (*d*) and (*e*)", substitute "subclauses (*d*), (*e*) and (*f*)".

(*e*) Article 22.— In clauses (4) and (7), for "Parliament", substitute "the Legislature of the State".

(*f*) Article 30.—Omit clause (1A).

(*g*) After article 30, insert the following, namely:—

***"Right to Property***

**31. Compulsory acquisition of property.—** (1) No person shall be deprived of his property save by authority of law.

(2) No property shall be compulsorily acquired or requisitioned save for a public purpose and save by authority of a law which provides for acquisition or requisitioning of the property for an amount which may be fixed by such law or which may be determined in accordance with such principles and given in such manner as may be specified in such law; and no such law shall be called in question in any court on the ground that the amount so fixed or determined is not adequate or that the whole or any part of such amount is to be given otherwise than in cash:

Provided that in making any law providing for the compulsory acquisition of any property of an educational institution established and administered by a minority, referred to in clause (1) of article 30, the State shall ensure that the amount fixed by or determined under such law for the acquisition of such property is such as would not restrict or abrogate the right guaranteed under that clause.

**(4) ಭಾಗ – III.**

(ಎ) ಅನುಚ್ಛೇದ 13.– ಸಂವಿಧಾನದ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳನ್ನು ಸಂವಿಧಾನ (ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯ) ಆದೇಶ, 1954ರ (ಸಿ.ಒ. 48ರ) ಪ್ರಾರಂಭಕ್ಕೆ ಎಂದರೆ, 1954ರ ಮೇ ತಿಂಗಳ 14ನೆಯ ದಿನಕ್ಕೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು.

* * * * *

(ಸಿ) ಅನುಚ್ಛೇದ 16.– (3)ನೇ ಖಂಡದಲ್ಲಿ ರಾಜ್ಯಕ್ಕೆ ಮಾಡಿದ ಉಲ್ಲೇಖವು ಜಮ್ಮು ಮತ್ತು ಕಾಶ್ಮೀರ ರಾಜ್ಯದ ಉಲ್ಲೇಖವನ್ನು ಒಳಗೊಳ್ಳುವುದಿಲ್ಲವೆಂದು ಅರ್ಥೈಸತಕ್ಕದ್ದು.

(ಡಿ) ಅನುಚ್ಛೇದ 19.–

(ಎ) (1)ನೇ ಖಂಡದಲ್ಲಿ,–

(i) (ಇ) ಉಪಖಂಡದಲ್ಲಿ, ಕೊನೆಯಲ್ಲಿರುವ "ಮತ್ತು" ಎಂಬುದನ್ನು ಬಿಟ್ಟುಬಿಡತಕ್ಕದ್ದು;

(ii) (ಇ) ಉಪಖಂಡದ ನಂತರ ಈ ಮುಂದಿನ ಖಂಡವನ್ನು ಸೇರಿಸತಕ್ಕದ್ದು, ಎಂದರೆ:–

"(ಎಫ್) ಸ್ವತ್ತನ್ನು ಆರ್ಜಿಸುವುದಕ್ಕೆ, ಧಾರಣ ಮಾಡುವುದಕ್ಕೆ ಮತ್ತು ವಿಲೆ ಮಾಡುವುದಕ್ಕೆ; ಮತ್ತು";

(ಬಿ) (5)ನೇ ಖಂಡದಲ್ಲಿ "(ಡಿ) ಮತ್ತು (ಇ) ಉಪಖಂಡಗಳಿಂದ" ಎಂಬ ಪದಗಳ ಬದಲಾಗಿ "(ಡಿ), (ಇ) ಮತ್ತು (ಎಫ್) ಉಪಖಂಡಗಳಿಂದ" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

(ಇ) ಅನುಚ್ಛೇದ 22.– (4)ನೇ ಮತ್ತು (7)ನೇ ಖಂಡಗಳಲ್ಲಿ "ಸಂಸತ್ತು" ಎಂಬ ಪದಕ್ಕೆ ಬದಲಾಗಿ "ರಾಜ್ಯ ವಿಧಾನಮಂಡಲವು" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

(ಎಫ್) ಅನುಚ್ಛೇದ 30.– (1ಎ) ಖಂಡವನ್ನು ಬಿಟ್ಟುಬಿಡತಕ್ಕದ್ದು.

(ಜಿ) 30ನೇ ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"ಸ್ವತ್ತಿನ ಹಕ್ಕು**

**31. ಸ್ವತ್ತಿನ ಕಡ್ಡಾಯ ಆರ್ಜನೆ.**– (1) ಯಾರೇ ವ್ಯಕ್ತಿಯನ್ನು, ಕಾನೂನಿನ ಅಧಿಕಾರದ ಹೊರತು ಅವನ ಸ್ವತ್ತಿನಿಂದ ವಂಚಿಸತಕ್ಕದ್ದಲ್ಲ.

(2) ಯಾವುದೇ ಸ್ವತ್ತನ್ನು ಒಂದು ಸಾರ್ವಜನಿಕ ಉದ್ದೇಶಕ್ಕೋಸ್ಕರವಲ್ಲದೆ ಮತ್ತು ಕಾನೂನಿನ ಅಧಿಕಾರದ, ಎಂದರೆ ಅಂಥ ಕಾನೂನು ನಿಗದಿ ಮಾಡಬಹುದಾದ ಅಥವಾ ಅದರಲ್ಲಿ ನಿರ್ದಿಷ್ಟಪಡಿಸಬಹುದಾದ ತತ್ವಗಳಿಗನುಸಾರವಾಗಿ ನಿರ್ಧರಿಸಬಹುದಾದ ಮತ್ತು ಅಂತಹ ರೀತಿಯಲ್ಲಿ ಕೊಡಬಹುದಾದ ಹಣಕ್ಕಾಗಲಿ ಸ್ವತ್ತನ್ನು ಆರ್ಜನೆ ಮಾಡಲು ಅಥವಾ ಕಡ್ಡಾಯ ಆರ್ಜನೆ ಮಾಡಲು ಉಪಬಂಧ ಕಲ್ಪಿಸುವಂತಹ ಒಂದು ಕಾನೂನಿನ ಅಧಿಕಾರದ ಮೇರೆಗಲ್ಲದೆ ಆರ್ಜನೆ ಅಥವಾ ಕಡ್ಡಾಯ ಆರ್ಜನೆ ಮಾಡತಕ್ಕದ್ದಲ್ಲ ಮತ್ತು ಹಾಗೆ ನಿಗದಿಮಾಡಿದ ಅಥವಾ ನಿರ್ಧರಿಸಿದ ಹಣವು ಸಾಕಷ್ಟಿಲ್ಲವೆಂಬ ಕಾರಣದ ಮೇಲೆ ಅಥವಾ ಆ ಹಣವನ್ನು ಪೂರ್ತಿಯಾಗಿ ಇಲ್ಲವೆ ಅದರ ಯಾವುದೇ ಭಾಗವನ್ನು ನಗದು ರೂಪದಲ್ಲಲ್ಲದೆ ಬೇರೆ ರೀತಿಯಲ್ಲಿ ಕೊಡಬೇಕಾಗುತ್ತದೆ ಎಂಬ ಕಾರಣದ ಮೇಲೆ ಅಂತಹ ಯಾವುದೇ ಕಾನೂನನ್ನು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸತಕ್ಕದ್ದಲ್ಲ:

ಪರಂತು, 30ನೇ ಅನುಚ್ಛೇದದ (1)ನೇ ಖಂಡದಲ್ಲಿ ಉಲ್ಲೇಖಿಸಿದ ಅಲ್ಪಸಂಖ್ಯಾತ ವರ್ಗದಿಂದ ಸ್ಥಾಪಿತವಾದ ಮತ್ತು ಅದು ಆಡಳಿತ ನಡೆಸುತ್ತಿರುವ ಯಾವುದೇ ಒಂದು ಶೈಕ್ಷಣಿಕ ಸಂಸ್ಥೆಯ ಯಾವುದೇ ಸ್ವತ್ತನ್ನು ಕಡ್ಡಾಯವಾಗಿ ಆರ್ಜನೆ ಮಾಡುವುದಕ್ಕಾಗಿ ಉಪಬಂಧಿಸುವ ಯಾವುದೇ ಕಾನೂನನ್ನು ಮಾಡುವಾಗ ರಾಜ್ಯವು ಅಂತಹ ಸ್ವತ್ತಿನ ಆರ್ಜನೆಗಾಗಿ ಅಂಥ ಕಾನೂನಿನ ಮೂಲಕ ನಿಗದಿಪಡಿಸಿರುವ ಅಥವಾ ಅದರ ಮೇರೆಗೆ ನಿರ್ಧರಿಸಿದ ಹಣವು ಆ ಖಂಡದ ಮೇರೆಗೆ ಖಾತ್ರಿ ಕೊಡಲಾದ ಹಕ್ಕಿಗೆ ನಿರ್ಬಂಧವನ್ನು ಉಂಟುಮಾಡುವುದಿಲ್ಲ ಅಥವಾ ಅಂತಹ ಹಕ್ಕನ್ನು ರದ್ದುಪಡಿಸುವುದಿಲ್ಲ ಎಂಬುದನ್ನು ರಾಜ್ಯವು ಖಚಿತಪಡಿಸಿಕೊಳ್ಳತಕ್ಕದ್ದು.

(2A) Where a law does not provide for the transfer of the ownership or right to possession of any property to the State or to a Corporation owned or controlled by the State, it shall not be deemed to provide for the compulsory acquisition or requisitioning of property, notwithstanding that it deprives any person of his property.

(2B) Nothing in sub-clause (f) of clause (1) of article 19 shall affect any such law as is referred to in clause (2).

* * * * *

(5) Nothing in clause 2 shall affect—

(*a*) the provisions of any existing law; or

(*b*) the provisions of any law which the State may hereafter make—

(*i*) for the purpose of imposing or levying any tax or penalty; or

(*ii*) for the promotion of public health or the prevention of danger to life or property; or

(*iii*) with respect to property declared by law to be evacuee property."

* * * * *

(*h*) After article 31, omit the following sub-heading, namely:—

***"Saving of Certain Laws"***

(*i*) *Article* 31A.—

(*A*) In clause (1),—

(*i*) for "article 14 or article 19", substitute "article 14, article 19 or article 31";

(*ii*) omit the first proviso to clause (1);

(*iii*) in the second proviso omit "further";

(*B*) in clause (2), for sub-clause (*a*), substitute the following sub-clause, namely:—

'(*a*) "estate" shall mean land which is occupied or has been let for agricultural purposes or for purposes subservient to agriculture, or for pasture, and includes—

(2ಎ) ರಾಜ್ಯಕ್ಕೆ ಅಥವಾ ರಾಜ್ಯದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಒಂದು ನಿಗಮಕ್ಕೆ ಯಾವುದೇ ಸ್ವತ್ತಿನ ಒಡೆತನವನ್ನು ಅಥವಾ ಅದರ ಸ್ವಾಧೀನತೆಯ ಅಧಿಕಾರವನ್ನು ವರ್ಗಾಯಿಸಲು ಯಾವುದೇ ಕಾನೂನು ಉಪಬಂಧ ಕಲ್ಪಿಸದಿರದಿರುವಲ್ಲಿ, ಅದು ಯಾರೇ ವ್ಯಕ್ತಿಯನ್ನು ಅವನ ಸ್ವತ್ತಿನಿಂದ ವಂಚಿಸಿದ್ದಾಗ್ಯೂ ಆ ಕಾನೂನು, ಸ್ವತ್ತನ್ನು ಕಡ್ಡಾಯವಾಗಿ ಆರ್ಜನೆ ಮಾಡಲು ಅಥವಾ ಕಡ್ಡಾಯವಾಗಿ ಕೋರಲು ಉಪಬಂಧ ಕಲ್ಪಿಸುವುದೆಂದು ಭಾವಿಸತಕ್ಕದ್ದಲ್ಲ.

(2ಬಿ) 19ನೇ ಅನುಚ್ಛೇದದ (1)ನೇ ಖಂಡದ (ಎಫ್) ಉಪಖಂಡದಲ್ಲಿ ಇರುವುದು ಯಾವುದೂ, (2)ನೇ ಖಂಡದಲ್ಲಿ ಉಲ್ಲೇಖಿಸಿದ ಯಾವುದೇ ಅಂಥ ಕಾನೂನನ್ನು ಬಾಧಿಸತಕ್ಕದ್ದಲ್ಲ.

*        *        *        *        *

(5) (2)ನೇ ಖಂಡದಲ್ಲಿ ಇರುವುದು ಯಾವುದೂ–

(ಎ) ಅಸ್ತಿತ್ವದಲ್ಲಿರುವ ಯಾವುದೇ ಕಾನೂನಿನ ಉಪಬಂಧಗಳಿಗೆ; ಅಥವಾ

(ಬಿ) ಇನ್ನು ಮುಂದೆ ರಾಜ್ಯವು–

(i) ಯಾವುದೇ ತೆರಿಗೆಯನ್ನು ಅಥವಾ ದಂಡವನ್ನು ವಿಧಿಸುವ ಅಥವಾ ಹಾಕುವ ಉದ್ದೇಶಕ್ಕಾಗಿ; ಅಥವಾ

(ii) ಸಾರ್ವಜನಿಕ ಆರೋಗ್ಯವನ್ನು ಸಂವರ್ಧಿಸುವುದಕ್ಕಾಗಿ ಅಥವಾ ಪ್ರಾಣಕ್ಕೆ ಅಥವಾ ಸ್ವತ್ತಿಗೆ ಉಂಟಾಗುವ ಅಪಾಯವನ್ನು ತಡೆಗಟ್ಟುವುದಕ್ಕಾಗಿ; ಅಥವಾ

(iii) ನಿರ್ವಾಸಿತರ ಸ್ವತ್ತಾಗಬೇಕೆಂದು ಕಾನೂನಿನ ಮೂಲಕ ಘೋಷಿಸಿದ ಸ್ವತ್ತಿಗೆ ಸಂಬಂಧಿಸಿದಂತೆ

– ಮಾಡುವ ಯಾವುದೇ ಕಾನೂನಿನ ಉಪಬಂಧಗಳಿಗೆ ಬಾಧಕ ಉಂಟುಮಾಡತಕ್ಕದ್ದಲ್ಲ."

*        *        *        *        *

(ಹೆಚ್) 31ನೇ ಅನುಚ್ಛೇದದ ತರುವಾಯ ಈ ಮುಂದಿನ ಉಪಶೀರ್ಷಿಕೆಯನ್ನು ಬಿಟ್ಟುಬಿಡತಕ್ಕದ್ದು, ಎಂದರೆ:–

**"ಕೆಲವು ಕಾನೂನುಗಳನ್ನು ಉಳಿಸುವುದು"**

(ಐ) ಅನುಚ್ಛೇದ 31ಎ.–

(ಎ) (1)ನೇ ಖಂಡದಲ್ಲಿ,–

(i) "14ನೆಯ ಅನುಚ್ಛೇದದಿಂದ ಅಥವಾ 19ನೆಯ ಅನುಚ್ಛೇದದಿಂದ" ಎಂಬ ಪದಗಳ ಬದಲಾಗಿ "14ನೆಯ ಅನುಚ್ಛೇದದಿಂದ, 19ನೆಯ ಅನುಚ್ಛೇದದಿಂದ ಅಥವಾ 31ನೆಯ ಅನುಚ್ಛೇದದಿಂದ" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು;

(ii) (1)ನೇ ಖಂಡದ ಮೊದಲನೇ ಪರಂತುಕವನ್ನು ಬಿಟ್ಟುಬಿಡತಕ್ಕದ್ದು;

(iii) ಎರಡನೇ ಪರಂತುಕದಲ್ಲಿ "ಮತ್ತೂ" ಎಂಬ ಪದವನ್ನು ಬಿಟ್ಟುಬಿಡತಕ್ಕದ್ದು;

(ಬಿ) (2)ನೇ ಖಂಡದಲ್ಲಿ (ಎ) ಉಪಖಂಡದ ಬದಲಾಗಿ ಈ ಮುಂದಿನ ಉಪಖಂಡವನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

'(ಎ) "ಎಸ್ಟೇಟು" ಎಂದರೆ ಕೃಷಿ ಉದ್ದೇಶಗಳಿಗಾಗಿ ಅಥವಾ ಕೃಷಿಗೆ ಸಾಧಕವಾದ ಉದ್ದೇಶಗಳಿಗಾಗಿ ಅಥವಾ ಹುಲ್ಲುಗಾವಲಿಗಾಗಿ ಅಧಿಭೋಗದಲ್ಲಿರುವ ಅಥವಾ ಗುತ್ತಿಗೆಗೆ ಕೊಟ್ಟಿರುವ ಭೂಮಿ, ಮತ್ತು,–

(*i*) sites of buildings and other structures on such land;

(*ii*) trees standing on such land;

(*iii*) forest land and wooded waste;

(*iv*) area covered by or fields floating over water;

(*v*) sites of *jandars* and *gharats;*

(*vi*) any *jagir, inam, muafi* or *mukarrari* or other similar grant,

but does not include—

(*i*) the site of any building in any town, or town area or village *abadi* or any land appurtenant to any such building or site;

(*ii*) any land which is occupied as the site of a town or village; or

(*iii*) any land reserved for building purposes in a municipality or notified area or cantonment or town area or any area for which a town planning scheme is sanctioned;'.

(*j*) *Article* 31C.— This article is not applicable to the State of Jammu and Kashmir.

(*k*) *Article* 32.— Omit clause (3).

(*l*) *Article* 35.—

(*A*) References to the commencement of the Constitution shall be construed as references to the commencement of the Constitution (Application to Jammu and Kashmir) Order, 1954 (C.O. 48), *i.e.*, the 14th day of May, 1954;

(*B*) in clause (a) (i), omit "clause (3) of article 16, clause (3) of article 32";

(*C*) after clause (*b*), add the following clause, namely:—

"(*c*) no law with respect to preventive detention made by the Legislature of the State of Jammu and Kashmir, whether before or after the commencement of the Constitution (Application to Jammu and Kashmir) Order, 1954, shall be void on the ground that it is inconsistent with any of the provisions of this Part, but any such law shall, to the extent of such inconsistency, cease to have effect on the expiration of twenty-five years from the commencement of the said Order, except as respects things done or omitted to be done before the expiration thereof.".

(i) ಅಂತಹ ಭೂಮಿಯ ಮೇಲಿರುವ ಕಟ್ಟಡಗಳ ನಿವೇಶನಗಳನ್ನು ಮತ್ತು ಇತರ ಕಟ್ಟಡಗಳನ್ನು;

(ii) ಅಂತಹ ಭೂಮಿಯ ಮೇಲೆ ನಿಂತಿರುವ ಮರಗಳನ್ನು;

(iii) ಅರಣ್ಯ ಭೂಮಿಯನ್ನು ಮತ್ತು ಅರಣ್ಯ ಬಂಜರು ಭೂಮಿಯನ್ನು;

(iv) ಜಲಾವೃತ ಪ್ರದೇಶ ಅಥವಾ ನೀರಿನಲ್ಲಿ ತೇಲುವ ಹೊಲಗದ್ದೆಗಳನ್ನು;

(v) ಜಂದಾರ್ ಮತ್ತು ಘರಾಟ್‌ಗಳ ನಿವೇಶನಗಳನ್ನು;

(vi) ಯಾವುದೇ ಜಾಗೀರು, ಇನಾಮು, ಮುವಾಫಿ ಅಥವಾ ಮುಕರರಿ ಅಥವಾ ಅಂಥದೇ ಇತರ ಮಂಜೂರಾತಿಯನ್ನು

- ಒಳಗೊಳ್ಳುತ್ತದೆ, ಆದರೆ,-

(i) ಯಾವುದೇ ಪಟ್ಟಣದಲ್ಲಿರುವ ಅಥವಾ ಪಟ್ಟಣ ಪ್ರದೇಶದಲ್ಲಿರುವ ಅಥವಾ ಗ್ರಾಮ ಅಬಾಧಿಯಲ್ಲಿರುವ ಯಾವುದೇ ಕಟ್ಟಡದ ನಿವೇಶನವು ಅಥವಾ ಅಂತಹ ಕಟ್ಟಡಕ್ಕೆ ಅಥವಾ ನಿವೇಶನಕ್ಕೆ ಲಗತ್ತಾದ ಯಾವುದೇ ಭೂಮಿಯು;

(ii) ಪಟ್ಟಣದ ಅಥವಾ ಗ್ರಾಮದ ನಿವೇಶನವಾಗಿ ಅಧಿಭೋಗದಲ್ಲಿರುವ ಯಾವುದೇ ಭೂಮಿಯು; ಅಥವಾ

(iii) ಪುರಸಭೆಯ ಅಥವಾ ಅಧಿಸೂಚಿತ ಪ್ರದೇಶದಲ್ಲಿ ಅಥವಾ ದಂಡು ಪ್ರದೇಶದಲ್ಲಿ ಅಥವಾ ಪಟ್ಟಣ ಪ್ರದೇಶದಲ್ಲಿ ಅಥವಾ ಪಟ್ಟಣ ಯೋಜನೆಯ ಪರಿಯೋಜನೆಯು ಮಂಜೂರಾದ ಯಾವುದೇ ಪ್ರದೇಶದಲ್ಲಿ ಕಟ್ಟಡದ ಉದ್ದೇಶಗಳಿಗಾಗಿ ಕಾಯ್ದಿರಿಸಿದ ಯಾವುದೇ ಭೂಮಿಯು,

- ಒಳಗೊಳ್ಳುವುದಿಲ್ಲ;'

(ಜೆ) ಅನುಚ್ಛೇದ 31ಸಿ.- ಈ ಅನುಚ್ಛೇದವು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯವಾಗುವುದಿಲ್ಲ.

(ಕೆ) ಅನುಚ್ಛೇದ 32.- (3)ನೇ ಖಂಡವನ್ನು ಬಿಟ್ಟುಬಿಡತಕ್ಕದ್ದು.

(ಎಲ್) ಅನುಚ್ಛೇದ 35.-

(ಎ) ಸಂವಿಧಾನದ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳನ್ನು ಸಂವಿಧಾನ (ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯ) ಆದೇಶ, 1954ರ (ಸಿ.ಓ. 48ರ) ಪ್ರಾರಂಭಕ್ಕೆ ಎಂದರೆ, 1954ರ ಮೇ ತಿಂಗಳ 14ನೆಯ ದಿನಕ್ಕೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು;

(ಬಿ) ಖಂಡ (ಎ) (i) ರಲ್ಲಿ "16ನೆಯ ಅನುಚ್ಛೇದದ (3)ನೆಯ ಖಂಡವನ್ನು, 32ನೆಯ ಅನುಚ್ಛೇದದ (3)ನೆಯ ಖಂಡವನ್ನು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(ಸಿ) (ಬಿ) ಖಂಡದ ತರುವಾಯ ಈ ಮುಂದಿನ ಖಂಡವನ್ನು ಸೇರಿಸತಕ್ಕದ್ದು, ಎಂದರೆ:-

"(ಸಿ) ಸಂವಿಧಾನ (ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯ) ಆದೇಶ, 1954ರ ಪ್ರಾರಂಭಕ್ಕೆ ಮುಂಚಿತವಾಗಿಯಾಗಲಿ ಅಥವಾ ಆನಂತರವಾಗಲಿ ಜಮ್ಮು ಮತ್ತು ಕಾಶ್ಮೀರ ರಾಜ್ಯದ ವಿಧಾನಮಂಡಲವು ಮಾಡಿದ ಪ್ರತಿಬಂಧಕ ಸ್ಥಾನಬದ್ಧತೆಗೆ ಸಂಬಂಧಿಸಿದ ಯಾವುದೇ ಕಾನೂನು, ಈ ಭಾಗದ ಉಪಬಂಧಗಳಿಗೆ ಅಸಂಗತವಾಗಿದೆಯೆಂಬ ಕಾರಣದ ಮೇಲೆ ಅನೂರ್ಜಿತವಾಗತಕ್ಕದ್ದಲ್ಲ, ಆದರೆ, ಯಾವುದೇ ಅಂಥ ಕಾನೂನು, ಹಾಗೆ ಅಸಂಗತವಾಗಿರುವಷ್ಟರ ಮಟ್ಟಿಗೆ, ಅಂಥ ಆದೇಶದ ಪ್ರಾರಂಭದಿಂದ ಇಪ್ಪತ್ತೈದು ವರ್ಷಗಳು ಮುಕ್ತಾಯವಾದ ಮೇಲೆ, ಅದರ ಮುಕ್ತಾಯಕ್ಕೆ ಮುಂಚೆ ಮಾಡಿದ ಅಥವಾ ಮಾಡದೆ ಬಿಟ್ಟ ಕಾರ್ಯಗಳಿಗೆ ಸಂಬಂಧಿಸಿದಂತೆ ಹೊರತು, ಪರಿಣಾಮಕಾರಿಯಾಗಿರುವುದು ನಿಂತುಹೋಗತಕ್ಕದ್ದು".

(*m*) After article 35, add the following article, namely:—

"**35A.** ***Saving of laws with respect to permanent residents and their rights.***— Notwithstanding anything contained in this Constitution, no existing law in force in the State of Jammu and Kashmir, and no law hereafter enacted by the Legislature of the State,—

(*a*) defining the classes of persons who are, or shall be, permanent residents of the State of Jammu and Kashmir; or

(*b*) conferring on such permanent residents any special rights and privileges or imposing upon other persons any restrictions as respects—

(*i*) employment under the State Government;

(*ii*) acquisition of immovable property in the State;

(*iii*) settlement in the State; or

(*iv*) right to scholarships and such other forms of aid as the State Government may provide,

shall be void on the ground that it is inconsistent with or takes away or abridges any rights conferred on the other citizens of India by any provision of this Part.".

**(5) PART IV.—** This part is not applicable to the State of Jammu and Kashmir.

**(6) PART IVA.**— This part is not applicable to the State of Jammu and Kashmir.

**(7) PART V.—**

(*a*) *Article* 55.—

(*A*) For the purposes of this article, the population of the State of Jammu and Kashmir shall be deemed to be sixty-three lakhs;

(*B*) in the *Explanation* omit the proviso.

(*b*) *Article* 81.— For clauses (2) and (3), substitute the following clauses, namely:—

"(2) For the purposes of sub-clause (*a*) of clause (1),—

(*a*) there shall be allotted to the State six seats in the House of the People;

(*b*) the State shall be divided into single-member territorial constituencies by the Delimitation Commission constituted under the Delimitation Act, 1972, in accordance with such procedure as the Commission may deem fit;

(*c*) the constituencies shall, as far as practicable, be geographically compact areas, and in delimiting them regard shall be had to physical features, existing boundaries of administrative units, facilities of communication and public convenience; and

(*d*) the constituencies into which the State is divided shall not comprise the area under the occupation of Pakistan.

(ಎಂ) 35ನೇ ಅನುಚ್ಛೇದದ ತರುವಾಯ ಈ ಮುಂದಿನ ಅನುಚ್ಛೇದವನ್ನು ಸೇರಿಸತಕ್ಕದ್ದು, ಎಂದರೆ:–

**"35ಎ. ಖಾಯಂ ನಿವಾಸಿಗಳ ಮತ್ತು ಅವರ ಹಕ್ಕುಗಳ ಬಗ್ಗೆ ಕಾನೂನುಗಳ ಉಳಿಕೆ.–** ಈ ಸಂವಿಧಾನದಲ್ಲಿ ಏನೇ ಒಳಗೊಂಡಿದ್ದರೂ, ಜಮ್ಮು ಮತ್ತು ಕಾಶ್ಮೀರ ರಾಜ್ಯದಲ್ಲಿ ಜಾರಿಯಲ್ಲಿರುವಂಥ ಅಸ್ತಿತ್ವದಲ್ಲಿರುವ ಯಾವುದೇ ಕಾನೂನು ಮತ್ತು ಇನ್ನು ಮುಂದೆ ರಾಜ್ಯ ವಿಧಾನಮಂಡಲವು ಅಧಿನಿಯಮಿಸುವ, ಎಂದರೆ:–

(ಎ) ಜಮ್ಮು ಮತ್ತು ಕಾಶ್ಮೀರ ರಾಜ್ಯದ ಖಾಯಂ ನಿವಾಸಿಗಳಾಗಿರುವ ಅಥವಾ ನಿವಾಸಿಗಳಾಗಿರತಕ್ಕ ವ್ಯಕ್ತಿಗಳ ವರ್ಗಗಳನ್ನು ಪರಿಭಾಷಿಸುವ; ಅಥವಾ

(ಬಿ) ಅಂಥ ಖಾಯಂ ನಿವಾಸಿಗಳಿಗೆ ಯಾವುವೇ ವಿಶೇಷ ಹಕ್ಕುಗಳನ್ನು ಮತ್ತು ವಿಶೇಷ ಅಧಿಕಾರಗಳನ್ನು ಪ್ರದಾನ ಮಾಡುವ; ಅಥವಾ,–

(i) ರಾಜ್ಯ ಸರ್ಕಾರದ ಅಧೀನದಲ್ಲಿಯ ಉದ್ಯೋಗಕ್ಕೆ;

(ii) ರಾಜ್ಯದಲ್ಲಿ ಸ್ಥಿರ ಸ್ವತ್ತಿನ ಆರ್ಜನೆ ಮಾಡುವುದಕ್ಕೆ;

(iii) ರಾಜ್ಯದಲ್ಲಿ ನೆಲೆಸುವುದಕ್ಕೆ; ಅಥವಾ

(iv) ರಾಜ್ಯ ಸರ್ಕಾರವು ಒದಗಿಸಬಹುದಾದ ವಿದ್ಯಾರ್ಥಿ ವೇತನಕ್ಕೆ ಮತ್ತು ಅಂತಹ ಇತರ ರೀತಿಯ ನೆರವಿನ ಹಕ್ಕಿಗೆ

– ಸಂಬಂಧಪಟ್ಟಂತೆ ಇತರ ವ್ಯಕ್ತಿಗಳ ಮೇಲೆ ಯಾವುವೇ ನಿರ್ಬಂಧಗಳನ್ನು ವಿಧಿಸುವ ಯಾವುದೇ ಕಾನೂನು, ಈ ಭಾಗದ ಯಾವುದೇ ಉಪಬಂಧದ ಮೂಲಕ ಭಾರತದ ಇತರ ನಾಗರಿಕರಿಗೆ ಪ್ರದತ್ತವಾದ ಯಾವುವೇ ಹಕ್ಕುಗಳಿಗೆ ಅದು ಅಸಂಗತವಾಗಿದೆಯೆಂಬ ಅಥವಾ ಅದು ಯಾವುವೇ ಹಕ್ಕುಗಳನ್ನು ಕಿತ್ತುಕೊಂಡಿದೆಯೆಂಬ ಅಥವಾ ಮೊಟಕುಗೊಳಿಸುತ್ತದೆಯೆಂಬ ಕಾರಣದ ಮೇಲೆ ಅನೂರ್ಜಿತವಾಗತಕ್ಕದ್ದಲ್ಲ.

**(5) ಭಾಗ – IV**.– ಈ ಭಾಗವು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯವಾಗುವುದಿಲ್ಲ.

**(6) ಭಾಗ – IVಎ**.– ಈ ಭಾಗವು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯವಾಗುವುದಿಲ್ಲ.

**(7) ಭಾಗ – V.-**

(ಎ) ಅನುಚ್ಛೇದ 55.–

(ಎ) ಈ ಅನುಚ್ಛೇದದ ಉದ್ದೇಶಗಳಿಗಾಗಿ, ಜಮ್ಮು ಮತ್ತು ಕಾಶ್ಮೀರ ರಾಜ್ಯದ ಜನಸಂಖ್ಯೆಯನ್ನು ಅರವತ್ತು ಮೂರು ಲಕ್ಷ ಎಂದು ಭಾವಿಸತಕ್ಕದ್ದು.

(ಬಿ) ವಿವರಣೆಯ ಪರಂತುಕವನ್ನು ಬಿಟ್ಟುಬಿಡತಕ್ಕದ್ದು.

(ಬಿ) ಅನುಚ್ಛೇದ 81.– (2)ನೆಯ ಮತ್ತು (3)ನೆಯ ಖಂಡಗಳ ಬದಲಾಗಿ, ಈ ಮುಂದಿನ ಖಂಡಗಳನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

"(2) (1)ನೆಯ ಖಂಡದ (ಎ) ಉಪಖಂಡದ ಉದ್ದೇಶಗಳಿಗಾಗಿ,–

(ಎ) ಲೋಕಸಭೆಯಲ್ಲಿ ಆ ರಾಜ್ಯಕ್ಕೆ ಆರು ಸ್ಥಾನಗಳನ್ನು ಹಂಚಿಕೆ ಮಾಡತಕ್ಕದ್ದು;

(ಬಿ) 1972ನೆಯ ಇಸವಿಯ ಸೀಮಾ ನಿರ್ಣಯ ಅಧಿನಿಯಮದ ಮೇರೆಗೆ ರಚಿತವಾದ ಸೀಮಾ ನಿರ್ಣಯ ಆಯೋಗವು, ಅದು ತಾನು ಸೂಕ್ತವೆಂದು ಭಾವಿಸಬಹುದಾದಂಥ ಪ್ರಕ್ರಿಯೆಗೆ ಅನುಸಾರವಾಗಿ, ರಾಜ್ಯವನ್ನು ಏಕಸದಸ್ಯ ಚುನಾವಣಾ ಕ್ಷೇತ್ರಗಳಾಗಿ ವಿಭಾಗಿಸತಕ್ಕದ್ದು;

(ಸಿ) ಚುನಾವಣಾ ಕ್ಷೇತ್ರಗಳು ಕಾರ್ಯತಃ ಸಾಧ್ಯವಾಗುವಷ್ಟರ ಮಟ್ಟಿಗೆ ಭೌಗೋಳಿಕವಾಗಿ ಹೊಂದಿಕೊಂಡಿರುವ ಪ್ರದೇಶಗಳಾಗಿರತಕ್ಕದ್ದು ಮತ್ತು ಅವುಗಳ ಸೀಮಾ ನಿರ್ಣಯ ಮಾಡುವಲ್ಲಿ ಭೌತಿಕ ಲಕ್ಷಣಗಳನ್ನು, ಅಸ್ತಿತ್ವದಲ್ಲಿರುವ ಆಡಳಿತ ಘಟಕಗಳ ಸರಹದ್ದುಗಳನ್ನು, ಸಂಪರ್ಕ ಸೌಲಭ್ಯಗಳನ್ನು ಮತ್ತು ಸಾರ್ವಜನಿಕ ಅನುಕೂಲತೆಯನ್ನು ಗಮನದಲ್ಲಿಡತಕ್ಕದ್ದು; ಮತ್ತು

(ಡಿ) ರಾಜ್ಯವನ್ನು ಯಾವ ಚುನಾವಣಾ ಕ್ಷೇತ್ರಗಳಾಗಿ ವಿಭಾಗಿಸಲಾಗುತ್ತದೆಯೋ ಆ ಚುನಾವಣಾ ಕ್ಷೇತ್ರಗಳು ಪಾಕಿಸ್ತಾನದ ಸ್ವಾಧೀನದಲ್ಲಿರುವ ಪ್ರದೇಶವನ್ನು ಒಳಗೊಳ್ಳತಕ್ಕದ್ದಲ್ಲ.

(3) Nothing in clause (2) shall affect the representation of the State in the House of the People until the dissolution of the House existing on the date of publication in the Gazette of India of the final order or orders of the Delimitation Commission relating to the delimitation of parliamentary constituencies under the Delimitation Act, 1972.

(4) (*a*) The Delimitation Commission shall associate with itself for the purpose of assisting it in its duties in respect of the State, five persons who shall be members of the House of the People representing the State.

(*b*) The persons to be so associated from the State shall be nominated by the Speaker of the House of the People having due regard to the composition of the House.

(*c*) The first nominations to be made under sub-clause (*b*) shall be made by the Speaker of the House of the People within two months from the commencement of the Constitution (Application to Jammu and Kashmir) Second Amendment Order, 1974.

(*d*) None of the associate members shall have a right to vote or to sign any decision of the Delimitation Commission.

(*e*) If owing to death or resignation, the office of an associate member falls vacant, it shall be filled as soon as may be practicable by the Speaker of the House of the People and in accordance with the provisions of sub-clauses (*a*) and (*b*).".

(*c*) *Article* 82.— Omit the second and third provisos.

(*d*) *Article* 105.— In clause (3), for "shall be those of that House and of its members and committees immediately before the coming into force of section 15 of the Constitution (Forty-fourth Amendment) Act, 1978" substitute "shall be those of the House of Commons of the Parliament of the United Kingdom, and of its members and committees, at the commencement of this Constitution".

(*e*) For article 132, substitute the following article, namely:—

**'132.** ***Appellate jurisdiction of Supreme Court in appeals from High Courts in certain cases.—***(1) An appeal shall lie to the Supreme Court from any judgment, decree or final order of a High Court in the territory of India, whether in a civil, criminal or other proceeding, if the High Court certifies that the case involves a substantial question of law as to the interpretation of this Constitution.

(2) Where the High Court has refused to give such a certificate, the Supreme Court may, if it is satisfied that the case involves a substantial question of law as to the interpretation of this Constitution, grant special leave to appeal from such judgment, decree or final order.

(3) (2)ನೇ ಖಂಡದಲ್ಲಿರುವುದಾವುದೂ, 1972ರ ಸೀಮಾ ನಿರ್ಣಯ ಅಧಿನಿಯಮದ ಮೇರೆಗೆ ಸಂಸತ್ ಚುನಾವಣಾ ಕ್ಷೇತ್ರಗಳ ಸೀಮಾ ನಿರ್ಣಯಕ್ಕೆ ಸಂಬಂಧಪಟ್ಟಂತೆ ಸೀಮಾ ನಿರ್ಣಯ ಆಯೋಗದ ಅಂತಿಮ ಆದೇಶವನ್ನು ಅಥವಾ ಆದೇಶಗಳನ್ನು, ಭಾರತ ರಾಜಪತ್ರದಲ್ಲಿ ಪ್ರಕಟಿಸಿದ ದಿನಾಂಕದಂದು ಅಸ್ತಿತ್ವದಲ್ಲಿರುವ ಸದನವು ವಿಸರ್ಜನೆಯಾಗುವವರೆಗೆ ಲೋಕಸಭೆಯಲ್ಲಿ ರಾಜ್ಯದ ಪ್ರಾತಿನಿಧ್ಯಕ್ಕೆ ಬಾಧಕ ಉಂಟುಮಾಡತಕ್ಕದ್ದಲ್ಲ.

(4)(ಎ) ರಾಜ್ಯವನ್ನು ಪ್ರತಿನಿಧಿಸುವ ಲೋಕಸಭೆಯ ಸದಸ್ಯರಾಗಿರತಕ್ಕ ಐವರು ವ್ಯಕ್ತಿಗಳನ್ನು ಸೀಮಾ ನಿರ್ಣಯ ಆಯೋಗವು ರಾಜ್ಯಕ್ಕೆ ಸಂಬಂಧಿಸಿದಂತೆ ತನ್ನ ಕರ್ತವ್ಯಗಳಿಗೆ ನೆರವಾಗುವ ಉದ್ದೇಶಕ್ಕಾಗಿ, ತನ್ನ ಜೊತೆಗೆ ಸೇರಿಸಿಕೊಳ್ಳತಕ್ಕದ್ದು.

(ಬಿ) ರಾಜ್ಯದಿಂದ ಹಾಗೆ ಸೇರಿಸಿಕೊಳ್ಳಬೇಕಾದ ವ್ಯಕ್ತಿಗಳನ್ನು ಸದನದ ರಚನೆಗೆ ಯುಕ್ತ ಗಮನ ನೀಡಿ ಲೋಕಸಭೆಯ ಅಧ್ಯಕ್ಷನು ನಾಮನಿರ್ದೇಶನ ಮಾಡತಕ್ಕದ್ದು.

(ಸಿ) ಲೋಕಸಭೆಯ ಅಧ್ಯಕ್ಷನು (ಬಿ) ಉಪಖಂಡದ ಮೇರೆಗೆ ಮಾಡಬೇಕಾದ ಮೊದಲನೆಯ ನಾಮನಿರ್ದೇಶನಗಳನ್ನು, 1974ರ ಸಂವಿಧಾನ (ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯ) ಎರಡನೆಯ ತಿದ್ದುಪಡಿ ಆದೇಶದ ಪ್ರಾರಂಭದಿಂದ ಎರಡು ತಿಂಗಳ ಒಳಗಾಗಿ ಮಾಡತಕ್ಕದ್ದು.

(ಡಿ) ಯಾವ ಸಹವರ್ತಿ ಸದಸ್ಯರಿಗೂ ಮತ ನೀಡುವ ಅಥವಾ ಸೀಮಾ ನಿರ್ಣಯ ಆಯೋಗದ ಯಾವುದೇ ತೀರ್ಮಾನಕ್ಕೆ ಸಹಿ ಹಾಕುವ ಹಕ್ಕು ಇರತಕ್ಕದ್ದಲ್ಲ.

(ಇ) ಸಹವರ್ತಿ ಸದಸ್ಯನ ಪದವು, ಮರಣದ ಅಥವಾ ರಾಜೀನಾಮೆಯ ಕಾರಣದಿಂದಾಗಿ ಖಾಲಿಯಾದರೆ, ಕಾರ್ಯಸಾಧ್ಯವಾಗಬಹುದಾದಷ್ಟು ಬೇಗನೆ, ಲೋಕಸಭೆಯ ಅಧ್ಯಕ್ಷನು, (ಎ) ಮತ್ತು (ಬಿ) ಉಪಖಂಡಗಳ ಉಪಬಂಧಗಳಿಗೆ ಅನುಸಾರವಾಗಿ ಅದನ್ನು ತುಂಬತಕ್ಕದ್ದು".

(ಸಿ) ಅನುಚ್ಛೇದ 82.- ಎರಡನೆಯ ಮತ್ತು ಮೂರನೆಯ ಪರಂತುಕಗಳನ್ನು ಬಿಟ್ಟುಬಿಡತಕ್ಕದ್ದು.

(ಡಿ) ಅನುಚ್ಛೇದ 105.- (3)ನೆಯ ಖಂಡದಲ್ಲಿ "ಸಂವಿಧಾನ (ನಲವತ್ತ ನಾಲ್ಕನೆಯ ತಿದ್ದುಪಡಿ) ಅಧಿನಿಯಮ, 1978ರ 15ನೆಯ ಪ್ರಕರಣವು ಜಾರಿಗೆ ಬರುವುದಕ್ಕೆ ನಿಕಟ ಪೂರ್ವದಲ್ಲಿ ಆ ಸದನಕ್ಕೆ, ಅದರ ಸದಸ್ಯರಿಗೆ ಮತ್ತು ಸಮಿತಿಗಳಿಗೆ ಇದ್ದಂತಹ ಅವೇ ಅಧಿಕಾರಗಳು, ವಿಶೇಷಾಧಿಕಾರಗಳು ಮತ್ತು ಉನ್ಮುಕ್ತಿಗಳು ಇರತಕ್ಕದ್ದು" ಎಂಬ ಪದಗಳ ಬದಲಾಗಿ "ಈ ಸಂವಿಧಾನದ ಪ್ರಾರಂಭದಲ್ಲಿ ಯುನೈಟೆಡ್ ಕಿಂಗ್‌ಡಮ್‌ನ ಪಾರ್ಲಿಮೆಂಟಿನ ಹೌಸ್ ಆಫ್ ಕಾಮನ್ಸ್‌ಗೆ ಮತ್ತು ಅದರ ಸದಸ್ಯರಿಗೆ ಮತ್ತು ಸಮಿತಿಗಳಿಗೆ ಇದ್ದಂತಹ ಅವೇ ಅಧಿಕಾರಗಳು, ವಿಶೇಷಾಧಿಕಾರಗಳು ಮತ್ತು ಉನ್ಮುಕ್ತಿಗಳು ಇರತಕ್ಕದ್ದು" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

(ಇ) 132ನೆಯ ಅನುಚ್ಛೇದದ ಬದಲಾಗಿ, ಈ ಮುಂದಿನ ಅನುಚ್ಛೇದವನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

**'132. ಕೆಲವು ಮೊಕದ್ದಮೆಗಳಲ್ಲಿ ಉಚ್ಚ ನ್ಯಾಯಾಲಯಗಳಿಂದ ಬರುವ ಅಪೀಲುಗಳಿಗೆ ಸಂಬಂಧಿಸಿದಂತೆ ಸರ್ವೋಚ್ಚ ನ್ಯಾಯಾಲಯದ ಅಪೀಲು ಅಧಿಕಾರ ವ್ಯಾಪ್ತಿ.-** (1) ಭಾರತದ ರಾಜ್ಯ ಕ್ಷೇತ್ರದಲ್ಲಿರುವ ಒಂದು ಉಚ್ಚ ನ್ಯಾಯಾಲಯವು ಸಿವಿಲ್, ಕ್ರಿಮಿನಲ್ ಅಥವಾ ಇತರ ವ್ಯವಹರಣೆಯಲ್ಲಿ ನೀಡಿದ ಯಾವುದೇ ತೀರ್ಪಿನ, ಡಿಕ್ರಿಯ ಅಥವಾ ಅಂತಿಮ ಆದೇಶಕ್ಕೆ ಸಂಬಂಧಪಟ್ಟ ಆ ಮೊಕದ್ದಮೆಯಲ್ಲಿ ಈ ಸಂವಿಧಾನದ ಅರ್ಥ ವಿವರಣೆಗೆ ಸಂಬಂಧಿಸಿದ ಗಣನೀಯವಾದ ಕಾನೂನಿನ ಪ್ರಶ್ನೆಯು ಒಳಗೊಂಡಿದೆಯೆಂದು ಆ ಉಚ್ಚ ನ್ಯಾಯಾಲಯವು ಪ್ರಮಾಣೀಕರಿಸಿದರೆ, ಸರ್ವೋಚ್ಚ ನ್ಯಾಯಾಲಯಕ್ಕೆ ಅಪೀಲು ಸಲ್ಲಿಸಲು ಅವಕಾಶವಿರತಕ್ಕದ್ದು.

(2) ಉಚ್ಚ ನ್ಯಾಯಾಲಯವು ಅಂಥ ಪ್ರಮಾಣಪತ್ರವನ್ನು ಕೊಡಲು ನಿರಾಕರಿಸಿದಲ್ಲಿ, ಸರ್ವೋಚ್ಚ ನ್ಯಾಯಾಲಯವು ಆ ಮೊಕದ್ದಮೆಯಲ್ಲಿ ಈ ಸಂವಿಧಾನದ ಅರ್ಥ ವಿವರಣೆಗೆ ಸಂಬಂಧಿಸಿದ ಗಣನೀಯವಾದ ಕಾನೂನಿನ ಪ್ರಶ್ನೆಯು ಒಳಗೊಂಡಿದೆಯೆಂದು ಮನಗಂಡರೆ, ಅಂಥ ತೀರ್ಪಿನ, ಡಿಕ್ರಿಯ ಅಥವಾ ಅಂತಿಮ ಆದೇಶದ ಮೇಲೆ ಅಪೀಲನ್ನು ಸಲ್ಲಿಸಲು ವಿಶೇಷ ಅನುಮತಿ ನೀಡಬಹುದು.

(3) Where such a certificate is given, or such leave is granted, any party in the case may appeal to the Supreme Court on the ground that any such question as aforesaid has been wrongly decided and, with the leave of the Supreme Court, on any other ground.

***Explanation.—*** For the purposes of this article, the expression "final order" includes an order deciding an issue which, if decided in favour of the appellant, would be sufficient for the final disposal of the case.'.

*(f) Article* 133.—

(*A*) In clause (1), omit "under article 134A";

(*B*) after clause (1), insert the following clause, namely:—

'(1A) The provisions of section 3 of the Constitution (Thirtieth Amendment) Act, 1972, shall apply in relation to the State of Jammu and Kashmir subject to the modification that references therein to "this Act", "the commencement of this Act", "this Act had not been passed" and "as amended by this Act" shall be construed respectively as references to "the Constitution (Application to Jammu and Kashmir) Second Amendment Order, 1974", "the commencement of the said Order", "the said Order had not been made" and "as it stands after the commencement of the said Order".'

(*g*) *Article* 134.—

(*A*) In clause (1), in sub-clause *(c)*, omit "under article 134A";

(*B*) in clause (2), after "Parliament may" insert "on the request of the Legislature of the State".

(*h*) *Articles* 134A, 135, 139 and 139A.— These articles are not applicable to the State of Jammu and Kashmir.

(*i*) *Article* 145.— In clause (1), omit sub-clause (*cc*).

(*j*) *Article* 150.— For "as the President may, on the advice of the Comptroller and Auditor-General of India, prescribe" substitute "as the Comptroller and Auditor-General of India may, with the approval of the President prescribe".

**(8) PART VI.**

(*a*) Omit articles 153 to 217, article 219, article 221, articles 223, 224, 224A and 225, articles 227 to 233, article 233A and articles 234 to 237.

(3) ಅಂಥ ಪ್ರಮಾಣಪತ್ರವನ್ನು ಕೊಟ್ಟಿರುವಲ್ಲಿ ಅಥವಾ ಅಂಥ ಅನುಮತಿಯನ್ನು ನೀಡಿರುವಲ್ಲಿ, ಆ ಮೊಕದ್ದಮೆಯ ಯಾರೇ ಪಕ್ಷಕಾರನು, ಹಿಂದೆ ಹೇಳಿರುವಂಥ ಯಾವುದೇ ಪ್ರಶ್ನೆಯನ್ನು ತಪ್ಪಾಗಿ ತೀರ್ಮಾನಿಸಲಾಗಿದೆಯೆಂಬ ಕಾರಣದ ಮೇಲೆ ಮತ್ತು ಯಾವುದೇ ಇತರೆ ಕಾರಣದ ಮೇಲೆ ಸರ್ವೋಚ್ಚ ನ್ಯಾಯಾಲಯದ ಅನುಮತಿ ಪಡೆದು ಸರ್ವೋಚ್ಚ ನ್ಯಾಯಾಲಯಕ್ಕೆ ಅಪೀಲು ಸಲ್ಲಿಸಬಹುದು.

**ವಿವರಣೆ**.- ಈ ಅನುಚ್ಛೇದದ ಉದ್ದೇಶಗಳಿಗಾಗಿ "ಅಂತಿಮ ಆದೇಶ" ಎಂಬ ಪದಾವಳಿಯು ಯಾವ ವಿವಾದಾಂಶವನ್ನು ಅಪೀಲುದಾರನ ಪರವಾಗಿ ತೀರ್ಮಾನಿಸಿದರೆ ಆ ಮೊಕದ್ದಮೆಯ ಅಂತಿಮ ವಿಲೆಗೆ ಸಾಕಾಗಬಹುದೋ ಆ ವಿವಾದಾಂಶವನ್ನು ತೀರ್ಮಾನಿಸುವ ಆದೇಶವನ್ನು ಒಳಗೊಳ್ಳುತ್ತದೆ.'

(ಎಫ್) ಅನುಚ್ಛೇದ 133.-

(ಎ) (1)ನೆಯ ಖಂಡದಲ್ಲಿ, "134ಎ ಅನುಚ್ಛೇದದ ಮೇರೆಗೆ" ಎಂಬ ಪದವನ್ನು ಬಿಟ್ಟುಬಿಡತಕ್ಕದ್ದು;

(ಬಿ) (1)ನೆಯ ಖಂಡದ ನಂತರ, ಈ ಮುಂದಿನ ಖಂಡವನ್ನು ಸೇರಿಸತಕ್ಕದ್ದು, ಎಂದರೆ:-

'(1ಎ) 1972ನೆಯ ಇಸವಿಯ ಸಂವಿಧಾನ (ಮೂವತ್ತನೆಯ ತಿದ್ದುಪಡಿ) ಅಧಿನಿಯಮದ 3ನೆಯ ಪ್ರಕರಣದ ಉಪಬಂಧಗಳು, ಅದರಲ್ಲಿನ "ಈ ಅಧಿನಿಯಮ", "ಈ ಅಧಿನಿಯಮದ ಪ್ರಾರಂಭ", "ಈ ಅಧಿನಿಯಮವು ಅಂಗೀಕೃತವಾಗಿರದಿದ್ದರೆ" ಮತ್ತು "ಈ ಅಧಿನಿಯಮದ ಮೂಲಕ ತಿದ್ದುಪಡಿಯಾದಂತೆ" ಎಂಬ ಪದಗಳಿಗೆ ಮಾಡಿದ ಉಲ್ಲೇಖಗಳನ್ನು ಅನುಕ್ರಮವಾಗಿ "1974ನೆಯ ಇಸವಿಯ ಸಂವಿಧಾನ (ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯ) ಎರಡನೆಯ ತಿದ್ದುಪಡಿ ಆದೇಶ", "ಸದರಿ ಆದೇಶದ ಪ್ರಾರಂಭ", "ಸದರಿ ಆದೇಶವನ್ನು ಮಾಡಿರದಿದ್ದರೆ" ಮತ್ತು "ಸದರಿ ಆದೇಶದ ಪ್ರಾರಂಭದ ತರುವಾಯ ಇದ್ದಂತೆ" ಎಂಬ ಪದಾವಳಿಗಳಿಗೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು ಎಂಬ ಮಾರ್ಪಾಟುಗಳಿಗೆ ಒಳಪಟ್ಟು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯವಾಗತಕ್ಕದ್ದು.'

(ಜಿ) ಅನುಚ್ಛೇದ 134,-

(ಎ) (1)ನೆಯ ಖಂಡದ (ಸಿ) ಉಪಖಂಡದಲ್ಲಿರುವ "134ಎ ಅನುಚ್ಛೇದದ ಮೇರೆಗೆ" ಎಂಬ ಪದವನ್ನು ಬಿಟ್ಟುಬಿಡತಕ್ಕದ್ದು.

(ಬಿ) (2)ನೆಯ ಖಂಡದಲ್ಲಿರುವ "ಸಂಸತ್ತು" ಎಂಬ ಪದದ ತರುವಾಯ "ರಾಜ್ಯದ ವಿಧಾನಮಂಡಲದ ಕೋರಿಕೆಯ ಮೇರೆಗೆ" ಎಂಬ ಪದಗಳನ್ನು ಸೇರಿಸತಕ್ಕದ್ದು.

(ಹೆಚ್) 134ಎ, 135, 139 ಮತ್ತು 139ಎ ಅನುಚ್ಛೇದಗಳು- ಈ ಅನುಚ್ಛೇದಗಳು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯವಾಗುವುದಿಲ್ಲ.

(ಐ) 145ನೆಯ ಅನುಚ್ಛೇದ- (1)ನೆಯ ಖಂಡದಲ್ಲಿ (ಸಿಸಿ) ಉಪಖಂಡವನ್ನು ಬಿಟ್ಟುಬಿಡತಕ್ಕದ್ದು.

(ಜೆ) 150ನೆಯ ಅನುಚ್ಛೇದ- "ಭಾರತ ಲೆಕ್ಕ ನಿಯಂತ್ರಕ-ಹಾಗೂ-ಮಹಾಲೆಕ್ಕಪರಿಶೋಧಕನ ಸಲಹೆಯ ಮೇರೆಗೆ ರಾಷ್ಟ್ರಪತಿಯು ನಿಯಮಿಸಬಹುದಾದಂಥ" ಎಂಬ ಪದಗಳ ಬದಲಾಗಿ "ಭಾರತದ ಲೆಕ್ಕ ನಿಯಂತ್ರಕ-ಹಾಗೂ-ಮಹಾಲೆಕ್ಕ ಪರಿಶೋಧಕನು, ರಾಷ್ಟ್ರಪತಿಯವರ ಅನುಮೋದನೆ ಪಡೆದು ನಿಯಮಿಸಬಹುದಾದಂಥ" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

**(8) ಭಾಗ - VI**

(ಎ) 153 ರಿಂದ 217ನೆಯ ಅನುಚ್ಛೇದಗಳನ್ನು, 219ನೆಯ ಅನುಚ್ಛೇದವನ್ನು, 221ನೇ ಅನುಚ್ಛೇದವನ್ನು, 223, 224, 224ಎ ಮತ್ತು 225ನೆಯ ಅನುಚ್ಛೇದಗಳನ್ನು, 227 ರಿಂದ 233ರ ವರೆಗಿನ ಅನುಚ್ಛೇದಗಳನ್ನು, 233ಎ ಅನುಚ್ಛೇದವನ್ನು ಮತ್ತು 234 ರಿಂದ 237ರ ವರೆಗಿನ ಅನುಚ್ಛೇದಗಳನ್ನು ಬಿಟ್ಟುಬಿಡತಕ್ಕದ್ದು.

(*b*) Article 220.— References to the commencement of the Constitution shall be construed as references to the commencement of the Constitution (Application to Jammu and Kashmir) Amendment Order, 1960, *i.e.*, the 26th January, 1960.

(*c*) Article 222.— After clause (1), insert the following clause, namely:—

"(1A) Every such transfer from the High Court of Jammu and Kashmir or to that High Court shall be made after consultation with the Governor.".

(*d*) *Article* 226.—

(*A*) Renumber clause (2) as clause (1A);

(*B*) omit clause (3);

(*C*) renumber clause (4) as clause (2); and in clause (2) as so renumbered, for "this article" substitute "clause (1) or clause (1A)".

**(9) PART VIII.—** This part is not applicable to the State of Jammu and Kashmir.

**(10) PART X.—** This part is not applicable to the State of Jammu and Kashmir.

**(11) PART XI.**

(*a*) *Article* 246.—

(*A*) in clause (1), for "clauses (2) and (3)" substitute "clause (2)";

(*B*) in clause (2), omit "Notwithstanding anything in clause (3),";

(*C*) omit clauses (3) and (4).

(*b*) For article 248, substitute the following article, namely:—

'**248. *Residuary powers of legislation.*—**Parliament has exclusive power to make any law with respect to—

(*a*) prevention of activities involving terrorist acts directed towards overawing the Government as by law established or striking terror in the people or any section of the people or alienating any section of the people or adversely affecting the harmony amongst different sections of the people;

(*aa*) prevention of other activities directed towards disclaiming, questioning or disrupting the sovereignty and territorial integrity of India or bringing about cession of a part of the territory of India or secession of a part of the territory of India from the Union or causing insult to the Indian National Flag, the Indian National Anthem and this Constitution; and

(ಬಿ) ಅನುಚ್ಛೇದ 220.– ಸಂವಿಧಾನದ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳನ್ನು ಸಂವಿಧಾನದ ಪ್ರಾರಂಭದ (ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯ) ತಿದ್ದುಪಡಿ ಆದೇಶ, 1960ರ ಪ್ರಾರಂಭಕ್ಕೆ ಎಂದರೆ, 1960ರ ಜನವರಿ 26ನೇ ದಿನಕ್ಕೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು.

(ಸಿ) ಅನುಚ್ಛೇದ 222.– (1)ನೆಯ ಖಂಡದ ನಂತರ, ಈ ಮುಂದಿನ ಖಂಡವನ್ನು ಸೇರಿಸತಕ್ಕದ್ದು; ಎಂದರೆ:–

"(1ಎ) ಜಮ್ಮು ಮತ್ತು ಕಾಶ್ಮೀರದ ಉಚ್ಚ ನ್ಯಾಯಾಲಯದಿಂದ ಮಾಡಲಾಗುವ ಅಥವಾ ಆ ಉಚ್ಚ ನ್ಯಾಯಾಲಯಕ್ಕೆ ಮಾಡಲಾಗುವ ಅಂಥ ಪ್ರತಿಯೊಂದು ವರ್ಗಾವಣೆಯನ್ನು ರಾಜ್ಯಪಾಲನೊಡನೆ ಸಮಾಲೋಚನೆ ಮಾಡಿದ ತರುವಾಯ ಮಾಡತಕ್ಕದ್ದು".

(ಡಿ) 226ನೆಯ ಅನುಚ್ಛೇದ.–

(ಎ) (2)ನೇ ಖಂಡಕ್ಕೆ (1ಎ) ಖಂಡವೆಂದು ಪುನರ್ ಸಂಖ್ಯೆ ನೀಡತಕ್ಕದ್ದು;

(ಬಿ) (3)ನೇ ಖಂಡವನ್ನು ಬಿಟ್ಟುಬಿಡತಕ್ಕದ್ದು;

(ಸಿ) (4)ನೇ ಖಂಡಕ್ಕೆ (2)ನೇ ಖಂಡವೆಂದು ಪುನರ್ ಸಂಖ್ಯೆ ನೀಡತಕ್ಕದ್ದು ಮತ್ತು ಹಾಗೆ ಪುನರ್ ಸಂಖ್ಯೆ ನೀಡಿದ (2)ನೇ ಖಂಡದಲ್ಲಿ "ಈ ಅನುಚ್ಛೇದದ" ಎಂಬ ಪದಗಳ ಬದಲಾಗಿ "ಖಂಡ (1) ಅಥವಾ ಖಂಡ (1ಎ)" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

**(9) ಭಾಗ VIII** .– ಈ ಭಾಗವು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯವಾಗುವುದಿಲ್ಲ.

**(10) ಭಾಗ X** .– ಈ ಭಾಗವು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯವಾಗುವುದಿಲ್ಲ.

**(11) ಭಾಗ XI.**

(ಎ) ಅನುಚ್ಛೇದ 246.–

(ಎ) (1)ನೇ ಖಂಡದಲ್ಲಿ, "(2)ನೇ ಮತ್ತು (3)ನೇ ಖಂಡಗಳಲ್ಲಿ" ಎಂಬ ಪದಗಳ ಬದಲಾಗಿ, "(2)ನೇ ಖಂಡದಲ್ಲಿ" ಎಂಬ ಪದವನ್ನು ಪ್ರತ್ಯಾಯೋಜಿಸತಕ್ಕದ್ದು.

(ಬಿ) (2)ನೇ ಖಂಡದಲ್ಲಿ, "(3)ನೇ ಖಂಡದಲ್ಲಿ ಏನೇ ಇದ್ದಾಗ್ಯೂ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(ಸಿ) (3)ನೇ ಮತ್ತು (4)ನೇ ಖಂಡಗಳನ್ನು ಬಿಟ್ಟುಬಿಡತಕ್ಕದ್ದು.

(ಬಿ) 248ನೇ ಅನುಚ್ಛೇದದ ಬದಲಾಗಿ, ಈ ಮುಂದಿನ ಅನುಚ್ಛೇದವನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

**"248. ಶಾಸನ ರಚನೆಯ ಉಳಿಕೆ ಅಧಿಕಾರಗಳು.**– ಸಂಸತ್ತು,–

(ಎ) ಕಾನೂನಿನ ಮೂಲಕ ಸ್ಥಾಪಿತವಾದ ಸರ್ಕಾರಕ್ಕೆ ಭಯ ಹುಟ್ಟಿಸುವ ಉದ್ದೇಶವುಳ್ಳ ಭಯೋತ್ಪಾದಕ ಕೃತ್ಯಗಳನ್ನು ಒಳಗೊಂಡ ಅಥವಾ ಜನರಲ್ಲಿ ಅಥವಾ ಜನರ ಯಾವುದೇ ವರ್ಗದಲ್ಲಿ ಭಯವನ್ನುಂಟುಮಾಡುವ ಅಥವಾ ಜನರ ಯಾವುದೇ ವರ್ಗವನ್ನು ದೂರ ಮಾಡುವ ಅಥವಾ ಜನರ ವಿವಿಧ ವರ್ಗಗಳ ನಡುವಿನ ಸಾಮರಸ್ಯಕ್ಕೆ ಪ್ರತಿಕೂಲ ಪರಿಣಾಮವನ್ನುಂಟು ಮಾಡುವ ಚಟುವಟಿಕೆಗಳನ್ನು ಪ್ರತಿಬಂಧಿಸುವುದಕ್ಕೆ;

(ಎಎ) ಭಾರತದ ಸಾರ್ವಭೌಮತ್ವವನ್ನು ಮತ್ತು ಅದರ ರಾಜ್ಯಕ್ಷೇತ್ರೀಯ ಅಖಂಡತೆಯನ್ನು ನಿರಾಕರಿಸುವ, ಪ್ರಶ್ನಿಸುವ ಅಥವಾ ವಿಚ್ಛಿನ್ನಗೊಳಿಸುವ ಉದ್ದೇಶದ ಅಥವಾ ಭಾರತದ ರಾಜ್ಯಕ್ಷೇತ್ರದ ಒಂದು ಭಾಗವನ್ನು ಬಿಟ್ಟುಕೊಡುವ ಅಥವಾ ಒಕ್ಕೂಟದಿಂದ ಭಾರತದ ರಾಜ್ಯಕ್ಷೇತ್ರದ ಒಂದು ಭಾಗವನ್ನು ಬೇರ್ಪಡಿಸುವ ಅಥವಾ ಭಾರತದ ರಾಷ್ಟ್ರಧ್ವಜಕ್ಕೆ, ಭಾರತದ ರಾಷ್ಟ್ರಗೀತೆಗೆ ಮತ್ತು ಈ ಸಂವಿಧಾನಕ್ಕೆ ಅಪಮಾನ ಉಂಟು ಮಾಡುವ ಉದ್ದೇಶದ ಇತರ ಚಟುವಟಿಕೆಗಳನ್ನು ಪ್ರತಿಬಂಧಿಸುವುದಕ್ಕೆ; ಮತ್ತು

(*b*) taxes on—

(*i*) foreign travel by sea or air;

(*ii*) inland air travel;

(*iii*) postal articles, including money orders, phono-grams and telegrams.

***Explanation.—*** In this article, "terrorist act" means any act or thing by using bombs, dynamite or other explosive substances or inflammable substances or firearms or other lethal weapons or poisons or noxious gases or other chemicals or any other substances (whether biological or otherwise) of a hazardous nature.'.

(*bb*) *Article* 249, in clause (1), for "any matter enumerated in the State List specified in the resolution", substitute "any matter specified in the resolution, being a matter which is not enumerated in the Union List or in the Concurrent List".

(*c*) *Article* 250.—For "to any of the matters enumerated in the State List" substitute "also to matters not enumerated in the Union List".

(*d*) Omit clause (*d*).

(*e*) *Article* 253.— Add the following proviso, namely:—

"Provided that after the commencement of the Constitution (Application to Jammu and Kashmir) Order, 1954, no decision affecting the disposition of the State of Jammu and Kashmir shall be made by the Government of India without the consent of the Government of that State.".

(*f*) Omit article 255.

(*g*) *Article* 256.—Renumber this article as clause (1) thereof, and add the following new clause thereto, namely:—

"(2) The State of Jammu and Kashmir shall so exercise its executive power as to facilitate the discharge by the Union of its duties and responsibilities under the Constitution in relation to that State; and in particular, the said State shall, if so required by the Union, acquire or requisition property on behalf and at the expense of the Union, or if the property belongs to the State, transfer it to the Union on such terms as may be agreed, or in default of agreement, as may be determined by an arbitrator appointed by the Chief Justice of India.".

(ಬಿ) ತೆರಿಗೆಗಳಿಗೆ ಸಂಬಂಧಪಟ್ಟಂತೆ ಎಂದರೆ,–

(i) ಸಮುದ್ರ ಅಥವಾ ವಿಮಾನದ ಮೂಲಕ ವಿದೇಶ ಪ್ರಯಾಣದ;

(ii) ಅಂತರ್ದೇಶೀಯ ವಿಮಾನ ಪ್ರಯಾಣದ;

(iii) ಮನಿಯಾರ್ಡರುಗಳನ್ನೊಳಗೊಂಡು ಅಂಚೆ ವಸ್ತುಗಳ, ಫೋನೋಗ್ರಾಂಗಳ ಮತ್ತು ಟೆಲಿಗ್ರಾಂಗಳ

– ಮೇಲಿನ ತೆರಿಗೆಗಳಿಗೆ ಸಂಬಂಧಪಟ್ಟಂತೆ ಯಾವುದೇ ಕಾನೂನನ್ನು ರಚಿಸಲು ಅನನ್ಯ ಅಧಿಕಾರವನ್ನು ಹೊಂದಿರುತ್ತದೆ.

**ವಿವರಣೆ:–** ಈ ಅನುಚ್ಛೇದದಲ್ಲಿ, "ಭಯೋತ್ಪಾದಕ ಕೃತ್ಯ" ಎಂದರೆ ಬಾಂಬುಗಳನ್ನು, ಸಿಡಿಮದ್ದುಗಳನ್ನು ಅಥವಾ ಇತರೆ ಸ್ಫೋಟಕ ವಸ್ತುಗಳನ್ನು ಅಥವಾ ಸುಲಭವಾಗಿ ಬೆಂಕಿ ಹೊತ್ತಿಕೊಳ್ಳುವ ವಸ್ತುಗಳನ್ನು ಅಥವಾ ಬಂದೂಕುಗಳನ್ನು ಅಥವಾ ಇತರೆ ಮಾರಕಾಸ್ತ್ರಗಳನ್ನು ಅಥವಾ ವಿಷಕಾರಿ ಅಥವಾ ಹಾನಿಕಾರಕ ಅನಿಲಗಳನ್ನು ಅಥವಾ ಅಪಾಯವನ್ನುಂಟುಮಾಡುವ ಸ್ವರೂಪದ ಇತರೆ ರಾಸಾಯನಿಕಗಳನ್ನು ಅಥವಾ ಯಾವುದೇ ಇತರೆ ವಸ್ತುವನ್ನು (ಅದು ಜೈವಿಕದ್ದಾಗಿರಲಿ ಅಥವಾ ಇತರೆ ರೀತಿಯದ್ದಾಗಿರಲಿ) ಬಳಸುವ ಮೂಲಕ ಮಾಡಿದ ಯಾವುದೇ ಕೃತ್ಯ ಅಥವಾ ಕಾರ್ಯ.

(ಬಿಬಿ) 249ನೇ ಅನುಚ್ಛೇದದಲ್ಲಿ, (1)ನೇ ಖಂಡದಲ್ಲಿ, "ನಿರ್ಣಯದಲ್ಲಿ ನಿರ್ದಿಷ್ಟಪಡಿಸಿರುವ ರಾಜ್ಯ ಪಟ್ಟಿಯಲ್ಲಿ ನಮೂದಿಸಿರುವ ಯಾವುದೇ ವಿಷಯಕ್ಕೆ" ಎಂಬ ಪದಗಳಿಗೆ ಬದಲಾಗಿ "ಒಕ್ಕೂಟ" ಪಟ್ಟಿಯಲ್ಲಿ ಅಥವಾ ಸಮವರ್ತಿ ಪಟ್ಟಿಯಲ್ಲಿ ನಮೂದಿಸಿರದ ವಿಷಯವಾಗಿದ್ದು, ನಿರ್ಣಯದಲ್ಲಿ ನಿರ್ದಿಷ್ಟಪಡಿಸಿರುವ ಯಾವುದೇ ವಿಷಯಕ್ಕೆ" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

(ಸಿ) 250ನೇ ಅನುಚ್ಛೇದ.– "ರಾಜ್ಯಪಟ್ಟಿಯಲ್ಲಿ ನಮೂದಿಸಿದ ವಿಷಯಗಳ ಪೈಕಿ ಯಾವುದೇ ವಿಷಯದ ಬಗ್ಗೆ" ಎಂಬ ಪದಗಳ ಬದಲಾಗಿ "ಒಕ್ಕೂಟ ಪಟ್ಟಿಯಲ್ಲಿ ನಮೂದಿಸಿರದ ವಿಷಯಗಳ ಬಗ್ಗೆ ಸಹ" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

(ಡಿ) (ಡಿ)ಖಂಡವನ್ನು ಬಿಟ್ಟುಬಿಡತಕ್ಕದ್ದು.

(ಇ) 253ನೇ ಅನುಚ್ಛೇದ– ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, 1954ರ ಸಂವಿಧಾನ (ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯ) ಆದೇಶವು ಪ್ರಾರಂಭವಾದ ನಂತರ ಜಮ್ಮು ಮತ್ತು ಕಾಶ್ಮೀರ ರಾಜ್ಯದ ವ್ಯವಸ್ಥೆಗೆ ಬಾಧಕವನ್ನುಂಟುಮಾಡುವ ಯಾವ ತೀರ್ಮಾನವನ್ನು ಭಾರತ ಸರ್ಕಾರವು ಆ ರಾಜ್ಯದ ಸರ್ಕಾರ ಸಮ್ಮತಿ ಇಲ್ಲದೆ ಕೈಗೊಳ್ಳತಕ್ಕದ್ದಲ್ಲ.

(ಎಫ್) 225ನೇ ಅನುಚ್ಛೇದವನ್ನು ಬಿಟ್ಟುಬಿಡತಕ್ಕದ್ದು.

(ಜಿ) ಅನುಚ್ಛೇದ 256.– ಈ ಅನುಚ್ಛೇದಕ್ಕೆ ಖಂಡ (1) ಎಂದು ಪುನರ್ ಸಂಖ್ಯೆ ನೀಡತಕ್ಕದ್ದು ಮತ್ತು ಅದಕ್ಕೆ ಈ ಮುಂದಿನ ಹೊಸ ಖಂಡವನ್ನು ಸೇರಿಸತಕ್ಕದ್ದು, ಎಂದರೆ:–

"(2) ಜಮ್ಮು ಮತ್ತು ಕಾಶ್ಮೀರ ರಾಜ್ಯವು ತನ್ನ ಕಾರ್ಯಾಂಗ ಅಧಿಕಾರವನ್ನು, ಒಕ್ಕೂಟವು ಆ ರಾಜ್ಯಕ್ಕೆ ಸಂಬಂಧಪಟ್ಟಂತೆ ಸಂವಿಧಾನದ ಮೇರೆಗಿನ ಕರ್ತವ್ಯಗಳನ್ನು ಮತ್ತು ಜವಾಬ್ದಾರಿಗಳನ್ನು ನಿರ್ವಹಿಸಲು ಅನುಕೂಲವಾಗುವ ಹಾಗೆ ಚಲಾಯಿಸತಕ್ಕದ್ದು ಮತ್ತು ವಿಶೇಷವಾಗಿ ಆ ರಾಜ್ಯವು, ಒಕ್ಕೂಟದ ಪರವಾಗಿ ಮತ್ತು ಅದರ ವೆಚ್ಚದಲ್ಲಿ ಸ್ವತ್ತನ್ನು ಆರ್ಜಿಸತಕ್ಕದ್ದು ಅಥವಾ ಕಡ್ಡಾಯವಾಗಿ ಕೋರತಕ್ಕದ್ದು ಅಥವಾ ಆ ಸ್ವತ್ತು ರಾಜ್ಯಕ್ಕೆ ಸೇರಿದ್ದಾಗಿದ್ದರೆ, ಅದನ್ನು ಒಪ್ಪಿಗೆಯಾಗಬಹುದಾದಂಥ ನಿಬಂಧನೆಗಳ ಮೇಲೆ ಅಥವಾ ಹಾಗೆ ಒಪ್ಪಿಗೆಯಾಗದಿದ್ದಲ್ಲಿ ಭಾರತದ ಮುಖ್ಯ ನ್ಯಾಯಮೂರ್ತಿಯು ನೇಮಿಸಿದ ಮಧ್ಯಸ್ಥಗಾರನು ನಿರ್ಧರಿಸಬಹುದಾದಂತೆ ಒಕ್ಕೂಟಕ್ಕೆ ವರ್ಗಾಯಿಸತಕ್ಕದ್ದು ಎಂದು ಒಕ್ಕೂಟವು ಅಗತ್ಯಪಡಿಸಿದರೆ ಹಾಗೆ ಮಾಡತಕ್ಕದ್ದು.

(*h*) *Article* 261.—In clause (2), omit "made by Parliament".

**(12) PART XII.**

(*a*) *Articles* 266, 282, 284, 298, 299 and 300. —In these articles references to the State or States shall be construed as not including references to the State of Jammu and Kashmir;

(*b*) omit clause (2) of article 267, article 273, clause (2) of article 283 and article 290;

(*c*) *Articles* 277 and 295.—In these articles references to the commencement of the Constitution shall be construed as references to the commencement of the Constitution (Application to Jammu and Kashmir) Order, 1954, *i.e.*, the 14th day of May, 1954.

(*d*) Omit the sub-heading "CHAPTER IV.— RIGHT TO PROPERTY" and article 300A.

**(13) PART XIII.**

In article 303, in clause (1), omit "by virtue of any entry relating to trade and commerce in any of the Lists in the Seventh Schedule".

**(14) PART XIV.**

Except in article 312, reference to "State" in this Part does not include the State of Jammu and Kashmir.

**(15) PART XIVA.**

This Part is not applicable to the State of Jammu and Kashmir.

**(16) PART XV.—**

(*a*) *Article* 324.— In clause (1), the reference to the Constitution shall, in relation to elections to either House of the Legislature of Jammu and Kashmir, be construed as a reference to the Constitution of Jammu and Kashmir.

(*b*) *Articles* 325, 326 and 327.— In these articles the references to a State shall be construed as not including a reference to the State of Jammu and Kashmir.

(*c*) Omit article 328.

(*d*) *Article* 329.—

(*A*) Reference to a State shall be construed as not including a reference to the State of Jammu and Kashmir;

(ಹೆಚ್) ಅನುಚ್ಛೇದ 261.- (2)ನೇ ಖಂಡದಲ್ಲಿ "ಸಂಸತ್ತು ರಚಿಸಿದ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**(12) ಭಾಗ XII.**

(ಎ) 266ನೇ, 282ನೇ, 284ನೇ, 298ನೇ, 299ನೇ ಮತ್ತು 300ನೇ ಅನುಚ್ಛೇದಗಳು:- ಈ ಅನುಚ್ಛೇದಗಳಲ್ಲಿ ರಾಜ್ಯ ಅಥವಾ ರಾಜ್ಯಗಳಿಗೆ ಮಾಡಿದ ಉಲ್ಲೇಖಗಳು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಮಾಡಿದ ಉಲ್ಲೇಖಗಳನ್ನು ಒಳಗೊಳ್ಳುವುದಿಲ್ಲವೆಂದು ಅರ್ಥೈಸತಕ್ಕದ್ದು;

(ಬಿ) 267ನೇ ಅನುಚ್ಛೇದದ (2)ನೇ ಖಂಡವನ್ನು, 273ನೇ ಅನುಚ್ಛೇದವನ್ನು, 283ನೇ ಅನುಚ್ಛೇದದ (2)ನೇ ಖಂಡವನ್ನು ಮತ್ತು 290ನೇ ಅನುಚ್ಛೇದವನ್ನು ಬಿಟ್ಟುಬಿಡತಕ್ಕದ್ದು;

(ಸಿ) ಅನುಚ್ಛೇದ 277 ಮತ್ತು 295.- ಈ ಅನುಚ್ಛೇದಗಳಲ್ಲಿ ಸಂವಿಧಾನದ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳನ್ನು, ಸಂವಿಧಾನ (ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯ), 1954ರ ಆದೇಶದ ಪ್ರಾರಂಭಕ್ಕೆ ಎಂದರೆ 1954ರ ಮೇ ತಿಂಗಳ 14ನೇ ದಿನಕ್ಕೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು.

(ಡಿ) "ಅಧ್ಯಾಯ IV - ಸ್ವತ್ತಿನ ಹಕ್ಕು" ಎಂಬ ಉಪಶೀರ್ಷಿಕೆಯನ್ನು ಮತ್ತು 300ಎ ಅನುಚ್ಛೇದವನ್ನು ಬಿಟ್ಟುಬಿಡತಕ್ಕದ್ದು.

**(13) ಭಾಗ XIII.**

303ನೇ ಅನುಚ್ಛೇದದಲ್ಲಿ (1)ನೇ ಖಂಡದಲ್ಲಿ "ಏಳನೇ ಅನುಸೂಚಿಯ ಯಾವುದೇ ಪಟ್ಟಿಯಲ್ಲಿ ವ್ಯಾಪಾರಕ್ಕೆ ಮತ್ತು ವಾಣಿಜ್ಯಕ್ಕೆ ಸಂಬಂಧಿಸಿದಂತೆ ಇರುವ ಯಾವುದೇ ನಮೂದಿನ ಕಾರಣದಿಂದ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**(14) ಭಾಗ XIV.**

312ನೇ ಅನುಚ್ಛೇದದಲ್ಲಿ ಹೊರತು, ಈ ಭಾಗದಲ್ಲಿ "ರಾಜ್ಯ"ಕ್ಕೆ ಮಾಡಿದ ಉಲ್ಲೇಖವು ಜಮ್ಮು ಮತ್ತು ಕಾಶ್ಮೀರ ರಾಜ್ಯವನ್ನು ಒಳಗೊಳ್ಳುವುದಿಲ್ಲ.

**(15) ಭಾಗ XIVಎ.**

ಈ ಭಾಗವು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯಿಸುವುದಿಲ್ಲ.

**(16) ಭಾಗ XV.-**

(ಎ) ಅನುಚ್ಛೇದ 324.- (1)ನೇ ಖಂಡದಲ್ಲಿ ಸಂವಿಧಾನಕ್ಕೆ ಮಾಡಿದ ಉಲ್ಲೇಖವನ್ನು ಜಮ್ಮು ಮತ್ತು ಕಾಶ್ಮೀರ ರಾಜ್ಯದ ವಿಧಾನಮಂಡಲದ ಎರಡೂ ಸದನಗಳಿಗೆ ನಡೆಸಲಾಗುವ ಚುನಾವಣೆಗಳಿಗೆ ಸಂಬಂಧಪಟ್ಟಂತೆ ಜಮ್ಮು ಮತ್ತು ಕಾಶ್ಮೀರದ ಸಂವಿಧಾನಕ್ಕೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು.

(ಬಿ) ಅನುಚ್ಛೇದ 325, 326 ಮತ್ತು 327.- ಈ ಅನುಚ್ಛೇದಗಳಲ್ಲಿ ಒಂದು ರಾಜ್ಯಕ್ಕೆ ಮಾಡಿದ ಉಲ್ಲೇಖಗಳು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಮಾಡಿದ ಉಲ್ಲೇಖವನ್ನು ಒಳಗೊಳ್ಳುವುದಿಲ್ಲವೆಂದು ಅರ್ಥೈಸತಕ್ಕದ್ದು.

(ಸಿ) 328ನೇ ಅನುಚ್ಛೇದವನ್ನು ಬಿಟ್ಟುಬಿಡತಕ್ಕದ್ದು.

(ಡಿ) ಅನುಚ್ಛೇದ 329.-

(ಎ) ಒಂದು ರಾಜ್ಯಕ್ಕೆ ಮಾಡಿದ ಉಲ್ಲೇಖವು, ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಮಾಡಿದ ಉಲ್ಲೇಖವನ್ನು ಒಳಗೊಳ್ಳುವುದಿಲ್ಲವೆಂದು ಅರ್ಥೈಸತಕ್ಕದ್ದು;

(*B*) omit "or article 328".

**(17) PART XVI.—** Original clause (*a*) omitted and clauses (*b*) and (*c*) relettered as clauses (*a*) and (*b*).

(*a*) Omit articles 331, 332, 333, 336 and 337.

(*b*) Articles 334 and 335.—References to the State or the States shall be construed as not including references to the State of Jammu and Kashmir.

(*c*) Article 339, in clause (1), omit "the administration of the Scheduled Areas and".

**(18) PART XVII. —** The provisions of this Part shall apply to the State of Jammu and Kashmir only in so far as they relate to—

(*i*) The official language of the Union;

(*ii*) the official language for communication between one State and another, or between a State and the Union; and

(*iii*) The language of the proceedings in the Supreme Court.

**(19) PART XVIII.**

(*a*) For article 352, substitute the following article, namely :—

"**352.** ***Proclamation of Emergency.—***(1) If the President is satisfied that a grave emergency exists whereby the security of India or of any part of the territory thereof is threatened, whether by war or external aggression or internal disturbance, he may, by Proclamation, make a declaration to that effect.

(2) A proclamation issued under clause (1)—

(*a*) may be revoked by a subsequent Proclamation;

(*b*) shall be laid before each House of Parliament;

(*c*) shall cease to operate at the expiration of two months unless before the expiration of that period it has been approved by resolutions of both Houses of Parliament:

Provided that if any such Proclamation is issued at a time when the House of the People has been dissolved or the dissolution of the House of the People takes place during the period of two months referred to in sub-clause (*c*), and if a resolution approving the Proclamation has been passed by the Council of States but no resolution with respect to such Proclamation has been passed by the House of the People before the expiration of that period, the Proclamation shall cease to operate at the expiration of thirty days from the date on which the House of the People first sits after its reconstitution

(ಬಿ) "ಅಥವಾ 328ನೇ ಅನುಚ್ಛೇದ" ಎಂಬ ಪದವನ್ನು ಬಿಟ್ಟುಬಿಡತಕ್ಕದ್ದು.

**(17) ಭಾಗ XVI**– ಮೂಲ (ಎ) ಖಂಡವನ್ನು ಬಿಟ್ಟುಬಿಡತಕ್ಕದ್ದು ಮತ್ತು (ಬಿ) ಮತ್ತು (ಸಿ) ಖಂಡಗಳಿಗೆ, (ಎ) ಮತ್ತು (ಬಿ) ಖಂಡಗಳೆಂದು ಪುನರ್ ಅಕ್ಷರ ನೀಡತಕ್ಕದ್ದು.

(ಎ) 331ನೇ, 332ನೇ, 333ನೇ, 336ನೇ ಮತ್ತು 337ನೇ ಅನುಚ್ಛೇದಗಳನ್ನು ಬಿಟ್ಟುಬಿಡತಕ್ಕದ್ದು.

(ಬಿ) ಅನುಚ್ಛೇದ 334 ಮತ್ತು 335.– ಈ ಅನುಚ್ಛೇದಗಳಲ್ಲಿ ರಾಜ್ಯಕ್ಕೆ ಅಥವಾ ರಾಜ್ಯಗಳಿಗೆ ಮಾಡಿದ ಉಲ್ಲೇಖಗಳು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಮಾಡಿದ ಉಲ್ಲೇಖಗಳನ್ನು ಒಳಗೊಳ್ಳುವುದಿಲ್ಲವೆಂದು ಅರ್ಥೈಸತಕ್ಕದ್ದು.

(ಸಿ) 339ನೇ ಅನುಚ್ಛೇದದ, (1)ನೇ ಖಂಡದಲ್ಲಿ "ಅನುಸೂಚಿತ ಪ್ರದೇಶಗಳ ಆಡಳಿತ ಮತ್ತು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**(18) ಭಾಗ XVII** – ಈ ಭಾಗದ ಉಪಬಂಧಗಳು – ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅವು–

(i) ಒಕ್ಕೂಟದ ರಾಜಭಾಷೆಗೆ;

(ii) ಒಂದು ರಾಜ್ಯದ ಮತ್ತು ಇನ್ನೊಂದು ರಾಜ್ಯದ ನಡುವೆ ಅಥವಾ ಒಂದು ರಾಜ್ಯದ ಮತ್ತು ಒಕ್ಕೂಟದ ನಡುವೆ ಸಂಪರ್ಕಕ್ಕಾಗಿನ ರಾಜಭಾಷೆಗೆ; ಮತ್ತು

(iii) ಸರ್ವೋಚ್ಚ ನ್ಯಾಯಾಲಯದಲ್ಲಿನ ವ್ಯವಹರಣೆಗಳ ಭಾಷೆಗೆ

– ಸಂಬಂಧಪಡುವಷ್ಟರಮಟ್ಟಿಗೆ ಮಾತ್ರ ಅನ್ವಯವಾಗತಕ್ಕದ್ದು.

**(19) ಭಾಗ XVIII.**

(ಎ) 352ನೇ ಅನುಚ್ಛೇದಕ್ಕೆ ಬದಲಾಗಿ, ಈ ಕೆಳಕಂಡ ಅನುಚ್ಛೇದವನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

**"352. ತುರ್ತು ಪರಿಸ್ಥಿತಿಯ ಉದ್ಘೋಷಣೆ.**– (1) ಭಾರತದ ಅಥವಾ ಅದರ ರಾಜ್ಯ ಕ್ಷೇತ್ರದ ಯಾವುದೇ ಭಾಗದ ಭದ್ರತೆಗೆ ಯುದ್ಧದಿಂದಾಗಲಿ ಅಥವಾ ಬಾಹ್ಯ ಆಕ್ರಮಣದಿಂದಾಗಲಿ ಅಥವಾ ಆಂತರಿಕ ಗಲಭೆಗಳಿಂದಾಗಲಿ ಬೆದರಿಕೆಯ ಗಂಭೀರ ತುರ್ತು ಪರಿಸ್ಥಿತಿ ಉಂಟಾಗಿದೆ ಎಂದು ರಾಷ್ಟ್ರಪತಿಗೆ ಮನದಟ್ಟಾದರೆ, ಅವನು ಉದ್ಘೋಷಣೆಯ ಮೂಲಕ ಆ ಬಗ್ಗೆ ಘೋಷಣೆಯನ್ನು ಮಾಡಬಹುದು.

(2) (1)ನೇ ಖಂಡದ ಮೇರೆಗೆ ಹೊರಡಿಸಿದ ಉದ್ಘೋಷಣೆಯನ್ನು,–

(ಎ) ತದನಂತರದ ಉದ್ಘೋಷಣೆಯ ಮೂಲಕ ರದ್ದುಪಡಿಸಬಹುದು;

(ಬಿ) ಸಂಸತ್ತಿನ ಪ್ರತಿಯೊಂದು ಸದನದ ಮುಂದೆ ಮಂಡಿಸತಕ್ಕದ್ದು;

(ಸಿ) ಎರಡು ತಿಂಗಳುಗಳ ಅವಧಿಯು ಮುಗಿಯುವುದಕ್ಕೆ ಮುಂಚೆ ಸಂಸತ್ತಿನ ಉಭಯ ಸದನಗಳ ನಿರ್ಣಯಗಳ ಮೂಲಕ ಅನುಮೋದಿತವಾಗಿದ್ದ ಹೊರತು ಆ ಅವಧಿಯು ಮುಕ್ತಾಯವಾದ ಮೇಲೆ ಪ್ರವರ್ತನೆಯಲ್ಲಿರುವುದು ನಿಂತುಹೋಗತಕ್ಕದ್ದು:

ಪರಂತು, ಅಂಥ ಯಾವುದೇ ಉದ್ಘೋಷಣೆಯನ್ನು ಲೋಕಸಭೆಯು ವಿಸರ್ಜನೆಯಾಗಿರುವ ಕಾಲದಲ್ಲಿ ಅಥವಾ (ಸಿ) ಉಪಖಂಡದಲ್ಲಿ ಉಲ್ಲೇಖಿಸಿದ ಎರಡು ತಿಂಗಳ ಅವಧಿಯಲ್ಲಿ ಲೋಕಸಭೆಯು ವಿಸರ್ಜನೆಯಾಗಿರುವ ಕಾಲದಲ್ಲಿ ಹೊರಡಿಸಿದ್ದರೆ ಮತ್ತು ಆ ಉದ್ಘೋಷಣೆಯನ್ನು ಅನುಮೋದಿಸುವ ನಿರ್ಣಯವು ರಾಜ್ಯಸಭೆಯಿಂದ ಅಂಗೀಕೃತವಾಗಿದ್ದು, ಆದರೆ ಅಂಥ ಉದ್ಘೋಷಣೆಯ ಬಗೆಗಿನ ಯಾವುದೇ ನಿರ್ಣಯವು ಆ ಅವಧಿಯು ಮುಕ್ತಾಯವಾಗುವುದರೊಳಗೆ ಲೋಕಸಭೆಯಿಂದ ಅಂಗೀಕೃತವಾಗಿರದಿದ್ದರೆ, ಲೋಕಸಭೆಯು ಪುನರ್ ರಚಿತವಾದ ಬಳಿಕ ಅದು ಮೊದಲನೆಯ ಸಲ ಸಭೆ ಸೇರಿದ ದಿನಾಂಕದಿಂದ ಮೂವತ್ತು ದಿನಗಳು ಮುಗಿಯುತ್ತಲೇ, ಮೂವತ್ತು ದಿನಗಳ ಸದರಿ ಅವಧಿಯು ಮುಗಿಯುವುದಕ್ಕೆ ಮುಂಚೆ

unless before the expiration of the said period of thirty days a resolution approving the Proclamation has been also passed by the House of the People.

(3) A Proclamation of Emergency declaring that the security of India or of any part of the territory thereof is threatened by war or by external aggression or by internal disturbance may be made before the actual occurrence of war or of any such aggression or disturbance if the President is satisfied that there is imminent danger thereof.

(4) The power conferred on the President by this article shall include the power to issue different Proclamations on different grounds, being war or external aggression or internal disturbance or imminent danger of war or external aggression or internal disturbance, whether or not there is a Proclamation already issued by the President under clause (1) and such Proclamation is in operation.

(5) Notwithstanding anything in the Constitution,—

(*a*) the satisfaction of the President mentioned in clause (1) and clause (3) shall be final and conclusive and shall not be questioned in any court on any ground;

(*b*) subject to the provisions of clause (2), neither the Supreme Court nor any other Court shall have jurisdiction to entertain any question, on any ground, regarding the validity of —

(*i*) a declaration made by Proclamation by the President to the effect stated in clause (1); or

(*ii*) the continued operation of such Proclamation.

(6) No Proclamation of Emergency made on grounds only of internal disturbance or imminent danger thereof shall have effect in relation to the State of Jammu and Kashmir (except as respects article 354) unless—

(*a*) it is made at the request or with the concurrence of the Government of that State; or

(*b*) where it has not been so made, it is applied subsequently by the President to that State at the request or with the concurrence of the Government of that State.".

(*b*) *Article* 353.— Omit the proviso.

(*c*) *Article* 356.—

(*A*) In clause (1), reference to provisions or provision of this Constitution shall, in relation to the State of Jammu and Kashmir, be

ಲೋಕಸಭೆಯಿಂದ ಸಹ ಆ ಉದ್ಘೋಷಣೆಯನ್ನು ಅನುಮೋದಿಸುವ ನಿರ್ಣಯವು ಅಂಗೀಕೃತವಾಗಿದ್ದ ಹೊರತು, ಆ ಉದ್ಘೋಷಣೆಯು ಜಾರಿಯಲ್ಲಿರುವುದು ನಿಂತುಹೋಗತಕ್ಕದ್ದು.

(3) ಭಾರತದ ಅಥವಾ ಅದರ ರಾಜ್ಯಕ್ಷೇತ್ರದ ಯಾವುದೇ ಭಾಗದ ಭದ್ರತೆಗೆ ಯುದ್ಧದಿಂದ ಅಥವಾ ಬಾಹ್ಯ ಆಕ್ರಮಣದಿಂದ ಅಥವಾ ಆಂತರಿಕ ಗಲಭೆಯಿಂದ ಅಪಾಯವು ಸನ್ನಿಹಿತವಾಗಿದೆಯೆಂದು ರಾಷ್ಟ್ರಪತಿಗೆ ಮನದಟ್ಟಾದರೆ, ಅಂಥ ಯುದ್ಧವು ಅಥವಾ ಅಂಥ ಆಕ್ರಮಣವು ಅಥವಾ ಗಲಭೆಯು ವಾಸ್ತವಿಕವಾಗಿ ಘಟಿಸುವುದಕ್ಕೆ ಮೊದಲೇ, ಅಂಥ ಬೆದರಿಕೆಯು ಒದಗಿದೆಯೆಂದು ತುರ್ತು ಪರಿಸ್ಥಿತಿಯ ಉದ್ಘೋಷಣೆಯನ್ನು ಹೊರಡಿಸಬಹುದು.

(4) ಈ ಅನುಚ್ಛೇದದ ಮೂಲಕ ರಾಷ್ಟ್ರಪತಿಗೆ ಪ್ರದತ್ತವಾದ ಅಧಿಕಾರವು, (1)ನೇ ಖಂಡದ ಮೇರೆಗೆ ರಾಷ್ಟ್ರಪತಿಯು ಈಗಾಗಲೇ ಉದ್ಘೋಷಣೆಯನ್ನು ಹೊರಡಿಸಿರಲಿ ಅಥವಾ ಇಲ್ಲದಿರಲಿ ಮತ್ತು ಅಂಥ ಉದ್ಘೋಷಣೆಯು ಜಾರಿಯಲ್ಲಿರಲಿ ಅಥವಾ ಇಲ್ಲದಿರಲಿ, ಬೇರೆ ಬೇರೆ ಆಧಾರಗಳ ಮೇಲೆ ಎಂದರೆ, ಯುದ್ಧದ ಅಥವಾ ಬಾಹ್ಯ ಆಕ್ರಮಣದ ಅಥವಾ ಆಂತರಿಕ ಗಲಭೆಯ ಅಥವಾ ಯುದ್ಧದ ಅಥವಾ ಬಾಹ್ಯ ಆಕ್ರಮಣದ ಅಥವಾ ಆಂತರಿಕ ಗಲಭೆಯ ಅಪಾಯವು ಸನ್ನಿಹಿತವಾಗಿದೆ ಎಂಬ ಆಧಾರದ ಮೇಲೆ, ಬೇರೆ ಬೇರೆ ಉದ್ಘೋಷಣೆಗಳನ್ನು ಹೊರಡಿಸುವ ಅಧಿಕಾರವನ್ನು ಒಳಗೊಂಡಿರತಕ್ಕದ್ದು.

(5) ಈ ಸಂವಿಧಾನದಲ್ಲಿ ಏನೇ ಇದ್ದರೂ,-

(ಎ) (1)ನೇ ಖಂಡದಲ್ಲಿ ಮತ್ತು (3)ನೇ ಖಂಡದಲ್ಲಿ ಹೇಳಿರುವಂತೆ ರಾಷ್ಟ್ರಪತಿಗೆ ಮನವರಿಕೆಯಾಗಿರುವುದು ಅಂತಿಮವಾದುದು ಮತ್ತು ನಿರ್ಣಾಯಕವಾದುದು ಆಗಿರತಕ್ಕದ್ದು ಮತ್ತು ಅದನ್ನು ಯಾವುದೇ ಆಧಾರದ ಮೇಲೆ ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸತಕ್ಕದ್ದಲ್ಲ.

(ಬಿ) (2)ನೇ ಖಂಡದ ಉಪಬಂಧಗಳಿಗೆ ಒಳಪಟ್ಟು, ಸರ್ವೋಚ್ಚ ನ್ಯಾಯಾಲಯಕ್ಕಾಗಲಿ ಅಥವಾ ಇತರ ಯಾವುದೇ ನ್ಯಾಯಾಲಯಕ್ಕಾಗಲಿ,-

(i) (1)ನೇ ಖಂಡದಲ್ಲಿ ಹೇಳಿರುವಂತೆ ರಾಷ್ಟ್ರಪತಿಯು ಉದ್ಘೋಷಣೆಯ ಮೂಲಕ ಮಾಡಿದ ಘೋಷಣೆಯ; ಅಥವಾ

(ii) ಅಂಥ ಉದ್ಘೋಷಣೆಯ ಜಾರಿಯ ಮುಂದುವರಿಕೆಯ

- ಸಿಂಧುತ್ವದ ಬಗೆಗಿನ ಯಾವುದೇ ಪ್ರಶ್ನೆಯನ್ನು ಯಾವುದೇ ಆಧಾರದ ಮೇಲೆ ಪುರಸ್ಕರಿಸಲು ಅಧಿಕಾರ ವ್ಯಾಪ್ತಿ ಇರತಕ್ಕದ್ದಲ್ಲ.

(6) ಆಂತರಿಕ ಗಲಭೆಗಳ ಅಥವಾ ಆ ಅಪಾಯವು ಸನ್ನಿಹಿತವಾಗಿದೆಯೆಂಬ ಕಾರಣಗಳ ಮೇಲೆ ಮಾತ್ರ ಹೊರಡಿಸಿದ, ತುರ್ತುಪರಿಸ್ಥಿತಿಯ ಯಾವುದೇ ಉದ್ಘೋಷಣೆಯು,-

(ಎ) ಅದನ್ನು ಆ ರಾಜ್ಯ ಸರ್ಕಾರದ ಕೋರಿಕೆ ಮೇರೆಗೆ ಅಥವಾ ಸಹಮತಿಯೊಂದಿಗೆ ಮಾಡಿದ್ದ ಹೊರತು; ಅಥವಾ

(ಬಿ) ಅದನ್ನು ಹಾಗೆ ಮಾಡಿರದಿದ್ದರೆ, ಆ ರಾಜ್ಯ ಸರ್ಕಾರದ ಕೋರಿಕೆ ಮೇರೆಗೆ ಅಥವಾ ಸಹಮತಿಯೊಂದಿಗೆ ಆ ರಾಜ್ಯಕ್ಕೆ ರಾಷ್ಟ್ರಪತಿಯು ಅದನ್ನು ತದನಂತರ ಅನ್ವಯಿಸಿದ ಹೊರತು

- ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಸಂಬಂಧಪಟ್ಟಂತೆ (354ನೇ ಅನುಚ್ಛೇದಕ್ಕೆ ಸಂಬಂಧಿಸಿದಂತೆ ಹೊರತು) ಪರಿಣಾಮಕಾರಿಯಾಗಿರತಕ್ಕದ್ದಲ್ಲ.

(ಬಿ) ಅನುಚ್ಛೇದ 353.- ಪರಂತುಕವನ್ನು ಬಿಟ್ಟುಬಿಡತಕ್ಕದ್ದು.

(ಸಿ) ಅನುಚ್ಛೇದ 356.-

(ಎ) (1)ನೇ ಖಂಡದಲ್ಲಿ ಈ ಸಂವಿಧಾನದ ಉಪಬಂಧಗಳಿಗೆ ಅಥವಾ ಉಪಬಂಧಕ್ಕೆ ಮಾಡಿದ ಉಲ್ಲೇಖವು, ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಸಂಬಂಧಿಸಿದಂತೆ ಜಮ್ಮು ಮತ್ತು ಕಾಶ್ಮೀರ ರಾಜ್ಯದ

construed as including references to provisions or provision of the Constitution of Jammu and Kashmir;

(*B*) in clause (4),—

(*i*) for the opening portion, substitute the following, namely:—

"A Proclamation so approved shall, unless revoked, cease to operate on the expiration of a period of six months from the date of the passing of the second of the resolutions approving the Proclamation under clause (3)";

(*ii*) after the second proviso, the following proviso shall be inserted, namely :—

'Provided also that in the case of the Proclamation issued under clause (1) on the 18th day of July, 1990 with respect to the State of Jammu and Kashmir, the reference in the fist proviso to this clause to "three years" shall be construed as a reference to "seven years".'.

(*C*) for clause (5), substitute the following clause, namely :—

"(5) Notwithstanding anything in this Constitution, the satisfaction of the President mentioned in clause (1) shall be final and conclusive and shall not be questioned in any court on any ground.".

(*d*) *Article* 357.— For clause (2), substitute the following clause, namely :—

"(2) Any law made in exercise of the power of the Legislature of the State by Parliament or the President or other authority referred to in sub-clause (*a*) of clause (1) which Parliament or the President or such other authority would not, but for the issue of a Proclamation under article 356, have been competent to make shall, to the extent of the incompetency, cease to have effect on the expiration of a period of one year after the Proclamation has ceased to operate except as respects things done or omitted to be done before the expiration of the said period, unless the provisions which shall so cease to have effect are sooner repealed or re-enacted with or without modification by Act of the appropriate Legislature.".

(*e*) For article 358, substitute the following article, namely :—

**"358.** ***Suspension of provisions of article 19 during emergencies***.— While a Proclamation of Emergency is in operation, nothing in article 19 shall restrict the power of the State as defined in Part III to make any law or to take any executive action which the State would but for the provisions contained in that Part be competent to make or to take, but any law so made shall, to the extent of the incompetency, cease to have effect as soon

ಸಂವಿಧಾನದ ಉಪಬಂಧಗಳಿಗೆ ಅಥವಾ ಉಪಬಂಧಕ್ಕೆ ಮಾಡಿದ ಉಲ್ಲೇಖಗಳನ್ನು ಒಳಗೊಂಡಿರುವಂತೆ ಅರ್ಥೈಸತಕ್ಕದ್ದು;

(ಬಿ) (4)ನೇ ಖಂಡದಲ್ಲಿ,-

(i) ಪ್ರಾರಂಭದ ಭಾಗಕ್ಕೆ, ಈ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

"ಹಾಗೆ ಅನುಮೋದಿತವಾದ ಉದ್ಘೋಷಣೆಯನ್ನು ರದ್ದುಗೊಳಿಸದಿದ್ದರೆ, (3)ನೇ ಖಂಡದ ಮೇರೆಗೆ ಆ ಉದ್ಘೋಷಣೆಯನ್ನು ಅನುಮೋದಿಸುವ ನಿರ್ಣಯಗಳಲ್ಲಿ ಎರಡನೆಯದನ್ನು ಅಂಗೀಕರಿಸಿದ ದಿನಾಂಕದಿಂದ ಆರು ತಿಂಗಳುಗಳ ಅವಧಿಯು ಮುಕ್ತಾಯವಾದ ಮೇಲೆ ಅದು ಜಾರಿಯಲ್ಲಿರುವುದು ನಿಂತುಹೋಗತಕ್ಕದ್ದು";

(ii) ಎರಡನೆಯ ಪರಂತುಕದ ನಂತರ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

'ಮತ್ತೂ ಪರಂತು, ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಸಂಬಂಧಪಟ್ಟಂತೆ 1990ರ ಜುಲೈ 18ನೇ ದಿನದಂದು (1)ನೇ ಖಂಡದ ಮೇರೆಗೆ ಉದ್ಘೋಷಣೆಯನ್ನು ಹೊರಡಿಸಿದ್ದರೆ, ಈ ಖಂಡದ ಮೊದಲನೆಯ ಪರಂತುಕದಲ್ಲಿ "ಮೂರು ವರ್ಷಗಳಿಗಿಂತ" ಎಂಬುದಕ್ಕೆ ಮಾಡಿದ ಉಲ್ಲೇಖವನ್ನು "ಏಳು ವರ್ಷಗಳಿಗಿಂತ" ಎಂಬುದಕ್ಕೆ ಮಾಡಿದ ಉಲ್ಲೇಖವೆಂದು ಅರ್ಥೈಸತಕ್ಕದ್ದು.'.

(ಸಿ) (5)ನೇ ಖಂಡದ ಬದಲಾಗಿ, ಈ ಮುಂದಿನ ಖಂಡವನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

"(5) ಈ ಸಂವಿಧಾನದಲ್ಲಿ ಏನೇ ಇದ್ದರೂ, (1)ನೇ ಖಂಡದಲ್ಲಿ ಹೇಳಿರುವಂತೆ ರಾಷ್ಟ್ರಪತಿಗೆ ಮನವರಿಕೆಯಾಗಿರುವುದು ಅಂತಿಮವಾದುದು ಮತ್ತು ನಿರ್ಣಾಯಕವಾದುದು ಆಗಿರತಕ್ಕದ್ದು ಮತ್ತು ಅದನ್ನು ಯಾವುದೇ ಆಧಾರದ ಮೇಲೆ ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸತಕ್ಕದ್ದಲ್ಲ".

(ಡಿ) 357ನೇ ಅನುಚ್ಛೇದ.- (2)ನೇ ಖಂಡದ ಬದಲಾಗಿ ಈ ಮುಂದಿನ ಖಂಡವನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

"(2) 356ನೇ ಅನುಚ್ಛೇದದ ಮೇರೆಗೆ ಒಂದು ಉದ್ಘೋಷಣೆಯನ್ನು ಹೊರಡಿಸದೇ ಇದ್ದರೆ ರಾಜ್ಯದ ವಿಧಾನಮಂಡಲದ ಅಧಿಕಾರವನ್ನು ಚಲಾಯಿಸಿ, ಸಂಸತ್ತು ಅಥವಾ ರಾಷ್ಟ್ರಪತಿಯು ಅಥವಾ (1)ನೇ ಖಂಡದ (ಎ) ಉಪಖಂಡದಲ್ಲಿ ಉಲ್ಲೇಖಿಸಿದ ಇತರ ಪ್ರಾಧಿಕಾರಿಯು ಮಾಡಿದ ಯಾವ ಕಾನೂನನ್ನು, ಸಂಸತ್ತು ಅಥವಾ ರಾಷ್ಟ್ರಪತಿಯು ಅಥವಾ ಅಂಥ ಇತರ ಪ್ರಾಧಿಕಾರವು ರಚಿಸಲು ಸಕ್ಷಮವಾಗುತ್ತಿರಲಿಲ್ಲವೋ, ಅಂಥ ಯಾವುದೇ ಕಾನೂನು, ಹಾಗೆ ಪರಿಣಾಮಕಾರಿಯಾಗಿರುವುದು ನಿಂತುಹೋಗತಕ್ಕ ಉಪಬಂಧಗಳನ್ನು ಸಕ್ಷಮ ವಿಧಾನಮಂಡಲದ ಅಧಿನಿಯಮದ ಮೂಲಕ ಮೊದಲೇ ನಿರಸನಗೊಳಿಸಿದ್ದ ಹೊರತು ಅಥವಾ ಮಾರ್ಪಾಟುಗಳೊಂದಿಗೆ ಅಥವಾ ಮಾರ್ಪಾಟುಗಳಿಲ್ಲದೆಯೇ ಪುನಃ ಅಧಿನಿಯಮಿತಿಗೊಳಿಸಿದ್ದ ಹೊರತು, ಆ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ಮಾಡಿದ ಅಥವಾ ಮಾಡದೆ ಬಿಟ್ಟ ಕಾರ್ಯಗಳಿಗೆ ಸಂಬಂಧಿಸಿದಂತೆ ಹೊರತು ಆ ಉದ್ಘೋಷಣೆಯು ಪ್ರವರ್ತನೆಯಲ್ಲಿರುವುದು ನಿಂತುಹೋದ ನಂತರ ಒಂದು ವರ್ಷದ ಅವಧಿಯು ಮುಕ್ತಾಯವಾದ ಮೇಲೆ, ಆ ಅಸಮರ್ಥತೆಯ ಮಟ್ಟಿಗೆ ಪರಿಣಾಮಕಾರಿಯಾಗಿರುವುದು ನಿಂತುಹೋಗತಕ್ಕದ್ದು".

(ಇ) 358ನೇ ಅನುಚ್ಛೇದಕ್ಕೆ ಬದಲಾಗಿ, ಈ ಮುಂದಿನ ಅನುಚ್ಛೇದವನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

"**358. ತುರ್ತು ಪರಿಸ್ಥಿತಿಗಳಲ್ಲಿ 19ನೇ ಅನುಚ್ಛೇದದ ಉಪಬಂಧಗಳ ಅಮಾನತು:-** 19ನೇ ಅನುಚ್ಛೇದದಲ್ಲಿ ಇರುವುದು ಯಾವುದೂ, ತುರ್ತು ಪರಿಸ್ಥಿತಿಯ ಉದ್ಘೋಷಣೆಯು ಜಾರಿಯಲ್ಲಿರುವಾಗ, ಯಾವ ಕಾನೂನನ್ನು ರಚಿಸಲು ಅಥವಾ ಯಾವ ಕಾರ್ಯಾಂಗ ಕ್ರಮವನ್ನು ಕೈಗೊಳ್ಳಲು ರಾಜ್ಯವು IIIನೇ ಭಾಗದಲ್ಲಿ ಪರಿಭಾಷಿಸಿದ ಉಪಬಂಧಗಳಿಲ್ಲದಿದ್ದರೆ ಸಕ್ಷಮವಾಗುತ್ತಿತ್ತೋ ಅಂಥ ಕಾನೂನನ್ನು ರಚಿಸಲು ಅಥವಾ ಅಂಥ ಕಾರ್ಯಾಂಗ ಕ್ರಮವನ್ನು ಕೈಗೊಳ್ಳಲು ಆ ಭಾಗದಲ್ಲಿ ಒಳಗೊಂಡಿರುವ ಆ ರಾಜ್ಯದ ಅಧಿಕಾರವನ್ನು ನಿರ್ಬಂಧಿಸತಕ್ಕದ್ದಲ್ಲ; ಆದರೆ ಹಾಗೆ ರಚಿಸಿದ ಯಾವುದೇ ಕಾನೂನು, ಉದ್ಘೋಷಣೆಯು ಜಾರಿಯಲ್ಲಿರುವುದು ನಿಂತುಹೋದ ಕೂಡಲೇ, ಆ ಕಾನೂನು ಪರಿಣಾಮಕಾರಿಯಾಗಿರುವುದು ನಿಂತುಹೋಗುವುದಕ್ಕೆ ಮುಂಚೆ ಮಾಡಿದ ಅಥವಾ

as the Proclamation ceases to operate, except as respects things done or omitted to be done before the law so ceases to have effect.".

(*f*) *Article* 359, —

(*A*) in clause (1) omit "(except articles 20 and 21)";

(*B*) in clause (1A),—

(*i*) omit "(except articles 20 and 21)";

(*ii*) omit the proviso;

(*C*) omit clause (1B);

(*D*) in clause (2), omit the proviso.

(*g*) omit article 360.

**(20) PART XIX.**

(*a*) *Article* 361A.— This article is not applicable to the State of Jammu and Kashmir.

(*b*) Omit article 365.

(*c*) *Article* 367.— After clause (3), add the following clause, namely:—

"(4) For the purposes of this Constitution as it applies in relation to the State of Jammu and Kashmir —

(*a*) references to this Constitution or to the provisions thereof shall be construed as references to the Constitution or the provisions thereof as applied in relation to the said State;

(*aa*) references to the person for the time being recognised by the President on the recommendation of the Legislative Assembly of the State as the Sadar-i-Riyasat of Jammu and Kashmir, acting on the advice of the Council of Ministers of the State for the time being in office, shall be construed as references to the Governor of Jammu and Kashmir;

(*b*) references to the Government of the said State shall be construed as including references to the Governor of Jammu and Kashmir acting on the advice of his Council of Ministers:

Provided that in respect of any period prior to the 10th day of April, 1965, such references shall be construed as including references to the Sadar-i-Riyasat acting on the advice of his Council of Ministers;

ಮಾಡದೆ ಬಿಟ್ಟ ಕಾರ್ಯವನ್ನು ಹೊರತುಪಡಿಸಿ ಆ ಸಕ್ಷಮತೆಯ ಮಟ್ಟಿಗೆ ಪರಿಣಾಮಕಾರಿಯಾಗಿರುವುದು ನಿಂತುಹೋಗತಕ್ಕದ್ದು".

(ಎಫ್) ಅನುಚ್ಛೇದ 359.–

(ಎ) (1)ನೇ ಖಂಡದಲ್ಲಿ "(20ನೇ ಮತ್ತು 21ನೇ ಅನುಚ್ಛೇದಗಳನ್ನು ಹೊರತುಪಡಿಸಿ)" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(ಬಿ) (1ಎ) ಖಂಡದಲ್ಲಿ,–

(i) "(20ನೇ ಮತ್ತು 21ನೇ ಅನುಚ್ಛೇದಗಳನ್ನು ಹೊರತುಪಡಿಸಿ)" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(ii) ಪರಂತುಕವನ್ನು ಬಿಟ್ಟುಬಿಡತಕ್ಕದ್ದು;

(ಸಿ) (1ಬಿ) ಖಂಡವನ್ನು ಬಿಟ್ಟುಬಿಡತಕ್ಕದ್ದು;

(ಡಿ) (2)ನೇ ಖಂಡದಲ್ಲಿ, ಪರಂತುಕವನ್ನು ಬಿಟ್ಟುಬಿಡತಕ್ಕದ್ದು.

(ಜಿ) 360ನೇ ಅನುಚ್ಛೇದವನ್ನು ಬಿಟ್ಟುಬಿಡತಕ್ಕದ್ದು.

**(20) ಭಾಗ XIX.–**

(ಎ) 361ಎ ಅನುಚ್ಛೇದ.– ಈ ಅನುಚ್ಛೇದವು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯವಾಗುವುದಿಲ್ಲ.

(ಬಿ) 365ನೇ ಅನುಚ್ಛೇದವನ್ನು ಬಿಟ್ಟುಬಿಡತಕ್ಕದ್ದು.

(ಸಿ) 367 ಅನುಚ್ಛೇದ.– (3)ನೇ ಖಂಡದ ನಂತರ ಈ ಮುಂದಿನ ಖಂಡವನ್ನು ಸೇರಿಸತಕ್ಕದ್ದು, ಎಂದರೆ:–

"(4) ಈ ಸಂವಿಧಾನದ ಉದ್ದೇಶಗಳಿಗಾಗಿ, ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಸಂಬಂಧಪಟ್ಟಂತೆ ಅದು ಅನ್ವಯವಾಗುವ ಹಾಗೆ,–

(ಎ) ಈ ಸಂವಿಧಾನಕ್ಕೆ ಅಥವಾ ಅದರ ಉಪಬಂಧಗಳಿಗೆ ಮಾಡಿದ ಉಲ್ಲೇಖಗಳನ್ನು ಈ ಸಂವಿಧಾನವು ಅಥವಾ ಅದರ ಉಪಬಂಧಗಳು ಸದರಿ ರಾಜ್ಯಕ್ಕೆ ಸಂಬಂಧಪಟ್ಟಂತೆ ಅನ್ವಯವಾಗುವ ಹಾಗೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು;

(ಎಎ) ಜಮ್ಮು ಮತ್ತು ಕಾಶ್ಮೀರ ರಾಜ್ಯದ ವಿಧಾನಸಭೆಯ ಶಿಫಾರಸ್ಸಿನ ಮೇಲೆ, ಆ ರಾಜ್ಯದ ಸದರ್–ಈ–ರಿಯಾಸತ್ ಎಂದು ರಾಷ್ಟ್ರಪತಿಯು ತತ್ಕಾಲದಲ್ಲಿ ಮಾನ್ಯತೆ ನೀಡಿದ್ದ, ತತ್ಕಾಲದಲ್ಲಿ ಅಧಿಕಾರದಲ್ಲಿರುವ ರಾಜ್ಯ ಮಂತ್ರಿಮಂಡಲದ ಸಲಹೆಯ ಮೇಲೆ ಕಾರ್ಯನಿರ್ವಹಿಸುತ್ತಿರುವ ವ್ಯಕ್ತಿಗೆ ಮಾಡಿದ ಉಲ್ಲೇಖಗಳನ್ನು ಜಮ್ಮು ಮತ್ತು ಕಾಶ್ಮೀರ ರಾಜ್ಯದ ರಾಜ್ಯಪಾಲನಿಗೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು;

(ಬಿ) ಆ ರಾಜ್ಯ ಸರ್ಕಾರಕ್ಕೆ ಮಾಡಿದ ಉಲ್ಲೇಖಗಳನ್ನು, ಅವು ತನ್ನ ಮಂತ್ರಿಮಂಡಲದ ಸಲಹೆಯ ಮೇಲೆ ಕಾರ್ಯನಿರ್ವಹಿಸುತ್ತಿರುವ ಜಮ್ಮು ಮತ್ತು ಕಾಶ್ಮೀರ ರಾಜ್ಯದ ರಾಜ್ಯಪಾಲನಿಗೆ ಮಾಡಿದ ಉಲ್ಲೇಖಗಳನ್ನು ಒಳಗೊಂಡಿರುವ ಹಾಗೆ ಅರ್ಥೈಸತಕ್ಕದ್ದು:

ಪರಂತು, 1965ನೇ ಇಸವಿಯ ಏಪ್ರಿಲ್ ತಿಂಗಳ 10ನೇ ದಿನಕ್ಕೆ ಮುಂಚಿನ ಯಾವುದೇ ಅವಧಿಗೆ ಸಂಬಂಧಿಸಿದಂತೆ ಅಂಥ ಉಲ್ಲೇಖಗಳು ತನ್ನ ಮಂತ್ರಿಮಂಡಲದ ಸಲಹೆಯ ಮೇಲೆ ಕಾರ್ಯನಿರ್ವಹಿಸುತ್ತಿರುವ ಸದರ್–ಈ–ರಿಯಾಸತ್‌ಗೆ ಮಾಡಿದ ಉಲ್ಲೇಖಗಳನ್ನು ಒಳಗೊಂಡಿರುವ ಹಾಗೆ ಅರ್ಥೈಸತಕ್ಕದ್ದು;

(*c*) references to a High Court shall include references to the High Curt of Jammu and Kashmir;

(*d*) references to the permanent residents of the said State shall be construed as meaning persons who, before the commencement of the Constitution (Application to Jammu and Kashmir) Order, 1954, were recognised as State subjects under the laws in force in the State or who are recognised by any law made by the Legislature of the State as permanent residents of the State; and

(*e*) references to a Governor shall include references to the Governor of Jammu and Kashmir :

Provided that in respect of any period prior to the 10th day of April, 1965, such references shall be construed as references to the person recognised by the President as the Sadar-i-Riyasat of Jammu and Kashmir and as including references to any person recognised by the President as being competent to exercise the powers of the Sadar-i-Riyasat.

**(21) PART XX.**

Article 368.—

(*a*) in clause (2), add the following further proviso, namely:—

"Provided further that no such amendment shall have effect in relation to the State of Jammu and Kashmir unless applied by order of the President under clause (1) of article 370.";

(*b*) Omit clauses (4) and (5) and after clause (3) add the following clause, namely :—

"(4) No law made by the Legislature of the State of Jammu and Kashmir seeking to make any change in or in the effect of any provision of the Constitution of Jammu and Kashmir relating to:—

(*a*) appointment, powers, functions, duties, emoluments, allowances, privileges or immunities of the Governor; or

(*b*) superintendence, direction and control of elections by the Election Commission of India, eligibility for inclusion in the electoral rolls without discrimination, adult suffrage and composition of the Legislative Council, being matters specified in sections 138, 139, 140 and 50 of the Constitution of Jammu and Kashmir,

(ಸಿ) ಒಂದು ಉಚ್ಚ ನ್ಯಾಯಾಲಯಕ್ಕೆ ಮಾಡಿದ ಉಲ್ಲೇಖಗಳು ಜಮ್ಮು ಮತ್ತು ಕಾಶ್ಮೀರ ರಾಜ್ಯದ ಉಚ್ಚ ನ್ಯಾಯಾಲಯಕ್ಕೆ ಮಾಡಿದ ಉಲ್ಲೇಖಗಳನ್ನೊಳಗೊಂಡಿರತಕ್ಕದ್ದು;

(ಡಿ) ಆ ರಾಜ್ಯದ ಖಾಯಂ ನಿವಾಸಿಗಳಿಗೆ ಮಾಡಿದ ಉಲ್ಲೇಖಗಳನ್ನು, ಸಂವಿಧಾನ (ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯ) ಆದೇಶ, 1954 ಪ್ರಾರಂಭವಾಗುವುದಕ್ಕೆ ಮುಂಚೆ, ಆ ರಾಜ್ಯದಲ್ಲಿ ಜಾರಿಯಲ್ಲಿದ್ದ ಕಾನೂನುಗಳ ಮೇರೆಗೆ ಆ ರಾಜ್ಯದ ಪ್ರಜೆಗಳೆಂದು ಮಾನ್ಯತೆ ಪಡೆದಿದ್ದ ಅಥವಾ ಆ ರಾಜ್ಯ ವಿಧಾನಮಂಡಲವು ರಚಿಸಿದ ಯಾವುದೇ ಕಾನೂನಿನ ಮೂಲಕ ಆ ರಾಜ್ಯದ ಖಾಯಂ ನಿವಾಸಿಗಳೆಂದು ಮಾನ್ಯತೆ ಪಡೆದಿರುವ ವ್ಯಕ್ತಿಗಳೆಂಬುದಾಗಿ ಅರ್ಥವಿರುವಂತೆ ಅರ್ಥೈಸತಕ್ಕದ್ದು; ಮತ್ತು

(ಇ) ರಾಜ್ಯಪಾಲನಿಗೆ ಮಾಡಿದ ಉಲ್ಲೇಖಗಳು ಜಮ್ಮು ಮತ್ತು ಕಾಶ್ಮೀರ ರಾಜ್ಯದ ರಾಜ್ಯಪಾಲನಿಗೆ ಮಾಡಿದ ಉಲ್ಲೇಖಗಳನ್ನೊಳಗೊಂಡಿರತಕ್ಕದ್ದು:

ಪರಂತು, 1965ನೇ ಇಸವಿಯ ಏಪ್ರಿಲ್ ತಿಂಗಳ 10ನೇ ದಿನಕ್ಕೆ ಮುಂಚಿನ ಯಾವುದೇ ಅವಧಿಗೆ ಸಂಬಂಧಿಸಿದಂತೆ, ಅಂಥ ಉಲ್ಲೇಖಗಳನ್ನು ಜಮ್ಮು ಮತ್ತು ಕಾಶ್ಮೀರ ರಾಜ್ಯದ ಸದರ್-ಈ-ರಿಯಾಸತ್ ಎಂದು ರಾಷ್ಟ್ರಪತಿಯಿಂದ ಮನ್ನಣೆ ಪಡೆದಿರುವ ವ್ಯಕ್ತಿಗೆ ಮಾಡಿದ ಉಲ್ಲೇಖಗಳೆಂಬಂತೆ ಮತ್ತು ಅವು ಸದರ್-ಈ-ರಿಯಾಸತ್‌ನ ಅಧಿಕಾರಗಳನ್ನು ಚಲಾಯಿಸಲು ಸಕ್ಷಮನಾಗಿರುವವನು ಎಂಬುದಾಗಿ ರಾಷ್ಟ್ರಪತಿಯಿಂದ ಮನ್ನಣೆ ಪಡೆದ ಯಾರೇ ವ್ಯಕ್ತಿಗೆ ಮಾಡಿದ ಉಲ್ಲೇಖಗಳನ್ನೊಳಗೊಂಡಿರುವುದಾಗಿ ಅರ್ಥೈಸತಕ್ಕದ್ದು".

**(21) ಭಾಗ XX**

ಅನುಚ್ಛೇದ 368ರಲ್ಲಿ.-

(ಎ) (2)ನೇ ಖಂಡದಲ್ಲಿ ಈ ಮುಂದಿನ ಇನ್ನೊಂದು ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

"ಮತ್ತೂ ಪರಂತು, ಅಂಥ ಯಾವುದೇ ತಿದ್ದುಪಡಿಯು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಸಂಬಂಧಪಟ್ಟಂತೆ 370ನೇ ಅನುಚ್ಛೇದದ (1)ನೇ ಖಂಡದ ಮೇರೆಗೆ ರಾಷ್ಟ್ರಪತಿಯ ಆದೇಶದ ಮೂಲಕ ಅದನ್ನು ಅನ್ವಯಿಸಿದ ಹೊರತು ಪರಿಣಾಮವುಳ್ಳದ್ದಾಗಿರತಕ್ಕದ್ದಲ್ಲ.";

(ಬಿ) (4)ನೇ ಮತ್ತು (5)ನೇ ಖಂಡಗಳನ್ನು ಬಿಟ್ಟುಬಿಡತಕ್ಕದ್ದು ಮತ್ತು (3)ನೇ ಖಂಡದ ನಂತರ ಈ ಮುಂದಿನ ಖಂಡವನ್ನು ಸೇರಿಸತಕ್ಕದ್ದು, ಎಂದರೆ:-

"(4) ಜಮ್ಮು ಮತ್ತು ಕಾಶ್ಮೀರ ರಾಜ್ಯದ ಸಂವಿಧಾನದ ಯಾವುದೇ ಉಪಬಂಧದಲ್ಲಿ ಅಥವಾ ಅದರ ಪರಿಣಾಮದಲ್ಲಿ ಯಾವುದೇ ಬದಲಾವಣೆಯನ್ನು ಮಾಡಲು ಉದ್ದೇಶಿಸಿ ಜಮ್ಮು ಮತ್ತು ಕಾಶ್ಮೀರ ರಾಜ್ಯದ ವಿಧಾನಮಂಡಲವು,-

(ಎ) ರಾಜ್ಯಪಾಲನ ನೇಮಕಕ್ಕೆ, ಅಧಿಕಾರಗಳಿಗೆ, ಪ್ರಕಾರ್ಯಗಳಿಗೆ, ಕರ್ತವ್ಯಗಳಿಗೆ, ಉಪಲಬ್ಧಿಗಳಿಗೆ, ಭತ್ಯೆಗಳಿಗೆ, ವಿಶೇಷಾಧಿಕಾರಗಳಿಗೆ ಅಥವಾ ಉನ್ಮುಕ್ತಿಗಳಿಗೆ; ಅಥವಾ

(ಬಿ) ಜಮ್ಮು ಮತ್ತು ಕಾಶ್ಮೀರ ರಾಜ್ಯ ಸಂವಿಧಾನದ 138ನೆಯ, 139ನೆಯ, 140ನೆಯ ಮತ್ತು 150ನೆಯ ಪ್ರಕರಣಗಳಲ್ಲಿ ನಿರ್ದಿಷ್ಟಪಡಿಸಿರುವ ವಿಷಯಗಳಾದ, ಭಾರತದ ಚುನಾವಣಾ ಆಯೋಗದಿಂದ ಚುನಾವಣೆಗಳ ಅಧೀಕ್ಷಣೆಗೆ, ನಿರ್ದೇಶನಕ್ಕೆ ಮತ್ತು ನಿಯಂತ್ರಣಕ್ಕೆ ತಾರತಮ್ಯ ಮಾಡದೆ ಮತದಾರರ ಪಟ್ಟಿಯಲ್ಲಿ ಸೇರಿಸುವ ಸಲುವಾಗಿ ಅರ್ಹತೆಗೆ ಮತ್ತು ವಯಸ್ಕ ಮತದಾನಕ್ಕೆ ಮತ್ತು ವಿಧಾನ ಪರಿಷತ್ತಿನ ರಚನೆಗೆ

shall have any effect unless such law has, after having been reserved for the consideration of the President, received his assent.".

**(22) PART XXI.—**

(*a*) Omit articles 369, 371, 371A, 372A, 373 and articles 376 to 378A and 392.

(*b*) Article 372.—

(*A*) Omit clauses (2) and (3) ;

(B) references to the laws in force in the territory of India shall include references to *hidayats, ailans, ishtihars,* circulars, *robkars, irshads, yadashts,* State Council Resolutions, Resolutions of the Constituent Assembly, and other instruments having the force of law in the territory of the State of Jammu and Kashmir;

(*C*) references to the commencement of the Constitution shall be construed as references to the commencement of the Constitution (Application to Jammu and Kashmir) Order, 1954 (C.O. 48), *i.e.*, the 14th day of May, 1954.

(*c*) *Article* 374. —

(*A*) Omit clauses (1), (2), (3) and (5);

(*B*) in clause (4), the reference to the authority functioning as the Privy Council of a State shall be construed as a reference to the Advisory Board constituted under the Jammu and Kashmir Constitution Act, Svt. 1996, and references to the commencement of the Constitution shall be construed as references to the commencement of the Constitution (Application to Jammu and Kashmir) Order, 1954, *i.e.*, the 14th day of May, 1954.

**(23) PART XXII.—** Omit articles 394 and 395.

**(24) THIRD SCHEDULE.—** Omit forms V, VI, VII and VIII.

**(25) FIFTH SCHEDULE.—** This Schedule is not applicable to the State of Jammu and Kashmir.

**(26) SIXTH SCHEDULE.—** This Schedule is not applicable to the State of Jammu and Kashmir.

**(27) SEVENTH SCHEDULE.—**

(*a*) List I —Union List:—

(*A*) Omit entry 2A;

(*B*) For entry 3, substitute the following entry, namely :—

"3. Administration of cantonments.":

– ಸಂಬಂಧಿಸಿದಂತೆ ರಚಿಸಿದ ಯಾವುದೇ ಕಾನೂನು, ರಾಷ್ಟ್ರಪತಿಯ ಪರ್ಯಾಲೋಚನೆಗಾಗಿ ಕಾಯ್ದಿರಿಸಿದ್ದು, ನಂತರ ಅಂಥ ಕಾನೂನು ಅವನ ಸಮ್ಮತಿ ಪಡೆದ ಹೊರತು ಯಾವುದೇ ಪರಿಣಾಮವನ್ನು ಉಳ್ಳದ್ದಾಗಿರತಕ್ಕದ್ದಲ್ಲ".

**(22) ಭಾಗ XXI.-**

(ಎ) 369, 371, 371ಎ, 372ಎ, 373 ಮತ್ತು 376 ರಿಂದ 378ಎ ಮತ್ತು 392ನೆಯ ಅನುಚ್ಛೇದಗಳನ್ನು ಬಿಟ್ಟುಬಿಡತಕ್ಕದ್ದು.

(ಬಿ) 372ನೆಯ ಅನುಚ್ಛೇದದಲ್ಲಿ.–

(ಎ) (2) ಮತ್ತು (3)ನೆಯ ಖಂಡಗಳನ್ನು ಬಿಟ್ಟುಬಿಡತಕ್ಕದ್ದು;

(ಬಿ) ಭಾರತದ ರಾಜ್ಯ ಕ್ಷೇತ್ರದಲ್ಲಿ ಜಾರಿಯಲ್ಲಿರುವ ಕಾನೂನುಗಳಿಗೆ ಮಾಡಿದ ಉಲ್ಲೇಖಗಳು, ಹಿದಾಯತುಗಳಿಗೆ, ಐಲಾನುಗಳಿಗೆ, ಇಸ್ತಿಹಾರುಗಳಿಗೆ, ಸುತ್ತೋಲೆಗಳಿಗೆ, ರೂಬ್‌ಕಾರ್‌ಗಳಿಗೆ, ಇರ್‌ಷಾದ್‌ಗಳಿಗೆ, ಯಾದಾಸ್ತುಗಳಿಗೆ, ರಾಜ್ಯ ಪರಿಷತ್ತಿನ ನಿರ್ಣಯಗಳಿಗೆ, ಸಂವಿಧಾನ ಸಭೆಯ ನಿರ್ಣಯಗಳಿಗೆ ಮತ್ತು ಜಮ್ಮು ಮತ್ತು ಕಾಶ್ಮೀರ ರಾಜ್ಯದ ರಾಜ್ಯಕ್ಷೇತ್ರದಲ್ಲಿ ಕಾನೂನಿನ ಬಲವುಳ್ಳ ಇತರೆ ಲಿಖಿತಗಳಿಗೆ ಮಾಡಿದ ಉಲ್ಲೇಖಗಳನ್ನು ಒಳಗೊಳ್ಳತಕ್ಕದ್ದು.

(ಸಿ) ಸಂವಿಧಾನದ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳನ್ನು, 1954ನೇ ಇಸವಿಯ ಸಂವಿಧಾನ (ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯ) ಆದೇಶದ (ಸಿ.ಒ. 48) ಪ್ರಾರಂಭಕ್ಕೆ ಎಂದರೆ, 1954ನೇ ಇಸವಿ ಮೇ ತಿಂಗಳ 14ನೇ ದಿನಕ್ಕೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು.

(ಸಿ) 374ನೇ ಅನುಚ್ಛೇದದಲ್ಲಿ.–

(ಎ) (1)ನೇ, (2)ನೇ, (3)ನೇ ಮತ್ತು (5)ನೇ ಖಂಡಗಳನ್ನು ಬಿಟ್ಟುಬಿಡತಕ್ಕದ್ದು;

(ಬಿ) (4)ನೇ ಖಂಡದಲ್ಲಿ, ರಾಜ್ಯದ ಪ್ರಿವಿಕೌನ್ಸಿಲ್ ಆಗಿ ಕಾರ್ಯನಿರ್ವಹಿಸುತ್ತಿರುವ ಪ್ರಾಧಿಕಾರಕ್ಕೆ ಮಾಡಿದ ಉಲ್ಲೇಖವನ್ನು ಜಮ್ಮು ಮತ್ತು ಕಾಶ್ಮೀರ ಸಂವಿಧಾನ ಅಧಿನಿಯಮ ಸಂವತ್ 1996ರ ಮೇರೆಗೆ ರಚಿತವಾದ ಸಲಹಾ ಮಂಡಳಿಗೆ ಮಾಡಿದ ಉಲ್ಲೇಖವೆಂದು ಅರ್ಥೈಸತಕ್ಕದ್ದು ಮತ್ತು ಸಂವಿಧಾನದ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳನ್ನು, 1954ನೇ ಇಸವಿಯ ಸಂವಿಧಾನ (ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯ) ಆದೇಶದ ಪ್ರಾರಂಭಕ್ಕೆ ಎಂದರೆ, 1954ನೇ ಇಸವಿ ಮೇ 14ನೇ ದಿನಕ್ಕೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು.

**(23) ಭಾಗ XXII**.– 394ನೇ ಮತ್ತು 395ನೇ ಅನುಚ್ಛೇದಗಳನ್ನು ಬಿಟ್ಟುಬಿಡತಕ್ಕದ್ದು.

**(24) ಮೂರನೆಯ ಅನುಸೂಚಿ.**– V, VI, VII ಮತ್ತು VIII ನೇ ನಮೂನೆಗಳನ್ನು ಬಿಟ್ಟುಬಿಡತಕ್ಕದ್ದು.

**(25) ಐದನೆಯ ಅನುಸೂಚಿ.**– ಈ ಅನುಸೂಚಿಯು ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯವಾಗುವುದಿಲ್ಲ.

**(26) ಆರನೆಯ ಅನುಸೂಚಿ**. – ಈ ಅನುಸೂಚಿಯು ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯವಾಗುವುದಿಲ್ಲ.

**(27) ಏಳನೆಯ ಅನುಸೂಚಿ.**–

(ಎ) ಪಟ್ಟಿ I – ಒಕ್ಕೂಟ ಪಟ್ಟಿಯಲ್ಲಿ,–

(ಎ) 2ಎ ನಮೂದನ್ನು ಬಿಟ್ಟುಬಿಡತಕ್ಕದ್ದು;

(ಬಿ) 3ನೇ ನಮೂದಿನ ಬದಲಾಗಿ, ಈ ಮುಂದಿನ ನಮೂದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

"3. ದಂಡು ಪ್ರದೇಶಗಳ ಆಡಳಿತ";

(*C*) Omit entries 8, 9, 34 and 79;

(*D*) In entry 72, the reference to the States shall be construed.—

(*i*) in relation to appeals to the Supreme Court from any decision or order of the High Court of the State of Jammu and Kashmir made in an election petition whereby an election to either House of the Legislature of that State has been called in question, as including a reference to the State of Jammu and Kashmir;

(*ii*) in relation to other matters, as not including a reference to that State;

(*E*) In entry 81, omit "Inter-State migration";

(*F*) For entry 97, substitute the following entry, namely :—

'97. Prevention of activities—

(*a*) involving terrorist acts directed towards overawing the Government as by law established or striking terror in the people or any section of the people or alienating any section of the people or adversely affecting the harmony amongst different sections of the people;

(*b*) directed towards disclaiming, questioning or disrupting the sovereignty and territorial integrity of India or bringing about cession of a part of the territory of India or secession of a part of the territory of India from the Union or causing insult to the Indian National flag, the Indian National Anthem and this Constitution;

taxes on foreign travel by sea or air, on inland air travel and on postal articles, including money orders, phonograms and telegrams.

***Explanation.—*** In this entry, "terrorist act" has the same meaning as in the *Explanation* to article 248.'.

(*b*) Omit List II—State List.

(*c*) List III— Concurrent List.—

(*A*) For entry 1, substitute the following entry, namely :—

"1. Criminal law (excluding offences against laws with respect to any of the matters specified in List I and excluding the use of naval, military or air forces or any other armed forces of the Union in aid of

(ಸಿ) 8, 9, 34 ಮತ್ತು 79ನೇ ನಮೂದುಗಳನ್ನು ಬಿಟ್ಟುಬಿಡತಕ್ಕದ್ದು;

(ಡಿ) 72ನೇ ನಮೂದಿನಲ್ಲಿ, ರಾಜ್ಯಗಳಿಗೆ ಮಾಡಿದ ಉಲ್ಲೇಖಗಳನ್ನು,–

(i) ಜಮ್ಮು ಮತ್ತು ಕಾಶ್ಮೀರ ರಾಜ್ಯದ ವಿಧಾನಮಂಡಲದ ಯಾವುದೇ ಸದನಕ್ಕೆ ನಡೆದ ಚುನಾವಣೆಯನ್ನು ವಿಚಾರಣೆಗೆ ಗುರಿ ಮಾಡಿದ್ದ ಚುನಾವಣಾ ತಕರಾರು ಅರ್ಜಿಯ ಮೇಲೆ ಆ ರಾಜ್ಯದ ಉಚ್ಚ ನ್ಯಾಯಾಲಯವು ನೀಡಿರುವ ಯಾವುದೇ ತೀರ್ಮಾನದ ಅಥವಾ ಆದೇಶದ ಬಗ್ಗೆ ಸರ್ವೋಚ್ಚ ನ್ಯಾಯಾಲಯಕ್ಕೆ ಸಲ್ಲಿಸಿದ ಅಪೀಲುಗಳಿಗೆ ಸಂಬಂಧಪಟ್ಟಂತೆ ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಮಾಡಿದ ಉಲ್ಲೇಖವನ್ನು ಒಳಗೊಂಡಿರುವುದಾಗಿ;

(ii) ಇತರ ವಿಷಯಗಳಿಗೆ ಸಂಬಂಧಪಟ್ಟಂತೆ ಆ ರಾಜ್ಯಕ್ಕೆ ಮಾಡಿದ ಉಲ್ಲೇಖವನ್ನು ಒಳಗೊಂಡಿಲ್ಲವೆಂದು

– ಅರ್ಥೈಸತಕ್ಕದ್ದು;

(ಇ) 81ನೇ ನಮೂದಿನಲ್ಲಿ "ಅಂತರ ರಾಜ್ಯ ವಲಸೆ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(ಎಫ್) 97ನೇ ನಮೂದಿಗೆ ಬದಲಾಗಿ ಈ ಮುಂದಿನ ನಮೂದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

'97. ಚಟುವಟಿಕೆಗಳಿಗೆ ಪ್ರತಿಬಂಧ–

(ಎ) ಕಾನೂನಿನ ಮೂಲಕ ಸ್ಥಾಪಿತವಾದ ಸರ್ಕಾರಕ್ಕೆ ಭಯ ಹುಟ್ಟಿಸುವ ಉದ್ದೇಶವುಳ್ಳ ಭಯೋತ್ಪಾದಕ ಕೃತ್ಯಗಳನ್ನು ಒಳಗೊಂಡ ಅಥವಾ ಜನರಲ್ಲಿ ಅಥವಾ ಜನರ ಯಾವುದೇ ವರ್ಗದಲ್ಲಿ ಭಯವನ್ನುಂಟುಮಾಡುವ ಅಥವಾ ಜನರ ಯಾವುದೇ ವರ್ಗವನ್ನು ದೂರ ಮಾಡುವ ಅಥವಾ ಜನರ ವಿವಿಧ ವರ್ಗಗಳ ನಡುವಿನ ಸಾಮರಸ್ಯಕ್ಕೆ ಪ್ರತಿಕೂಲ ಪರಿಣಾಮವನ್ನುಂಟುಮಾಡುವ ಚಟುವಟಿಕೆಗಳನ್ನು ಪ್ರತಿಬಂಧಿಸುವುದು;

(ಬಿ) ಭಾರತದ ಸಾರ್ವಭೌಮತ್ವವನ್ನು ಮತ್ತು ಅದರ ರಾಜ್ಯಕ್ಷೇತ್ರೀಯ ಅಖಂಡತೆಯನ್ನು ನಿರಾಕರಿಸುವ ಅಥವಾ ಪ್ರಶ್ನಿಸುವ ಅಥವಾ ವಿಚ್ಛಿನ್ನಗೊಳಿಸುವ ಉದ್ದೇಶದ ಅಥವಾ ಭಾರತದ ರಾಜ್ಯಕ್ಷೇತ್ರದ ಒಂದು ಭಾಗವನ್ನು ಬಿಟ್ಟುಕೊಡುವ ಅಥವಾ ಒಕ್ಕೂಟದಿಂದ ಭಾರತದ ರಾಜ್ಯಕ್ಷೇತ್ರದ ಒಂದು ಭಾಗವನ್ನು ಬೇರ್ಪಡಿಸುವ ಅಥವಾ ಭಾರತದ ರಾಷ್ಟ್ರಧ್ವಜಕ್ಕೆ ಮತ್ತು ಭಾರತದ ರಾಷ್ಟ್ರಗೀತೆಗೆ ಮತ್ತು ಈ ಸಂವಿಧಾನಕ್ಕೆ ಅಪಮಾನ ಮಾಡುವ ಉದ್ದೇಶದ ಇತರ ಚಟುವಟಿಕೆಗಳನ್ನು ಪ್ರತಿಬಂಧಿಸುವುದು;

– ಸಮುದ್ರ ಅಥವಾ ವಿಮಾನದ ಮೂಲಕ ವಿದೇಶ ಪ್ರಯಾಣದ, ಅಂತರ ದೇಶೀಯ ವಿಮಾನ ಪ್ರಯಾಣದ ಮತ್ತು ಮನಿಯಾರ್ಡರುಗಳನ್ನು ಒಳಗೊಂಡು ಅಂಚೆ ವಸ್ತುಗಳ, ಫೋನೋಗ್ರಾಂಗಳ ಮತ್ತು ಟೆಲಿಗ್ರಾಂಗಳ ಮೇಲಿನ ತೆರಿಗೆಗಳು".

**ವಿವರಣೆ.**– ಈ ನಮೂದಿನಲ್ಲಿ, "ಭಯೋತ್ಪಾದಕ ಕೃತ್ಯ" ಎಂಬ ಪದವು 248ನೇ ಅನುಚ್ಛೇದದ ವಿವರಣೆಯಲ್ಲಿರುವ ಅದೇ ಅರ್ಥವನ್ನು ಹೊಂದಿದೆ'.

(ಬಿ) ಪಟ್ಟಿ II – ರಾಜ್ಯಪಟ್ಟಿಯನ್ನು ಬಿಟ್ಟುಬಿಡತಕ್ಕದ್ದು.

(ಸಿ) ಪಟ್ಟಿ III – ಸಮವರ್ತಿ ಪಟ್ಟಿ,–

(ಎ) 1ನೇ ನಮೂದಿನ ಬದಲಾಗಿ, ಈ ಮುಂದಿನ ನಮೂದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

"1. ಕ್ರಿಮಿನಲ್ ಕಾನೂನು (ಪಟ್ಟಿ Iರಲ್ಲಿ ನಿರ್ದಿಷ್ಟಪಡಿಸಿದ ವಿಷಯಗಳಲ್ಲಿ ಯಾವುದೇ ವಿಷಯಕ್ಕೆ ಸಂಬಂಧಿಸಿದ ಕಾನೂನುಗಳಿಗೆ ವಿರುದ್ಧವಾದ ಅಪರಾಧಗಳನ್ನು ಹೊರತುಪಡಿಸಿ ಮತ್ತು ಸಿವಿಲ್ ಅಧಿಕಾರಕ್ಕೆ ನೆರವಾಗುವ ಒಕ್ಕೂಟದ ನೌಕಾ, ಭೂ ಮತ್ತು ವಾಯುಬಲಗಳ ಅಥವಾ ಇತರ

the civil power) in so far as such criminal law relates to offences against laws with respect to any of the matters specified in this List.";

(*B*) for entry 2, substitute the following entry, namely:—

"2. Criminal procedure (including prevention of offences and constitution and organisation of criminal courts, except the Supreme Court and the High Court) in so far as it relates to,—

(*i*) offences against laws with respect to any matters being matters with respect to which Parliament has power to make laws; and

(*ii*) administration of oaths and taking of affidavits by diplomatic and consular officers in any foreign country.";

(*C*) omit entry 3, entries 5 to 10 (both inclusive), entries 14, 15, 17, 20, 21, 27, 28, 29, 31, 32, 37, 38, 41 and 44;

(*D*) entries 11A, 17A, 17B, 20A and 33A are not applicable to the State of Jammu and Kashmir;

(*E*) for entry 12, substitute the following entry, namely :—

"12. Evidence and oaths in so far as they relate to,—

(*i*) administration of oaths and taking of affidavits by diplomatic and consular officers in any foreign country; and

(*ii*) any other matter being matters with respect to which Parliament has power to make laws.";

(*F*) for entry 13, substitute the following entry, namely :—

"13. Civil procedure in so far as it relates to administration of oaths and taking of affidavits by diplomatic and consular officers in any foreign country.";

(*G*) for entry 25, substitute the following entry, namely :—

"25. Vocational and technical training of labour.";

(*H*) for entry 30, substitute the following entry, namely:—

ಯಾವುದೇ ಸಶಸ್ತ್ರ ಬಲಗಳ ಬಳಕೆಯನ್ನು ಹೊರತುಪಡಿಸಿ) ಅಂಥ ಕ್ರಿಮಿನಲ್ ಕಾನೂನು, ಈ ಪಟ್ಟಿಯಲ್ಲಿ ನಿರ್ದಿಷ್ಟಪಡಿಸಿರುವ ವಿಷಯಗಳಲ್ಲಿ ಯಾವುದೇ ವಿಷಯಕ್ಕೆ ಸಂಬಂಧಿಸಿದ ಕಾನೂನುಗಳಿಗೆ ವಿರುದ್ಧವಾದ ಅಪರಾಧಗಳಿಗೆ ಸಂಬಂಧಪಡುವಷ್ಟರ ಮಟ್ಟಿಗೆ.";

(ಬಿ) 2ನೇ ನಮೂದಿಗೆ ಬದಲಾಗಿ, ಈ ಮುಂದಿನ ನಮೂದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

"2. ದಂಡ ಪ್ರಕ್ರಿಯೆ (ಅಪರಾಧಗಳನ್ನು ತಡೆಗಟ್ಟುವುದು ಮತ್ತು ಸರ್ವೋಚ್ಚ ನ್ಯಾಯಾಲಯವನ್ನು ಮತ್ತು ಉಚ್ಚ ನ್ಯಾಯಾಲಯವನ್ನು ಹೊರತುಪಡಿಸಿ, ಕ್ರಿಮಿನಲ್ ನ್ಯಾಯಾಲಯಗಳ ರಚನೆ ಮತ್ತು ಸಂಘಟನೆಯೂ ಸೇರಿದಂತೆ) ಅದು,-

(i) ಕಾನೂನುಗಳನ್ನು ರಚಿಸುವುದಕ್ಕೆ ಸಂಸತ್ತಿಗೆ ಅಧಿಕಾರ ಇರುವಂತಹ ವಿಷಯಗಳಾಗಿರುವ ಯಾವುವೇ ವಿಷಯಗಳಿಗೆ ಸಂಬಂಧಪಟ್ಟ ಕಾನೂನುಗಳಿಗೆ ವಿರುದ್ಧವಾದ ಅಪರಾಧಗಳಿಗೆ ಸಂಬಂಧಪಡುವಷ್ಟರಮಟ್ಟಿಗೆ; ಮತ್ತು

(ii) ಯಾವುದೇ ವಿದೇಶಿ ರಾಷ್ಟ್ರದಲ್ಲಿರುವ ರಾಜತಾಂತ್ರಿಕ ಮತ್ತು ಕಾನ್ಸುಲರ್ ಅಧಿಕಾರಿಗಳು ಪ್ರಮಾಣವಚನಗಳನ್ನು ಬೋಧಿಸುವುದಕ್ಕೆ ಮತ್ತು ಅವರು ಶಪಥ ಪತ್ರಗಳನ್ನು ತೆಗೆದುಕೊಳ್ಳುವುದಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ.";

(ಸಿ) 3ನೇ ನಮೂದನ್ನು, 5 ರಿಂದ 10ರ (ಎರಡೂ ಸೇರಿ) ವರೆಗಿನ ನಮೂದುಗಳನ್ನು, 14, 15, 17, 20, 21, 27, 28, 29, 31, 32, 37, 38, 41 ಮತ್ತು 44ನೇ ನಮೂದುಗಳನ್ನು ಬಿಟ್ಟುಬಿಡತಕ್ಕದ್ದು;

(ಡಿ) 11ಎ, 17ಎ, 17ಬಿ, 20ಎ ಮತ್ತು 33ಎ ನಮೂದುಗಳು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯವಾಗುವುದಿಲ್ಲ;

(ಇ) 12ನೇ ನಮೂದಿಗೆ ಬದಲಾಗಿ, ಈ ಮುಂದಿನ ನಮೂದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

"12. ಸಾಕ್ಷ್ಯ ಮತ್ತು ಪ್ರಮಾಣವಚನಗಳು, ಅವು,-

(i) ಯಾವುದೇ ವಿದೇಶಿ ರಾಷ್ಟ್ರದಲ್ಲಿರುವ ರಾಜತಾಂತ್ರಿಕ ಮತ್ತು ಕಾನ್ಸುಲರ್ ಅಧಿಕಾರಿಗಳು ಪ್ರಮಾಣವಚನಗಳನ್ನು ಬೋಧಿಸುವುದಕ್ಕೆ ಮತ್ತು ಅವರು ಶಪಥ ಪತ್ರಗಳನ್ನು ತೆಗೆದುಕೊಳ್ಳುವುದಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ; ಮತ್ತು

(ii) ಕಾನೂನುಗಳನ್ನು ರಚಿಸುವುದಕ್ಕೆ ಸಂಸತ್ತಿಗೆ ಅಧಿಕಾರ ಇರುವಂತಹ ವಿಷಯಗಳಾಗಿರುವ ಯಾವುದೇ ಇತರೆ ವಿಷಯಕ್ಕೆ ಸಂಬಂಧಪಡುವಷ್ಟರಮಟ್ಟಿಗೆ";

(ಎಫ್) 13ನೇ ನಮೂದಿಗೆ ಬದಲಾಗಿ ಈ ಮುಂದಿನ ನಮೂದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

"13. ಸಿವಿಲ್ ಪ್ರಕ್ರಿಯೆ ಅದು, ಯಾವುದೇ ವಿದೇಶಿ ರಾಷ್ಟ್ರದಲ್ಲಿರುವ ರಾಜತಾಂತ್ರಿಕ ಮತ್ತು ಕಾನ್ಸುಲರ್ ಅಧಿಕಾರಿಗಳು ಪ್ರಮಾಣ ವಚನವನ್ನು ಬೋಧಿಸುವುದಕ್ಕೆ ಮತ್ತು ಅವರು ಶಪಥ ಪತ್ರಗಳನ್ನು ತೆಗೆದುಕೊಳ್ಳುವುದಕ್ಕೆ ಸಂಬಂಧಪಡುವಷ್ಟರಮಟ್ಟಿಗೆ.";

(ಜಿ) 25ನೇ ನಮೂದಿನ ಬದಲಾಗಿ, ಈ ಮುಂದಿನ ನಮೂದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

"25. ಕಾರ್ಮಿಕರಿಗೆ ವೃತ್ತಿ ಮತ್ತು ತಾಂತ್ರಿಕ ತರಬೇತಿ";

(ಹೆಚ್) 30ನೇ ನಮೂದಿಗೆ ಬದಲಾಗಿ, ಈ ಮುಂದಿನ ನಮೂದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

"30. Vital statistics in so far as they relate to births and deaths including registration of births and deaths.";

(*I*) for entry 42, substitute the following entry, namely:—

"42 Acquisition and requisitioning of property, so far as regards acquisition of any property covered by entry 67 of List I or entry 40 of List III or of any human work of art which has artistic or aesthetic value.";

(*J*) in entry 45, for "List II or List III" substitute "this List".

**(28) NINTH SCHEDULE.—**

(*a*) After entry 64, add the following entries, namely :—

"64A. The Jammu and Kashmir State Kuth Act (No. 1 of Svt.1978).

64B. The Jammu and Kashmir Tenancy Act (No. II of Svt. 1980).

64C. The Jammu and Kashmir Alienation of Land Act (No. V of Svt. 1995).

64D. The Jammu and Kashmir Big Landed Estates Abolition Act (No. XVII of Svt. 2007).

64E. Order No. 6-H of 1951, dated the 10th March, 1951, regarding Resumption of Jagirs and other assignments of land revenue, etc.

64F. The Jammu and Kashmir Restitution of Mortgaged Properties Act, 1976 (Act XIV of 1976).

64G. The Jammu and Kashmir Debtors' Relief Act, 1976 (Act XV of 1976).".

(*b*) entries 65 to 86 are not applicable to the State of Jammu and Kashmir;

(*c*) after entry 86, insert the following entry, namely:—

"87. The Representation of the People Act, 1951 (Central Act 43 of 1951), the Representation of the People (Amendment) Act, 1974 (Central Act 58 of 1974) and the Election Laws (Amendment) Act, 1975 (Central Act 40 of 1975).";

(*d*) after entry 91, insert the following entry, namely:—

"92. The maintenance of Internal Security Act, 1971 (Central Act 26 of 1971).";

(*e*) after entry 129, insert the following entry, namely :—

"130. The Prevention of Publication of Objectionable Matter Act, 1976 (Central Act 27 of 1976).";

"30. ಜನನ-ಮರಣ ಅಂಕಿಅಂಶಗಳು, ಅವು ಜನನ ಮತ್ತು ಮರಣಗಳ ನೋಂದಣಿಯೂ ಸೇರಿದಂತೆ, ಜನನ ಮತ್ತು ಮರಣಗಳಿಗೆ ಸಂಬಂಧಪಡುವಷ್ಟರ ಮಟ್ಟಿಗೆ.";

(ಐ) 42ನೇ ನಮೂದಿಗೆ ಬದಲಾಗಿ ಈ ಮುಂದಿನ ನಮೂದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

"42. ಸ್ವತ್ತಿನ ಆರ್ಜನೆ ಮತ್ತು ಕಡ್ಡಾಯ ಕೋರಿಕೆ, ಪಟ್ಟಿ Iರ 67ನೇ ನಮೂದಿನಲ್ಲಿ ಅಥವಾ ಪಟ್ಟಿ IIIರ 40ನೇ ನಮೂದಿನಲ್ಲಿ ಒಳಗೊಂಡಿರುವ ಯಾವುದೇ ಸ್ವತ್ತಿನ ಅಥವಾ ಕಲಾತ್ಮಕ ಅಥವಾ ಸೌಂದರ್ಯಾತ್ಮಕ ಮಹತ್ವವುಳ್ಳ ಯಾವುದೇ ಮಾನವನಿರ್ಮಿತ ಕಲಾಕೃತಿಯ ಆರ್ಜನೆಗೆ ಸಂಬಂಧಪಡುವಷ್ಟರ ಮಟ್ಟಿಗೆ.";

(ಜೆ) 45ನೇ ನಮೂದಿನಲ್ಲಿ "ಪಟ್ಟಿ II ಅಥವಾ ಪಟ್ಟಿ III ರಲ್ಲಿ" ಎಂಬುದಕ್ಕೆ ಬದಲಾಗಿ "ಈ ಪಟ್ಟಿಯಲ್ಲಿ" ಎಂಬ ಪದವನ್ನು ಪ್ರತ್ಯಾಯೋಜಿಸತಕ್ಕದ್ದು.

**(28) ಒಂಬತ್ತನೇ ಅನುಸೂಚಿ.-**

(ಎ) 64ನೇ ನಮೂದಿನ ತರುವಾಯ ಈ ಮುಂದಿನ ನಮೂದುಗಳನ್ನು ಸೇರಿಸತಕ್ಕದ್ದು, ಎಂದರೆ:-

"64ಎ. ಜಮ್ಮು ಮತ್ತು ಕಾಶ್ಮೀರ ರಾಜ್ಯ ಕುಥ್ ಅಧಿನಿಯಮ (ಸಂವತ್ 1978ರ ಸಂಖ್ಯೆ 1).

64ಬಿ. ಜಮ್ಮು ಮತ್ತು ಕಾಶ್ಮೀರ ಗೇಣಿದಾರಿಕೆ ಅಧಿನಿಯಮ (ಸಂವತ್ 1980ರ ಸಂಖ್ಯೆ 11).

64ಸಿ. ಜಮ್ಮು ಮತ್ತು ಕಾಶ್ಮೀರ ಭೂ ಪರಭಾರೆ ಅಧಿನಿಯಮ (ಸಂವತ್ 1995ರ ಸಂಖ್ಯೆ V).

64ಡಿ. ಜಮ್ಮು ಮತ್ತು ಕಾಶ್ಮೀರ ದೊಡ್ಡ ಭೂ ಎಸ್ಟೇಟುಗಳ ರದ್ದಿಯಾತಿ ಅಧಿನಿಯಮ (ಸಂವತ್ 2007ರ ಸಂಖ್ಯೆ XVII).

64ಇ. ಜಹಗೀರುಗಳ ಮತ್ತು ಭೂಕಂದಾಯ, ಇತ್ಯಾದಿಗಳ ಹಸ್ತಾಂತರಣದ ಪುನರ್ವಶ ಬಗೆಗಿನ ಆದೇಶ ಸಂಖ್ಯೆ 6-ಹೆಚ್/ 1951 10ನೇ ಮಾರ್ಚ್ 1951.

64ಎಫ್. ಜಮ್ಮು ಮತ್ತು ಕಾಶ್ಮೀರ ಅಡಮಾನ ಸ್ವತ್ತುಗಳ ಪೂರ್ವಸ್ಥಿತಿ ಪ್ರಾಪ್ತಿ ಅಧಿನಿಯಮ, 1976 (1976ರ ಅಧಿನಿಯಮ XIV).

64ಜಿ. ಜಮ್ಮು ಮತ್ತು ಕಾಶ್ಮೀರ ಋಣ ಪರಿಹಾರ ಅಧಿನಿಯಮ, 1976 (1976ರ ಅಧಿನಿಯಮ ಸಂಖ್ಯೆ XV).";

(ಬಿ) 65 ರಿಂದ 86ರ ವರೆಗಿನ ನಮೂದುಗಳು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಅನ್ವಯವಾಗುವುದಿಲ್ಲ;

(ಸಿ) 86ನೇ ನಮೂದಿನ ನಂತರ, ಈ ಮುಂದಿನ ನಮೂದನ್ನು ಸೇರಿಸತಕ್ಕದ್ದು, ಎಂದರೆ:-

"87. ಜನತಾ ಪ್ರಾತಿನಿಧ್ಯ ಅಧಿನಿಯಮ, 1951 (1951ರ ಕೇಂದ್ರ ಅಧಿನಿಯಮ 43), ಜನತಾ ಪ್ರಾತಿನಿಧ್ಯ (ತಿದ್ದುಪಡಿ) ಅಧಿನಿಯಮ, 1974 (1974ರ ಕೇಂದ್ರ ಅಧಿನಿಯಮ 58) ಮತ್ತು ಚುನಾವಣಾ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 1975 (1975ರ ಕೇಂದ್ರ ಅಧಿನಿಯಮ 40).";

(ಡಿ) 91ನೇ ನಮೂದಿನ ನಂತರ, ಈ ಮುಂದಿನ ನಮೂದನ್ನು ಸೇರಿಸತಕ್ಕದ್ದು, ಎಂದರೆ:-

"92. ಆಂತರಿಕ ಭದ್ರತೆ ನಿರ್ವಹಣೆ ಅಧಿನಿಯಮ, 1971 (1971ರ ಕೇಂದ್ರ ಅಧಿನಿಯಮ 26).";

(ಇ) 129ನೇ ನಮೂದಿನ ನಂತರ, ಈ ಮುಂದಿನ ನಮೂದನ್ನು ಸೇರಿಸತಕ್ಕದ್ದು, ಎಂದರೆ:-

"130. ಆಕ್ಷೇಪಾರ್ಹ ವಿಷಯಗಳ ಪ್ರಕಟಣಾ ಪ್ರತಿಬಂಧಕ ಅಧಿನಿಯಮ, 1976 (1976ರ ಕೇಂದ್ರ ಅಧಿನಿಯಮ 27).";

(*f*) after insertion of the entries 87, 92 and 130 as indicated above, renumber entries 87 to 188 as entries 65 to 166 respectively.

**(29) TENTH SCHEDULE.—**

(*a*) for the brackets, words and figures "[Articles 102(2) and 191(2)]", the brackets, word and figures "[Article 102(2)]" shall be substituted;

(*b*) in clause (*a*) of paragraph 1, the words "or the Legislative Assembly or, as the case may be, either House of the Legislature of a State" shall be omitted;

(*c*) in paragraph 2,—

(*i*) in sub-paragraph (1), in sub-clause (ii) of clause (*b*) of the *Explanation,* the words and figures "or, as the case may be, article 188" shall be omitted;

(*ii*) in sub-paragraph (3), the words and figures "or, as the case may be, article 188" shall be omitted;

(*iii*) in sub-paragraph (4), the reference to the commencement of the Constitution (Fifty-second Amendment) Act, 1985 shall be construed as a reference to the commencement of the Constitution (Application to Jammu and Kashmir) Amendment Order, 1989;

(*d*) in paragraph 5, the words "or the Chairman or the Deputy Chairman of the Legislative Council of a State or the Speaker or the Deputy Speaker of the Legislative Assembly of a State" shall be omitted;

(*e*) in sub-paragraph (*2*) of paragraph 6, the words and figures "or, as the case may be, proceedings in the Legislature of a State within the meaning of article 212" shall be omitted;

(*f*) in sub-paragraph (*3*) of paragraph 8, the words and figures "or, as the case may be, article 194," shall be omitted.

* * * * *

(ಎಫ್) ಮೇಲೆ ಸೂಚಿಸಿದಂತೆ 87, 92 ಮತ್ತು 130ನೇ ನಮೂದುಗಳನ್ನು ಸೇರಿಸಿದ ನಂತರ, 87 ರಿಂದ 188ರ ವರೆಗಿನ ನಮೂದುಗಳಿಗೆ ಅನುಕ್ರಮವಾಗಿ 65 ರಿಂದ 166 ನಮೂದುಗಳೆಂದು ಪುನರ್‌ಸಂಖ್ಯೆ ನೀಡತಕ್ಕದ್ದು.

**(29) ಹತ್ತನೆಯ ಅನುಸೂಚಿ.-**

(ಎ) "[ಅನುಚ್ಛೇದಗಳು 102(2) ಮತ್ತು 191(2)]" ಎಂಬ ಆವರಣಗಳಿಗೆ, ಪದಗಳಿಗೆ, ಮತ್ತು ಅಂಕಿಗಳಿಗೆ ಬದಲಾಗಿ, "[ಅನುಚ್ಛೇದ 102 (2)]" ಎಂಬ ಆವರಣಗಳನ್ನು, ಪದವನ್ನು ಮತ್ತು ಅಂಕಿಗಳನ್ನು ಪ್ರತ್ಯಾಯೋಜಿಸತಕ್ಕದ್ದು;

(ಬಿ) 1ನೇ ಪ್ಯಾರಾದ (ಎ) ಖಂಡದಲ್ಲಿ "ಅಥವಾ ಒಂದು ರಾಜ್ಯದ ವಿಧಾನಸಭೆ ಅಥವಾ, ಸಂದರ್ಭಾನುಸಾರ ಆ ರಾಜ್ಯದ ವಿಧಾನಮಂಡಲದ ಎರಡೂ ಸದನಗಳು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(ಸಿ) 2ನೇ ಪ್ಯಾರಾದಲ್ಲಿ,-

(i) (1)ನೇ ಉಪ-ಪ್ಯಾರಾದಲ್ಲಿ, ವಿವರಣೆಯ (ಬಿ) ಖಂಡದ (ii)ನೇ ಉಪಖಂಡದಲ್ಲಿ, "ಅಥವಾ, ಸಂದರ್ಭಾನುಸಾರ 188ನೆಯ ಅನುಚ್ಛೇದದ" ಎಂಬ ಪದಗಳನ್ನು ಮತ್ತು ಅಂಕಿಗಳನ್ನು ಬಿಟ್ಟುಬಿಡತಕ್ಕದ್ದು;

(ii) (3)ನೇ ಉಪ-ಪ್ಯಾರಾದಲ್ಲಿ, "ಅಥವಾ, ಸಂದರ್ಭಾನುಸಾರ 188ನೆಯ ಅನುಚ್ಛೇದದ" ಎಂಬ ಪದಗಳನ್ನು ಮತ್ತು ಅಂಕಿಗಳನ್ನು ಬಿಟ್ಟುಬಿಡತಕ್ಕದ್ದು;

(iii) (4)ನೇ ಉಪ-ಪ್ಯಾರಾದಲ್ಲಿ, ಸಂವಿಧಾನ (ಐವತ್ತೆರಡನೇ ತಿದ್ದುಪಡಿ) ಅಧಿನಿಯಮ, 1985ರ ಪ್ರಾರಂಭಕ್ಕೆ ಮಾಡಿದ ಉಲ್ಲೇಖವನ್ನು, ಸಂವಿಧಾನ (ಜಮ್ಮು ಮತ್ತು ಕಾಶ್ಮೀರಕ್ಕೆ ಅನ್ವಯ) ತಿದ್ದುಪಡಿ ಆದೇಶ, 1989ರ ಪ್ರಾರಂಭಕ್ಕೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು;

(ಡಿ) 5ನೇ ಪ್ಯಾರಾದಲ್ಲಿ "ಅಥವಾ ಒಂದು ರಾಜ್ಯದ ವಿಧಾನ ಪರಿಷತ್ತಿನ ಸಭಾಪತಿಯ ಅಥವಾ ಉಪ-ಸಭಾಪತಿಯ ಅಥವಾ ಒಂದು ರಾಜ್ಯದ ವಿಧಾನಸಭೆಯ ಅಧ್ಯಕ್ಷನ ಅಥವಾ ಉಪಾಧ್ಯಕ್ಷನ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(ಇ) 6ನೇ ಪ್ಯಾರಾದ (2)ನೇ ಉಪ-ಪ್ಯಾರಾದಲ್ಲಿ "ಅಥವಾ, ಸಂದರ್ಭಾನುಸಾರ, 212ನೇ ಅನುಚ್ಛೇದದ ಅರ್ಥ ವ್ಯಾಪ್ತಿಯೊಳಗೆ ಒಂದು ರಾಜ್ಯದ ವಿಧಾನಮಂಡಲದ ವ್ಯವಹರಣೆಗಳೆಂದು" ಎಂಬ ಪದಗಳನ್ನು ಮತ್ತು ಅಂಕಿಗಳನ್ನು ಬಿಟ್ಟುಬಿಡತಕ್ಕದ್ದು;

(ಎಫ್) 8ನೇ ಪ್ಯಾರಾದ (3)ನೇ ಉಪ-ಪ್ಯಾರಾದಲ್ಲಿ "ಅಥವಾ, ಸಂದರ್ಭಾನುಸಾರ, 194ನೇ ಅನುಚ್ಛೇದದ" ಎಂಬ ಪದಗಳನ್ನು ಮತ್ತು ಅಂಕಿಗಳನ್ನು ಬಿಟ್ಟುಬಿಡತಕ್ಕದ್ದು.

* * * * *

Director, Printing, Publications & Stationery - Copies - P2